# ಹೈದರಾಬಾದ್ ಕರ್ನಾಟಕದ ಕಥನ ಸಾಹಿತ್ಯದಲ್ಲಿ ಪ್ರಾದೇಶಿಕ ಸಂವೇದನೆ

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸುತ್ತಿರುವ ಮಹಾಪ್ರಬಂಧ)



ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೧೦

# ಹೈದರಾಬಾದ್ ಕರ್ನಾಟಕದ ಕಥನ ಸಾಹಿತ್ಯದಲ್ಲಿ ಪ್ರಾದೇಶಿಕ ಸಂವೇದನೆ

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸುತ್ತಿರುವ ಮಹಾಪ್ರಬಂಧ)



ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೦

# ಪರಿವಿಡಿ

# ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ - ವ್ಯಾಪ್ತಿ ಮತ್ತು ಪೂರ್ವಪ್ರಮೇಯ

## ೧.೧. ಉದ್ದೇಶ - ವ್ಯಾಪ್ತಿ ಮತ್ತು ಪೂರ್ವಪ್ರಮೇಯ

ಭಾರತದ ಇತಿಹಾಸದಲ್ಲಿ ಬ್ರಿಟೀಷರ ವಿರುದ್ಧದ ಸ್ವಾತಂತ್ರ್ಯ ಹೋರಾಟ ಮಹತ್ವದ ಸಂಗತಿ. ಬ್ರಿಟೀಷ್ ಸರ್ಕಾರದ ಆಳ್ವಿಕೆ ಭಾರತೀಯ ಸಾಮಾಜಿಕ ಬದುಕಿನಲ್ಲಿ ಅನೇಕ ಬದಲಾವಣೆಗಳಿಗೆ ಕಾರಣವಾದಂತೆ, ಬಿಕ್ಕಟ್ಟುಗಳಿಗೂ ಕಾರಣವಾಯಿತು. ಸ್ವಾತಂತ್ರ್ಯ ಹೋರಾಟಕ್ಕೆ ಅಗತ್ಯವಾದ ಜಾಗೃತಿ, ಪ್ರೇರಣೆಯನ್ನು ಮೂಡಿಸುವ ಮಹತ್ವದ ಹೊಣೆಯನ್ನು ಪತ್ರಿಕೆಗಳು, ಸಾಹಿತ್ಯಿಕ ರಚನೆಗಳು ನಿರ್ವಹಿಸಿದವು. ಸ್ವಾತಂತ್ರ್ಯ ಹೋರಾಟ ಜನ ಬದುಕಿನ ಮೇಲೆ ಉಂಟುಮಾಡಿದ ಪರಿಣಾಮ ಹಾಗೂ ಸ್ವಾತಂತ್ರ್ಯ ನಂತರದ ಭ್ರಮನಿರಸನಗಳು ಸಾಹಿತ್ಯಿಕ ಅಭಿವ್ಯಕ್ತಿಯನ್ನು ಪಡೆದುಕೊಂಡವು. ಸಮಗ್ರ ಕರ್ನಾಟಕದ ಸಾಹಿತ್ಯಿಕ ರಚನೆಯಲ್ಲಿ ಸ್ವಾತಂತ್ರ್ಯ ಹೋರಾಟಕ್ಕೆ ಸಂಬಂಧಿಸಿದಂತೆ ಈ ಎಲ್ಲಾ ಮಹತ್ವದ ಸಂಗತಿಗಳು ಕಂಡು ಬರುತ್ತವೆ ಎಂದು ಹೇಳಲಾಗದು. ಭಾರತದ ಸ್ವಾತಂತ್ರ್ಯ ಹೋರಾಟಕ್ಕೆ ತಮ್ಮದೇ ಆದ ಪ್ರತಿಕ್ರಿಯೆ ನೀಡಲಾಗದೆ ಉಳಿದ ಪ್ರದೇಶಗಳ ಮೂಲಕವೂ ಸ್ವಾತಂತ್ರ್ಯ ಹೋರಾಟದಂತಹ ವಿಷಯಗಳು ಮಹತ್ವ ಪಡೆಯುತ್ತವೆ. ಈ ಹಿನ್ನೆಲೆಯಲ್ಲಿ ಭಾರತ ಸ್ವಾತಂತ್ರ್ಯ ಸಂಗ್ರಾಮಕ್ಕೆ ನಿಜಾಂ ಆಳ್ವಿಕೆಯ ಅಧೀನದಲ್ಲಿದ್ದ ಹೈದರಾಬಾದ್ ಕರ್ನಾಟಕ ಪ್ರದೇಶ ಪ್ರತಿಕ್ರಿಯಾ ಹೀನ ಪರಿಸ್ಥಿತಿಯನ್ನು ಅನುಭವಿಸಿದ್ದು ಮಹತ್ವದ ವಿಷಯವಾಗಿಯೇ ಪರಿಗಣಿತವಾಗುತ್ತದೆ.

ಬೀದರ್, ಗುಲ್ಬರ್ಗಾ, ರಾಯಚೂರು ಜಿಲ್ಲೆಗಳನ್ನೊಳಗೊಂಡ ಪ್ರದೇಶವೇ 'ಹೈದರಾಬಾದ್ ಕರ್ನಾಟಕ'. ಭಾರತ ಸ್ವಾತಂತ್ರ್ಯ ಪಡೆದ ಸಂದರ್ಭದಲ್ಲಿ ಕರ್ನಾಟಕದ ಬೇರೆ ಬೇರೆ ಪ್ರದೇಶಗಳು ಸ್ವಾತಂತ್ರ್ಯವನ್ನು ಪಡೆದವು. ಸ್ವಾತಂತ್ರ್ಯದಿಂದ ವಂಚಿತವಾದ ಹೈದರಾಬಾದ್ ಕರ್ನಾಟಕ ನಿಜಾಂ ಆಳ್ವಿಕೆಯ ಅಧೀನದಿಂದ ಹೊರಬರಲು ಪ್ರತ್ಯೇಕವಾದ ಹೋರಾಟಕ್ಕೆ ಸಜ್ಜುಗೊಂಡಿತು. ಸ್ಥಳೀಯ ಜನರು ನಿಜಾಂ ಆಳ್ವಿಕೆಯಿಂದ ಹೊರಬಂದು ಕರ್ನಾಟಕದ ಇತರ ಪ್ರದೇಶಗಳಂತೆ ಸ್ವಾತಂತ್ರ್ಯದ ಅನುಭವ ಪಡೆಯಲು ಮತ್ತೊಂದು ವರ್ಷದ ಕಾಲಾವಧಿಯೇ ಸರಿಯಿತು. ಸ್ವಾತಂತ್ರ್ಯ ಭಾರತದಲ್ಲಿ ಒಂದಾಗಲು ಈ ಪ್ರದೇಶದ

ಜನತೆ ನಡೆಸಿದ ಹೋರಾಟ ಕೇವಲ ಸ್ಥಳೀಯ ಹೋರಾಟವಲ್ಲ. ವಿಶಾಲಾರ್ಥದಲ್ಲಿ ಇದು ಭಾರತ ಸ್ವಾತಂತ್ರ್ಯ ಹೋರಾಟ ಪಡೆದ ಮಹತ್ವವನ್ನೇ ಪಡೆಯುತ್ತದೆ. ಈ ಪ್ರದೇಶದ ಜನತೆ ಸಾಂಸ್ಕೃತಿಕವಾಗಿ, ಆಡಳಿತಾತ್ಮಕವಾಗಿ, ಭಾಷಿಕವಾಗಿ ನಿಜಾಂ ಆಳ್ವಿಕೆಯ ನಿರ್ಬಂಧಕ್ಕೆ ಒಳಗಾಯಿತು. ನಿಜಾಂ ಆಳ್ವಿಕೆಯ ನಿರ್ಬಂಧಗಳಿಂದ ಹೊರಬರುವ ಈ ಪ್ರದೇಶದ ಜನರ ಉದ್ದೇಶ ಸ್ವಾತಂತ್ರ್ಯ ಭಾರತದಲ್ಲಿ ಒಂದಾಗುವ ಮಹತ್ವಾಕಾಂಕ್ಷೆಯನ್ನು ಪಡೆದಿತ್ತೇ ವಿನಹ ಕೇವಲ ಸ್ಥಳೀಯ ಒಲವನ್ನು ಹೊಂದಿರಲಿಲ್ಲ. ದೇಶ-ಭಾಷೆಯ ಬಗೆಗಿನ ಒಲವು ಹಾಗೂ ಸ್ಥಳೀಯ ಬಿಕ್ಕಟ್ಟಿನ ಪರಿಸ್ಥಿತಿಗಳು ಇಲ್ಲಿನ ಜನತೆಯನ್ನು ಸ್ವಾತಂತ್ರ್ಯಕ್ಕೆ ಪ್ರೇರೇಪಿತರನ್ನಾಗಿಸಿದವು. ನಿಜಾಂ ಸರಕಾರದಿಂದ ಬಲ ಪಡೆದ ರಜಾಕಾರರಿಂದ ಹಾಗೂ ರಜಾಕಾರರಿಂದ ಬಲ ಪಡೆದುಕೊಂಡ ಸ್ಥಳೀಯ ದಂಗೆ ಕೋರರಿಂದ ಈ ಪ್ರದೇಶ ಅನೇಕ ಬಿಕ್ಕಟ್ಟುಗಳನ್ನು ಎದುರಿಸಿತು. ಸ್ವಾತಂತ್ರ್ಯ ಹೋರಾಟವೆಂಬುದು ಇಲ್ಲಿ ಪ್ರಭುತ್ವದ ವಿರುದ್ಧ ಹೋರಾಟ ಎನ್ನುವುದಕ್ಕಿಂತ ಮುಖ್ಯವಾಗಿ ರಜಾಕಾರರ, ದಂಗೆಕೋರರ ವಿರುದ್ಧದ ಹೋರಾಟ ಎನ್ನುವಷ್ಟರಮಟ್ಟಿನ ಪರಿಸ್ಥಿತಿಯನ್ನು ತಲುಪಿತು. ಹೈದರಾಬಾದ್ ಕರ್ನಾಟಕ ೧೯೪೮ರಲ್ಲಿ ನಿಜಾಂ ಆಳ್ವಿಕೆಯಿಂದ ವಿಮುಕ್ತಿಯನ್ನು ಪಡೆಯಿತು. ಆದರೆ ಸ್ವಾತಂತ್ರ್ಯ ನಂತರ ಈ ಪ್ರದೇಶದ ಜನ ಸ್ಥಳೀಯವಾಗಿ ರಜಾಕಾರರು, ದಂಗೆಕೋರರು ಉಂಟುಮಾಡಿದ್ದ ಹಾನಿಯಿಂದ ಚೇತರಿಸಿಕೊಳ್ಳಲಾಗದೆ ಬಳಲಿದರು. ಸ್ಥಳೀಯ ದಂಗೆಕೋರರೇ ಆಡಳಿತಾತ್ಮಕ ಮಾನ್ಯತೆ ಪಡೆದಿದ್ದರಿಂದ ಸ್ವಾತಂತ್ರ್ಯವೆಂಬುದು ಇಲ್ಲಿನ ಜನರಲ್ಲಿಯೂ ಭ್ರಮನಿರಸನವನ್ನೇ ಉಂಟು ಮಾಡಿತು. ಸ್ವಾತಂತ್ರ್ಯ ಪಡೆದು ಸುಮಾರು ೬೦ ವರ್ಷಗಳೇ ಕಳೆದಿವೆ. ಆದರೆ ಈ ಪ್ರದೇಶದ ನಿಶ್ಚಿತ ಉದ್ದೇಶಗಳು ಈಡೇರಿಲ್ಲ. ಅನಭಿವೃದ್ಧಿಯ ಕಾರಣಗಳ ಹಿನ್ನೆಲೆಯಲ್ಲಿ ಸ್ವಾತಂತ್ರ್ಯ ಕರ್ನಾಟಕದಲ್ಲಿ ಇದನ್ನು ಪ್ರತ್ಯೇಕ ವಾಗಿಯೇ ಉಳಿಸಲಾಗಿದೆ. ಪ್ರಾದೇಶಿಕವಾಗಿ ಈ ರೀತಿ ಹಿಂದುಳಿಸಿರುವಿಕೆಗೆ ಕೇವಲ ನಿಜಾಂ ಆಳ್ವಿಕೆ ಕಾರಣವಲ್ಲ. ಕರ್ನಾಟಕದ ಸರ್ವತೋಮುಖ ಅಭಿವೃದ್ಧಿಯಲ್ಲಿ ಈ ಪ್ರದೇಶವನ್ನು ನಿರ್ಲಕ್ಷಿಸಿರುವ ಸರ್ಕಾರ ಹಾಗೂ ಸ್ವತಃ ಪ್ರದೇಶಕ್ಕೆ ಸಂಬಂಧಿಸಿದ ಸ್ವಾರ್ಥ ಅಧಿಕಾರಿ ವರ್ಗದವರಲ್ಲಿ ಕುಂಟಿತಗೊಂಡಿರುವ ಅಭಿವೃದ್ಧಿಯ ಅಪೇಕ್ಷೆಗಳು ಇದನ್ನು ಹಿಂದುಳಿಯುವಂತೆ ಮಾಡಿವೆ. ಈ ಪ್ರದೇಶದ ಹಿಂದುಳಿದಿರುವಿಕೆಯ ನೋವು ಇಲ್ಲಿನ ಪ್ರತಿಯೊಂದು ಕ್ಷೇತ್ರವನ್ನು ಆವರಿಸಿದೆ. ಮುಂದುವರೆದ ಪ್ರದೇಶದ ಸಾಮಾಜಿಕ, ಶೈಕ್ಷಣಿಕ, ಔದ್ಯೋಗಿಕ, ಸಾಹಿತ್ಯಿಕ, ಮುಂತಾದ ಕ್ಷೇತ್ರಗಳಿಂದ ಈ ಪ್ರದೇಶವನ್ನು ಪ್ರತ್ಯೇಕವಾಗಿ ಹಾಗೂ ಕಡೆಗಣಿಸಿ ಕಾಣಲಾಗುತ್ತಿದೆ. 'ಹೈದರಾಬಾದ್ ಕರ್ನಾಟಕ'ವೆಂದರೆ 'ಹಿಂದುಳಿದ ಪ್ರದೇಶ' ಎಂಬುದಾಗಿಯೇ ಈ ಪ್ರದೇಶ ಇಂದು ಪ್ರಚಲಿತವಾಗಿದೆ. ಮೂರು ಜಿಲ್ಲೆಗಳ ಭೌಗೋಳಿಕ ವ್ಯಾಪ್ತಿಯಲ್ಲಿ ಗುರುತಿಸಲ್ಪಡುತ್ತಿದ್ದ ಈ ಪ್ರದೇಶದ ವ್ಯಾಪ್ತಿ ಇಂದು ವಿಸ್ತರಿಸಿದೆ. ಈ ಮೂರು ಜಿಲ್ಲೆಗಳಂತೆ ಹಿಂದುಳಿದ ಕೊಪ್ಪಳ, ಬಳ್ಳಾರಿ ಜಿಲ್ಲೆಗಳನ್ನೂ ಹೈದರಾಬಾದ್ ಕರ್ನಾಟಕ ಪ್ರದೇಶಕ್ಕೆ ಸೇರಿಸಲಾಗಿದೆ. ಭೌಗೋಳಿಕವಾಗಿ ಇದರ ವ್ಯಾಪ್ತಿಯ ವಿಸ್ತರಣೆಯಲ್ಲಿಯೂ ಹಿಂದುಳಿದಿರುವಿಕೆಯ ಕಾರಣವು ಮುಖ್ಯವಾಗಿರುವುದು ಗಮನಿಸಬೇಕಾದ ವಿಷಯ ವಾಗಿದೆ. ಹಿಂದುಳಿದಿರುವಿಕೆಯ ನಿವಾರಣೆ ಅಥವಾ ಮುಂದುವರೆದ ಪ್ರದೇಶದೊಂದಿಗೆ ಸ್ಪರ್ಧೆಯಂತಹ

ಕಾರ್ಯಗಳು ಕಂಡುಬರದೆ ಹಿಂದುಳಿದಿರುವಿಕೆಯ ಮುಂದುವರಿಕೆ ಹಾಗೂ ವಿಸ್ತರಣೆಯೇ ಇಲ್ಲಿ ಕಂಡುಬರುತ್ತಿದೆ. ಭೌಗೋಳಿಕವಾಗಿ ಇದರ ವ್ಯಾಪ್ತಿ ರೂಪಿತವಾಗಿರುವುದು ರಾಜಕೀಯ ಕಾರಣಗಳಿಂದ, ಬದಲಾಗುವುದು ಅದರ ಕಾರಣಕ್ಕಾಗಿಯೆ.

ಈ ಪ್ರದೇಶದ ಹಿಂದುಳಿದಿರುವಿಕೆಯ ಕಾರಣಗಳ ಚರಿತ್ರೆಯನ್ನು ಹುಡುಕುವುದು ಇಲ್ಲಿನ ಮುಖ್ಯ ಉದ್ದೇಶವಲ್ಲ. ಎಲ್ಲ ಅವ್ಯವಸ್ಥೆ ಹಾಗೂ ಬಿಕ್ಕಟ್ಟುಗಳ ಮಧ್ಯೆಯೂ ಇಲ್ಲಿನ ಸಾಹಿತ್ಯ ರೂಪಗೊಂಡಿದೆ. ಅನುಭಾವಿ ಶಿವಶರಣರ, ತತ್ವಪದಕಾರರ, ಹರಿದಾಸರ ಮೌಖಿಕ ಹಾಗೂ ಲಿಖಿತ ಸಾಹಿತ್ಯಿಕ ರಚನೆಗಳು ಇಲ್ಲಿನ ಸಾಹಿತ್ಯಿಕ ರಚನೆಯ ಮುಖ್ಯ ಸತ್ವಗಳಾಗಿ ಕಂಡುಬಂದಿವೆ. ಈ ಪ್ರದೇಶವನ್ನು ಹೊರತುಪಡಿಸಿ ಕರ್ನಾಟಕದಲ್ಲಿ ಕನ್ನಡ ಕಲಿಕೆಯ ಫಲವಾಗಿ ಮೂಡಿಬಂದ ಕನ್ನಡ ಸಾಹಿತ್ಯದಲ್ಲಿ ಅನೇಕ ಪ್ರಯೋಗಗಳು ಕಾಣಿಸಿಕೊಂಡಿದ್ದವು. ಭಾಷಾಂತರದಿಂದ ಮೊದಲುಗೊಂಡು ಆಧುನಿಕ ಕನ್ನಡ ಕಾವ್ಯ, ಕಾದಂಬರಿ, ಕಥಾ ಪ್ರಕಾರಗಳಲ್ಲಿ ಅನ್ಯಭಾಷೆಯ ಸಾಹಿತ್ಯಿಕ ಪ್ರಭಾವ, ಪ್ರೇರಣೆಗಳು ಕಂಡು ಬಂದವು. ಇಲ್ಲಿನ ಸಾಹಿತ್ಯಿಕ ರಚನೆಯನ್ನು ಹೊರತುಪಡಿಸಿ ಕರ್ನಾಟಕದ ಬೇರೆಡೆಗಳಲ್ಲಿ ಅನ್ಯಭಾಷೆಯ ಸಾಹಿತ್ಯಿಕ ಚಿಂತನೆಗಳ ದೃಷ್ಟಿಯಿಂದ ಭಾರತೀಯ ಸಮಾಜವನ್ನು ನೋಡುವ ಅದಕ್ಕೆ ಅನುಗುಣವಾಗಿ ಸಾಹಿತ್ಯಿಕ ರಚನೆಗೆ ತೊಡಗುವ ಕಾರ್ಯ ಕಂಡು ಬಂದಿತು. ಆದರೆ ಇಲ್ಲಿನ ಸಾಹಿತ್ಯಿಕ ರಚನೆಗೆ ಅನ್ಯಭಾಷೆಯ ಸಾಹಿತ್ಯಿಕ ಚಿಂತನೆಗಳನ್ನು ಕಟ್ಟಿಕೊಡುವುದು ತುರ್ತಿನ ಸಂಗತಿಯಾಗಿರಲಿಲ್ಲ. ಆ ರೀತಿಯ ಪ್ರಭಾವ, ಪ್ರೇರಣೆಯ ಹೊಸ ಓದಿನ ಸಾಧ್ಯತೆಗೆ ತೆರೆದುಕೊಳ್ಳುವ ಅವಕಾಶಗಳೂ ಇಲ್ಲಿನ ಸಾಹಿತಿಗಳಿಗೆ ಸಾಧ್ಯವಾಗಲಿಲ್ಲ. ಈ ಎಲ್ಲ ಅಂಶಗಳ ಹಿನ್ನೆಲೆಯಲ್ಲಿ ಇಲ್ಲಿನ ಸಾಹಿತ್ಯಿಕ ರಚನೆ ಬೇರೆ ಭಾಗದ ಸಾಹಿತ್ಯಿಕ ರಚನೆಗಿಂತ ಭಿನ್ನವಾಯಿತು. ಈ ಭಿನ್ನತೆಯನ್ನು ಅರಿಯುವ ಪ್ರಧಾನ ಆಕರವೆಂದೇ ಕಥನ ಸಾಹಿತ್ಯವನ್ನು ಪರಿಗಣಿಸಲಾಗಿದೆ. ಒಂದು ನಿರ್ದಿಷ್ಟ ವಿಷಯವನ್ನು ಕೇಂದ್ರೀಕರಿಸಿ ಇಲ್ಲವೆ ಸಮಗ್ರವಾಗಿ ಕಥನ ಸಾಹಿತ್ಯವನ್ನು ಅಧ್ಯಯನ ಮಾಡುವಾಗ ಈ ಭಿನ್ನತೆಗಳು ಸ್ಪಷ್ಟವಾಗಿ ಕಂಡು ಬರುತ್ತವೆ. ಸ್ಥೂಲ ಹಾಗೂ ಸೂಕ್ಷ್ಮ ಓದಿನ ಅಗತ್ಯತೆಯ ಹಿನ್ನೆಲೆಯಲ್ಲಿ ಹೈದರಾಬಾದ್ ಕರ್ನಾಟಕದ ಕಥನ ಸಾಹಿತ್ಯದಲ್ಲಿ ಕಂಡುಬರುವ ಪ್ರಾದೇಶಿಕ ಸಂವೇದನೆಯ ಅಧ್ಯಯನ ಮಿತಿ ಹಾಗೂ ವಿಶಿಷ್ಟತೆಯನ್ನು ಪಡೆದಿದೆ.

'ಪ್ರಾದೇಶಿಕತೆ' ಎಂದಾಕ್ಷಣ ದಟ್ಟ ಅರಣ್ಯ, ಪ್ರಾಕೃತಿಕ ಸೌಂದರ್ಯ ಇತ್ಯಾದಿಗಳು ಎಂದು ನಿರ್ದಿಷ್ಟ ಚಿತ್ರಣವನ್ನು ರೂಪಿಸಿಕೊಳ್ಳಲಾಗದು. ಪ್ರಾದೇಶಿಕತೆಯ ಸ್ವರೂಪ ಭೌಗೋಳಿಕ ಪರಿಸರ, ವಿಶಿಷ್ಟ ಜನಾಂಗ ಸಂಸ್ಕೃತಿಯನ್ನಾಧರಿಸಿ ಭಿನ್ನವಾಗಿರುತ್ತದೆ. ಒಂದೇ ಪ್ರಾದೇಶಿಕ ಪರಿಸರದಲ್ಲಿಯೇ ಹಲವು ವೈವಿಧ್ಯತೆಗಳಿರುತ್ತವೆ. ಹೈದರಾಬಾದ್ ಕರ್ನಾಟಕದ ಭೌಗೋಳಿಕ ಪರಿಸರ ಹಾಗೂ ಅದಕ್ಕನುಗುಣವಾಗಿಯೇ ಕಂಡುಬರುವ ಜನಾಂಗ ಸಂಸ್ಕೃತಿಗೆ ಸಂಬಂಧಿಸಿದ ವಿಚಾರಗಳೆಲ್ಲವನ್ನೂ ಇಲ್ಲಿ 'ಪ್ರಾದೇಶಿಕತೆ' ಎಂದು ಪರಿಗಣಿಸಲಾಗಿದೆ. ಪ್ರಾದೇಶಿಕತೆಯ ಮೂಲಕ ಒಂದು ನಿರ್ದಿಷ್ಟ ಪ್ರದೇಶದ ಜನರ ಸಂವೇದನೆಗಳನ್ನು ಗ್ರಹಿಸುವುದೇ ಇಲ್ಲಿ ಪ್ರಾದೇಶಿಕ ಸಂವೇದನೆ ಎಂಬ ಅರ್ಥವನ್ನು ಪಡೆದಿದೆ. ಸಂವೇದನೆಯ ಸ್ವರೂಪ

ಏಕಮುಖಿವಾದದ್ದಲ್ಲ. ಬಹುಮುಖಿ ಸಂವೇದನೆಗಳು ಪ್ರಾದೇಶಿಕ ಸಂವೇದನೆಯಲ್ಲಿ ಕಂಡುಬರುತ್ತವೆ. ಪ್ರಾದೇಶಿಕ ಸಂವೇದನೆಯು ನಿರ್ದಿಷ್ಟ ಪ್ರದೇಶಕ್ಕೆ ಅನ್ವಯಿಸುವ ವಿಚಾರಗಳನ್ನು ಮಾತ್ರವೇ ಒಳಗೊಂಡಿರುವುದಿಲ್ಲ. ಪ್ರದೇಶದ ನೆಲೆಯಲ್ಲಿಯೇ ಇದ್ದು ಸಾರ್ವತ್ರಿಕವಾದ ಮನುಷ್ಯ ಬದುಕಿಗೆ ಸಂಬಂಧಿಸಿದ ಸಂವೇದನೆಗಳ ಅಭಿವ್ಯಕ್ತಿಯೂ ಪ್ರಾದೇಶಿಕ ಸಂವೇದನೆಯಲ್ಲಿ ಕಂಡುಬರುತ್ತದೆ.

ನಿರ್ದಿಷ್ಟ ಉದ್ದೇಶವನ್ನು ಆಧರಿಸಿ ಸಾಹಿತ್ಯ ರಚನೆಗೆ ತೊಡಗುವುದರ ಹಿಂದೆ ಅದರದೇ ಆದ ತಾತ್ವಿಕತೆ ಇರುತ್ತದೆ. ಈ ತಾತ್ವಿಕತೆಯು ಸಾಹಿತ್ಯಿಕ ರಚನೆಯ ಸ್ವರೂಪವನ್ನು ನಿರ್ಧರಿಸುತ್ತದೆ ಮತ್ತು ನಿಯಂತ್ರಿಸುತ್ತದೆ. ಕೇವಲ ಪ್ರಾದೇಶಿಕತೆಯನ್ನು ಅಭಿವ್ಯಕ್ತಿಸಬೇಕೆನ್ನುವ ಉದ್ದೇಶದಿಂದಲೇ ಕಥನ ಸಾಹಿತ್ಯದ ರಚನೆಗೆ ತೊಡಗುವುದು ಸಾಧ್ಯವಿಲ್ಲ. ಮನುಷ್ಯ ಬದುಕಿನ ವಿಭಿನ್ನ ಸಂವೇದನೆಗಳೊಂದಿಗೆ ಬೆರೆತುಹೋದ ಪ್ರಾದೇಶಿಕತೆಯನ್ನು ರೂಪಿಸಿಕೊಡುವ ಹಿನ್ನೆಲೆಯಲ್ಲಿಯೇ ಈವರೆಗಿನ ಕಥನ ಸಾಹಿತ್ಯ ಕಂಡುಬಂದಿದೆ. ಮನುಷ್ಯ ಸಂವೇದನೆಗಳ ಅಭಿವ್ಯಕ್ತಿಗೆ ಪೂರಕವಾಗಿ ಆಯಾ ಪ್ರದೇಶದ ಪ್ರಾದೇಶಿಕತೆಯನ್ನು ಮಿತವಾಗಿ ಇಲ್ಲವೆ ಸಮೃದ್ಧವಾಗಿ ಬಳಸಿಕೊಳ್ಳಲಾಗುತ್ತದೆ. ಆದರೆ ಕಥನ ಸಾಹಿತ್ಯವು ಮನುಷ್ಯ ಬದುಕಿನ ಸಂವೇದನೆಗಳನ್ನು ಹೊರತುಪಡಿಸಿ ಕೇವಲ ಪ್ರದೇಶದ ವಿಶಿಷ್ಟತೆಗಳನ್ನು ಮಾತ್ರವೇ ಒಳಗೊಂಡಿರುತ್ತದೆಂಬುದನ್ನು ಒಪ್ಪಲಾಗದು. ಪ್ರಾದೇಶಿಕ ವೈಶಿಷ್ಟ್ಯಗಳು ಇಲ್ಲವೆ ಭೌಗೋಳಿಕ, ಭಾಷಿಕ ವೈಶಿಷ್ಟ್ಯಗಳು ಮನುಷ್ಯ ಬದುಕಿನ ಸಂವೇದನೆಯೊಂದಿಗೆ ಅರ್ಥಪೂರ್ಣವಾಗುತ್ತವೆ. ಈ ಕಾರಣಕ್ಕೆ 'ಪ್ರಾದೇಶಿಕ ಸಂವೇದನೆ'ಯೆಂಬುದಾಗಿಯೇ ಅಧ್ಯಯನವನ್ನು ರೂಪಿಸಿಕೊಳ್ಳಲಾಗಿದೆ.

ಹೈದರಾಬಾದ್ ಕರ್ನಾಟಕ ಪ್ರಾದೇಶಿಕವಾಗಿ ಭಿನ್ನತೆಯನ್ನು ಪಡೆದಿರುವಂತೆ ಸಾಹಿತ್ಯಿಕವಾಗಿಯೂ ಭಿನ್ನತೆಯನ್ನು ಪಡೆದಿದೆ.) ಈ ಭಿನ್ನತೆಯನ್ನು ತಿಳಿಯುವ ಕುತೂಹಲವನ್ನು ಕಥನ ಸಾಹಿತ್ಯದಂತಹ ನಿರ್ದಿಷ್ಟ ಪ್ರಕಾರದಲ್ಲಿ ನಿರ್ದಿಷ್ಟ ವಿಷಯವನ್ನು ಅಧ್ಯಯನ ಮಾಡುವ ಕಡೆ ಕೇಂದ್ರೀಕರಿಸಲಾಗಿದೆ. ಕಥನ ಸಾಹಿತ್ಯದಲ್ಲಿ ಕಂಡು ಬರುವ ಗುಣಲಕ್ಷಣಗಳ ಆಧಾರದ ಮೇಲೆ ಅದನ್ನು ಸಾಮಾಜಿಕ, ಪೌರಾಣಿಕ, ಐತಿಹಾಸಿಕ ಕಥನ ಸಾಹಿತ್ಯವೆಂಬ ಗುರುತಿಸುವಿಕೆ ಕಂಡುಬರುತ್ತದೆ. ಪ್ರಾದೇಶಿಕತೆ, ಪ್ರಾದೇಶಿಕ ಸಂವೇದನೆ ಈ ರೀತಿ ಪೌರಾಣಿಕ, ಐತಿಹಾಸಿಕ ಕಥನ ಸಾಹಿತ್ಯದಲ್ಲಿಯೂ ಕಂಡುಬರುತ್ತದೆ. ಇದಲ್ಲದೆ ಪ್ರಾದೇಶಿಕ ಕಥೆ, ಕಾದಂಬರಿಗಳಲ್ಲೂ ಈ ರೀತಿಯ ಪೌರಾಣಿಕ, ಐತಿಹಾಸಿಕ ಸಂಗತಿಗಳು ಇರುತ್ತವೆ. ಪ್ರಾದೇಶಿಕತೆ ಎಲ್ಲಾ ವಿಧದ ಸಾಹಿತ್ಯಿಕ ರಚನೆಯಲ್ಲೂ ಕಂಡುಬರುತ್ತದೆ. ಹೀಗಿದ್ದಾಗ್ಯೂ ಪ್ರಾದೇಶಿಕ ಕಾದಂಬರಿ, ಪ್ರಾದೇಶಿ ಕತೆ ಎಂದು ಕಥನ ಸಾಹಿತ್ಯವನ್ನು ಗುರುತಿಸುವುದು ಕಂಡುಬರುವುದಿಲ್ಲ. 'ಪ್ರಾದೇಶಿಕತೆ' ಎಂದಾಕ್ಷಣ ಕಥನಕ್ಕೆ ಒಂದು ಸೀಮಿತತೆ ಬರುತ್ತದೆ ಎಂಬ ಆಲೋಚನೆಯೇ ಇದಕ್ಕೆ ಕಾರಣ. ಪ್ರಾದೇಶಿಕತೆ ಸೀಮಿತತೆಯ ಅರ್ಥವ್ಯಾಪ್ತಿಯನ್ನು ಪಡೆದಿರುವಂತಹದ್ದಲ್ಲ. ಕಾಲದೇಶಾತೀತವಾದ ವಿಷಯಕ್ಕೆ ಸಂಬಂಧಿಸಿದ ಪ್ರಾದೇಶಿಕ ನೆಲೆಯ ಅಭಿವ್ಯಕ್ತಿ ವಿಶಿಷ್ಟತೆಯನ್ನು, ಸೃಜನಶೀಲತೆಯನ್ನು ಪಡೆಯುತ್ತದೆ. ವಿಷಯದ ಅಭಿವ್ಯಕ್ತಿಗೆ ಪೂರಕವಾಗಿ, ಸೂಕ್ತವಾಗಿ ಒದಗಿಬರುವ ಪ್ರಾದೇಶಿಕತೆಯ ಬಗೆಗೆ ಸೀಮಿತ ಅರ್ಥವ್ಯಾಪ್ತಿ ನೀಡುವುದು ಅದರ ಬಗೆಗಿನ ಅಧ್ಯಯನ

ಸಾಧ್ಯತೆಗಳನ್ನು ಕುಂಟಿತಗೊಳಿಸುತ್ತದೆ. ಪ್ರಾದೇಶಿಕ ಸಂವೇದನೆ ಎಂಬುದಕ್ಕೆ ವಿಶಾಲವಾದ ಅರ್ಥವ್ಯಾಪ್ತಿ ಇದೆ ಹಾಗೂ ಅದಕ್ಕೆ ಸಂಬಂಧಿಸಿದ ಅಧ್ಯಯನದ ಸಾಧ್ಯತೆಗಳೂ ಇವೆ ಎಂಬುದು ಈ ವಿಷಯದ ಅಧ್ಯಯನಕ್ಕೆ ಇರುವ ಮುಖ್ಯ ಪ್ರೇರಣೆ. ಪ್ರಾದೇಶಿಕತೆಯ ಅಭಿವ್ಯಕ್ತಿ ಕ್ರಮ ಏಕರೂಪತೆಯನ್ನು ಪಡೆದುಕೊಂಡಿಲ್ಲ. ಪ್ರಾದೇಶಿಕತೆಯ ಅಭಿವ್ಯಕ್ತಿ ಕಾಲದಿಂದ ಕಾಲಕ್ಕೆ ಭಿನ್ನವಾಗಿದೆ. ಪ್ರಾದೇಶಿಕತೆಯನ್ನು ಕಥನ ಸಾಹಿತ್ಯದಲ್ಲಿ ಕಾಣಿಸುವ ಉದ್ದೇಶಗಳು ವಿಭಿನ್ನವಾಗಿವೆ. ಪ್ರಾದೇಶಿಕ ಸಂವೇದನೆಯ ಅಭಿವ್ಯಕ್ತಿಯ ಅಧ್ಯಯನದಲ್ಲಿ ಅದರ ಅಗತ್ಯತೆ ಹಾಗೂ ಬದಲಾದ ಕಾಲಘಟ್ಟಕ್ಕೆ ಅನುಗುಣವಾಗಿ ಅದರ ಉದ್ದೇಶ ಗಳಲ್ಲಿನ ಭಿನ್ನತೆಗಳು ಮುಂತಾದ ವಿಷಯಗಳು ಕಂಡುಬರುತ್ತವೆ. ಹೈದರಾಬಾದ್ ಕರ್ನಾಟಕದ ಕಥನ ಸಾಹಿತ್ಯದಲ್ಲಿ ಕಂಡುಬರುವ ಪ್ರಾದೇಶಿಕ ಸಂವೇದನೆ ಭಿನ್ನತೆ ಹಾಗೂ ವಿಶಿಷ್ಟತೆಯನ್ನು ಪಡೆದಿರುವಂತಹದ್ದು. ಆದರೆ ಅದರ ಅಭಿವ್ಯಕ್ತಿಯ ಹಿಂದಿನ ಉದ್ದೇಶಗಳೂ ಇಲ್ಲಿ ಕಾಲದಿಂದ ಕಾಲಕ್ಕೆ ಭಿನ್ನವಾಗಿವೆ. ಪ್ರಾದೇಶಿಕತೆಯನ್ನು ಅಭಿವ್ಯಕ್ತಿಸುವ ಮುಖ್ಯ ಉದ್ದೇಶವನ್ನೇ ಕೇಂದ್ರೀಕರಿಸಿ ಕಥನ ಸಾಹಿತ್ಯದ ಬರವಣಿಗೆ ಕಂಡುಬರುವುದಿಲ್ಲ. ಆದರೆ ಸಹಜವಾಗಿಯೇ ಬದುಕು ಹಾಗೂ ಬರವಣಿಗೆಯನ್ನು ವ್ಯಾಪಿಸುವ ಪ್ರಾದೇಶಿಕತೆಯು ಬದುಕಿಗೆ ಸಂಬಂಧಿಸಿದ ಯಾವುದೋ ಮುಖ್ಯ ಸಂಗತಿಯನ್ನು ತಿಳಿಸುತ್ತದೆ. ಪ್ರಾದೇಶಿಕತೆ ಕೇವಲ ಸೃಜನಶೀಲತೆಗೆ ಉಪಯುಕ್ತವಾಗುವ ಅಂಶವಲ್ಲ. ಪ್ರಾದೇಶಿಕತೆಯ ಬಳಕೆ ಪ್ರದೇಶವನ್ನು ಹಾಗೂ ಅಲ್ಲಿನ ವಿಶಿಷ್ಟ ಜನ ಬದುಕನ್ನು ಮುನ್ನೆಲೆಗೆ ತರುತ್ತದೆ. ಪ್ರಾದೇಶಿಕ ಸಂವೇದನೆಯ ಅಭಿವ್ಯಕ್ತಿ ಕಥನ ಸಾಹಿತ್ಯದಲ್ಲಿ ಪ್ರಾದೇಶಿಕ ವಿಸ್ಮೃತಿಯನ್ನು, ವಿಶಿಷ್ಟತೆಯನ್ನು ಮತ್ತು ಪ್ರಾದೇಶಿಕವಾಗಿ ಹಾಗೂ ಸಾಹಿತ್ಯಿಕವಾಗಿ ಕಡೆಗಣಿಸಲ್ಪಟ್ಟ ವಿಷಯ, ಜನಬದುಕು, ಸಂಸ್ಕೃತಿಯನ್ನು ಮುನ್ನೆಲೆಗೆ ತರುವ ಹಿನ್ನೆಲೆಯಲ್ಲಿ ಕಂಡುಬರುತ್ತದೆ. ಸಾಹಿತ್ಯಿಕ ಬರವಣಿಗೆಯಲ್ಲಿನ ಪ್ರಾದೇಶಿಕತೆಯನ್ನು ಈ ನೆಲೆಯಿಂದಲ್ಲದೆ, ಇತರ ನೆಲೆಗಳಿಂದ ಗ್ರಹಿಸುವ ಸಾಧ್ಯತೆಗಳಿವೆ. ಸಾಹಿತ್ಯಿಕವಾಗಿ ಇಂತಹ ಸಾಧ್ಯತೆಗಳ ಶೋಧನೆಗೆ ಹೈದರಾಬಾದ್ ಕರ್ನಾಟಕದ ಕಥನ ಸಾಹಿತ್ಯವನ್ನೇ ಇಲ್ಲಿ ಪ್ರಧಾನ ಆಕರವನ್ನಾಗಿಸಿಕೊಳ್ಳಲಾಗಿದೆ.

ಹೀಗೆ ಪ್ರಧಾನ ನೆಲೆಯ ಗುರುತಿಸುವಿಕೆಯಿಂದ ಹೊರಗುಳಿಸಲಾದ ಸಂಸ್ಕೃತಿ, ಸಮುದಾಯ, ಪ್ರಾದೇಶಿಕ ವಿಶಿಷ್ಟತೆಗಳು ಹಾಗೂ ವಿಶಿಷ್ಟ ಭಾಷೆಯನ್ನು ಹೈದರಾಬಾದ್ ಕರ್ನಾಟಕದ ಕಥನ ಸಾಹಿತ್ಯ ಮುನ್ನೆಲೆಗೆ ತರುತ್ತಿದೆ ಎಂಬುದು ಪ್ರಸ್ತುತ ಅಧ್ಯಯನಕ್ಕೆ ರೂಪಿಸಿಕೊಳ್ಳಲಾದ ಪೂರ್ವಪ್ರಮೇಯ. ವಿಸ್ಮೃತಿಯ ಆತಂಕ, ಪ್ರಾದೇಶಿಕ ವಿಶಿಷ್ಟತೆಗಳ ಅನನ್ಯತೆಯನ್ನು ಬಿಂಬಿಸುವಿಕೆ, ಇನ್ನೂ ಮುಂತಾದ ಯಾವೆಲ್ಲ ಹಿನ್ನೆಲೆಗಳು ಪ್ರಾದೇಶಿಕತೆಯ ಅಭಿವ್ಯಕ್ತಿಗೆ ಕಾರಣವಾಗಿರುತ್ತದೆಯೊ ಅವುಗಳನ್ನೆಲ್ಲ ಇಲ್ಲಿ ಕಾಲಘಟ್ಟಕ್ಕನುಗುಣವಾಗಿ ಚರ್ಚಿಸಲಾಗಿದೆ. ಪ್ರಾದೇಶಿಕ ವಿಶಿಷ್ಟ ಅಂಶಗಳನ್ನು ಸಂವೇದನೆಯ ಅಭಿವ್ಯಕ್ತಿಗೆ ಬಳಸಿಕೊಳ್ಳುವಲ್ಲಿ ಸೃಜನಶೀಲತೆಯು ಕಂಡುಬರುತ್ತದೆ. ಇಂತಹ ಸೃಜನಶೀಲ ಬರವಣಿಗೆಯನ್ನು ಸಾಧ್ಯವಾಗಿಸಿಕೊಂಡಿರುವ ಹೈದರಾಬಾದ್ ಕರ್ನಾಟಕದ ಕಥನ ಸಾಹಿತ್ಯಕ್ಕೆ ಪ್ರದೇಶದಾಚೆಗಿನ ಸಾಹಿತ್ಯಿಕ ಬರವಣಿಗೆಯೊಂದಿಗೆ ಮಾನ್ಯತೆಯನ್ನು ಪಡೆಯಲು ಸಾಧ್ಯವಾಗಿದೆ.

ಪಂಥ ಪರಿಕಲ್ಪನೆಯ ಹಿನ್ನೆಲೆಯಲ್ಲಿ ಇಲ್ಲಿನ ಕಥನ ಸಾಹಿತ್ಯವನ್ನು ಅಧ್ಯಯನ ಮಾಡಲಾಗಿಲ್ಲ. ಆದರೆ ದಲಿತ-ಬಂಡಾಯ, ಮುಸ್ಲಿಂ ಸಂವೇದನೆ, ಸ್ತ್ರೀ ಸಂವೇದನೆಯಂತಹ ವಿಚಾರಗಳ ಹಿನ್ನೆಲೆಯಲ್ಲಿ ಮೂಡಿಬಂದ ಕನ್ನಡ ಸಾಹಿತ್ಯ ಹೈದರಾಬಾದ್ ಕರ್ನಾಟಕದಲ್ಲಿ ಕಂಡುಬಂದ ರೀತಿಗೂ ಹಾಗೂ ಈ ಪ್ರದೇಶದಾಚೆಗಿನ ಸಾಹಿತ್ಯಿಕ ಬರವಣಿಗೆಯಲ್ಲಿ ಅಭಿವ್ಯಕ್ತಗೊಂಡ ರೀತಿಗೂ ಭಿನ್ನತೆಗಳಿವೆ. ಈ ಭಿನ್ನತೆಗಳನ್ನು ಕಥನ ಸಾಹಿತ್ಯದಲ್ಲಿ ಗುರುತಿಸಿ ಚರ್ಚಿಸಲಾಗಿದೆಯೇ ಹೊರತು ಪಂಥ ಪರಿಕಲ್ಪನೆಗೆ ಅನುಗುಣವಾಗಿ ಅಧ್ಯಯನವನ್ನು ಕೈಗೊಳ್ಳುವ ನಿಯಮಕ್ಕೆ ಬದ್ಧವಾಗಿಲ್ಲ.

ಹೈದರಾಬಾದ್ ಕರ್ನಾಟಕದ ಕಥನ ಸಾಹಿತ್ಯವನ್ನು ನಿರ್ದಿಷ್ಟವಾಗಿ 'ಪ್ರಾದೇಶಿಕ ಕಥೆ, ಕಾದಂಬರಿ' ಎಂಬ ಶೀರ್ಷಿಕೆಯಲ್ಲಿ ಗುರುತಿಸಿಲ್ಲ. ಈ ಪ್ರದೇಶದ ಕೆಲ ಪ್ರಾತಿನಿಧಿಕ ಕಥೆಗಾರರ ಕಥೆ, ಕಾದಂಬರಿಗಳಲ್ಲಿ ಕಂಡು ಬರುವ ಪ್ರಾದೇಶಿಕ ಸಂವೇದನೆಯನ್ನು ಆಧರಿಸಿ ಪ್ರಾದೇಶಿಕ ಸಂವೇದನೆಗೆ ಸಂಬಂಧಿಸಿದಂತೆ ಕಂಡು ಬರುವ ಎಲ್ಲಾ ಅಂಶಗಳನ್ನು ಚರ್ಚಿಸಲಾಗಿದೆ. ಶಾಂತರಸ, ಜಯತೀರ್ಥ ರಾಜಪುರೋಹಿತ, ಚೆನ್ನಣ್ಣವಾಲೀಕಾರ, ಜಂಬಣ್ಣ ಅಮರಚಿಂತ, ಚಂದ್ರಕಾಂತ ಕುಸನೂರ, ಭಾಲಚಂದ್ರ ಜಯಶೆಟ್ಟಿ, ಲಲಿತಾದೇಮಶೆಟ್ಟಿ, ಶ್ರೀಕಾಂತ ಪಾಟೀಲ, ಬಿ.ಟಿ. ಲಲಿತಾನಾಯಕ್, ಗೀತಾ ನಾಗಭೂಷಣ, ಅಮರೇಶ ನುಗಡೋಣಿ, ಕುಂ. ವೀರಭದ್ರಪ್ಪ ಮುಂತಾದ ಈ ಪ್ರದೇಶದ ಕೆಲ ಪ್ರಾತಿನಿಧಿಕ ಕಥೆಗಾರರ ಕಥನ ಸಾಹಿತ್ಯವನ್ನೇ ಇಲ್ಲಿ ಪ್ರಧಾನ ಆಕರವಾಗಿ ಬಳಸಿಕೊಳ್ಳಲಾಗಿದೆ. ೧೯೬೭ ರಿಂದ ೨೦೦೭ರವರೆಗಿನ ಇವರ ಪ್ರಾತಿನಿಧಿಕ ಕಥೆ ಕಾದಂಬರಿಗಳನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಪ್ರಾಧಾನವಾಗಿ ಗಮನಿಸಲಾದ ಕಥನ ಸಾಹಿತ್ಯ ಮಾತ್ರವೇ ಅಲ್ಲದೆ ಈ ಪ್ರದೇಶಕ್ಕೆ ಸಂಬಂಧಿಸಿದ ಬೇರೆ ಬೇರೆ ಬರಹಗಾರರ ಕಥೆ, ಕಾದಂಬರಿಗಳನ್ನು ಅಧ್ಯಯನಕ್ಕೆ ಪೂರಕವಾಗಿ ಬಳಸಿಕೊಳ್ಳಲಾಗಿದೆ. ಸೂಗಯ್ಯ ಹಿರೇಮಠ, ಮಲ್ಲಿಕಾರ್ಜುನ ಹಿರೇಮಠ ಮುಂತಾದವರ ಕಥನ ಸಾಹಿತ್ಯವನ್ನು ಪೂರಕ ಹಾಗೂ ಹೆಚ್ಚಿನ ವಿಷಯಗಳ ತಿಳುವಳಿಕೆಗಾಗಿ ಅಧ್ಯಯನ ಮಾಡಲಾಗಿದೆ. ಹೈದರಾಬಾದ್ ಕರ್ನಾಟಕದ ಕಥನ ಸಾಹಿತ್ಯದಲ್ಲಿ ಪ್ರಾದೇಶಿಕ ಸಂವೇದನೆ ಎಂಬ ವಿಷಯಕ್ಕೆ ಸಂಬಂಧಿಸಿದಂತೆ ಈ ವ್ಯಾಪ್ತಿಯನ್ನು ರೂಪಿಸಿಕೊಳ್ಳಲಾಗಿದೆ.

ಅಧ್ಯಯನಕ್ಕೆ ಪೂರಕವಾಗಿಯೇ ಅಧ್ಯಾಯಗಳನ್ನು ರೂಪಿಸಿಕೊಳ್ಳಲಾಗಿದೆ. ಹೈದರಾಬಾದ್ ಕರ್ನಾಟಕದ ಚಾರಿತ್ರಿಕ ಮಹತ್ವದೊಂದಿಗೆ ಅದರ ಇಂದಿನ ಸ್ಥಿತಿಗತಿಗಳ ಬಗೆಗೆ ಇಲ್ಲಿನ ಕಥನ ಪ್ರತಿಕ್ರಿಯೆ ನೀಡುತ್ತದೆ. ಪ್ರಾದೇಶಿಕ ಸಂವೇದನೆಯ ಪರಿಕಲ್ಪನೆಯನ್ನು ಸ್ಪಷ್ಟಪಡಿಸಿಕೊಂಡು ಅದಕ್ಕೆ ಅನುಗುಣವಾಗಿ ಹೈದರಾಬಾದ್ ಕರ್ನಾಟಕದ ಕಥನವನ್ನು ಅಧ್ಯಯನ ಮಾಡುವ ಉದ್ದೇಶವಿದೆ. ಇಲ್ಲಿನ ಸಮುದಾಯ, ಸಂಸ್ಕೃತಿ, ಭಾಷೆ, ಮುಂತಾದವುಗಳನ್ನು ಪ್ರಾದೇಶಿಕ ಸಂವೇದನೆಯನ್ನು ಅರಿತುಕೊಳ್ಳುವ ಮುಖ್ಯ ಪರಿಕರಗಳನ್ನಾಗಿಸಿಕೊಳ್ಳಲಾಗಿದೆ. ಪ್ರತಿಯೊಂದು ಅಂಶದಲ್ಲಿಯೂ ಪ್ರಾದೇಶಿಕ ಸಂವೇದನೆಯು ಅಭಿವ್ಯಕ್ತಗೊಂಡಿರುವ ರೀತಿ ಮುಖ್ಯವಾಗಿದೆ.

## ೧.೨. ಇದುವರೆಗಿನ ಅಧ್ಯಯನಗಳ ಸಮೀಕ್ಷೆ

ಸಾಹಿತ್ಯವನ್ನು ವಿಭಿನ್ನ ಓದಿನ ಸಾಧ್ಯತೆಗೆ ಒಳಗುಮಾಡುತ್ತಿರುವ ಅಧ್ಯಯನಗಳು ವ್ಯಾಪಕವಾಗಿ ಕಂಡುಬರುತ್ತಿವೆ. ಸಾಹಿತ್ಯದ ಒಂದು ನಿರ್ದಿಷ್ಟ ಪ್ರಕಾರಕ್ಕೆ ಅನುಗುಣವಾಗಿ ಅಧ್ಯಯನ ಮಾಡುವ ಹಾಗೆಯೇ ಸಾಹಿತ್ಯ ಪ್ರಕಾರದಲ್ಲಿ ನಿರ್ದಿಷ್ಟ ವಿಷಯವನ್ನು ಕೇಂದ್ರೀಕರಿಸಿ ಅಧ್ಯಯನ ಮಾಡುವ ಎರಡು ಮಾದರಿಗಳು ಕಂಡುಬರುತ್ತವೆ. ಈ ರೀತಿ ಸಾಹಿತ್ಯಿಕ ಓದಿನ ವಿಭಿನ್ನ ದೃಷ್ಟಿಕೋನಗಳನ್ನು ಇಂತಹ ಅಧ್ಯಯನಗಳು ತಿಳಿಸಿಕೊಡುತ್ತವೆ. ಸಾಹಿತ್ಯ ಪ್ರಕಾರಗಳಲ್ಲಿ ಒಂದಾದ ಕಥನ ಸಾಹಿತ್ಯವನ್ನು ವಿಭಿನ್ನ ಅಧ್ಯಯನದ ಆಕರವನ್ನಾಗಿಸಿಕೊಂಡಿರುವುದಲ್ಲದೆ, ನಿರ್ದಿಷ್ಟ ವಿಷಯಕ್ಕೆ ಕೇಂದ್ರೀಕರಿಸಿಕೊಂಡಿರುವ ಹಿನ್ನೆಲೆಯಲ್ಲಿ ಕಥನ ಸಾಹಿತ್ಯದಲ್ಲಿ ಪ್ರಾದೇಶಿಕತೆ ಮತ್ತು ಪ್ರಾದೇಶಿಕ ಸಂವೇದನೆಯನ್ನು ಕುರಿತು ಒಟ್ಟಾರೆ ಸಾಹಿತ್ಯ ಕ್ಷೇತ್ರದಲ್ಲಿ ನಡೆದಿರುವ ಅಧ್ಯಯನಗಳನ್ನು ಅಭ್ಯಾಸಿಸುವುದು ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಉಪಯುಕ್ತವಾಗಿದೆ.

೧. **ಕನ್ನಡ ಕಾದಂಬರಿಗಳಲ್ಲಿ ಪ್ರಾದೇಶಿಕತೆ ; ಸತ್ಯನಾರಾಯಣ ಭಟ್; ಮಧುರೈ ಕಾಮರಾಜ ವಿಶ್ವವಿದ್ಯಾಲಯ; ೧೯೯೩.**

ಈ ಸಂಶೋಧನಾ ಕೃತಿಯು ನವೋದಯ, ನವ್ಯ, ನವ್ಯೋತ್ತರ ಕಾಲಘಟ್ಟದಲ್ಲಿ ಕಂಡುಬಂದ ಮೂವತ್ತು ಕಾದಂಬರಿಗಳಲ್ಲಿ ಪ್ರಾದೇಶಿಕತೆ ಕಂಡುಬಂದ ರೀತಿಯನ್ನು ತಿಳಿಸಿಕೊಡುತ್ತದೆ. ಪ್ರಾತಿನಿಧಿಕವಾಗಿ ಆಯ್ದುಕೊಳ್ಳಲಾದ ಮೂವತ್ತು ಕಾದಂಬರಿಗಳು ನಿರ್ದಿಷ್ಟ ಪ್ರದೇಶಕ್ಕೆ ಸೀಮಿತವಾಗಿರದೆ, ವಿಭಿನ್ನ ಪ್ರದೇಶಗಳ ಪ್ರಾದೇಶಿಕತೆಯನ್ನು ಹಾಗೂ ಪ್ರಾದೇಶಿಕವಾಗಿ ಅಭಿವ್ಯಕ್ತಗೊಂಡಿರುವ ಎಲ್ಲಾ ವಿಶಿಷ್ಟ ಅಂಶಗಳನ್ನು ಆಯಾ ಕಾದಂಬರಿಗಳ ನೆಲೆಯಿಂದಲೇ ಚರ್ಚಿಸಿದೆ.

೨. **ಗ್ರಾಮಾಯಣ ಕಾದಂಬರಿಗಳಲ್ಲಿ ಪ್ರಾದೇಶಿಕತೆ; ಭಜಂತ್ರಿ ಎಸ್.ಎಸ್.; ಮುಂಬಯಿ ವಿಶ್ವವಿದ್ಯಾಲಯ (ಎಂ.ಫಿಲ್ ಅಧ್ಯಯನ)**

ಈ ಕೃತಿಯು ಗ್ರಾಮಾಯಣ ಕಾದಂಬರಿಯಲ್ಲಿ ಕಂಡುಬರುವ ಉತ್ತರ ಕರ್ನಾಟಕದ ಪ್ರಾದೇಶಿಕ ಜೀವನವನ್ನು ಕುರಿತು ತಿಳಿಸುತ್ತದೆ. ಕಾದಂಬರಿ ಕಟ್ಟಿಕೊಡುವ ನಿರ್ದಿಷ್ಟ ಪ್ರದೇಶದ ರೈತಾಪಿ ಜೀವನ, ಫ್ಯೂಡಲ್ ವ್ಯವಸ್ಥೆ, ಅದರೊಂದಿಗೆ ಕಂಡು ಬರುವ ಜನಸಾಮಾನ್ಯರ ನೋವು, ಅಸಹಾಯಕತೆ, ವಿಶಿಷ್ಟವಾದ ಆಚರಣೆಗಳು, ಭಾಷೆ, ಸಾಂಸ್ಕೃತಿಕ ವಿಚಾರಗಳೆಲ್ಲವನ್ನು ಈ ಸಂಶೋಧನೆಯು ತಿಳಿಸಿಕೊಡುತ್ತದೆ.

೩. **'ಕನ್ನಡದ ಮೂರು ಪ್ರಾತಿನಿಧಿಕ ಕಾದಂಬರಿಗಳಲ್ಲಿ ಪ್ರಾದೇಶಿಕತೆಯ ಸ್ವರೂಪ'; ಎಸ್.ಬಿ. ಸುಜಾತ; ಕುವೆಂಪು ವಿಶ್ವವಿದ್ಯಾಲಯ, ಶಿವಮೊಗ್ಗ; ೧೯೯೮.**

ಮರಳಿಮಣ್ಣಿಗೆ, ಕಾನೂನು ಹೆಗ್ಗಡತಿ, ಗ್ರಾಮಾಯಣ ಕಾದಂಬರಿಗಳಲ್ಲಿ ಕಂಡುಬರುವ ಪ್ರಾದೇಶಿಕತೆಯನ್ನು ಅಧ್ಯಯನವು ತಿಳಿಸಿಕೊಡುತ್ತದೆ. ಕಾದಂಬರಿಗಳಲ್ಲಿ ಕಂಡುಬರುವ ಪ್ರಾದೇಶಿಕತೆಯನ್ನು ತುಲನಾತ್ಮಕ ದೃಷ್ಟಿಕೋನದಿಂದ ನೋಡಲಾಗಿಲ್ಲ. ಕಾದಂಬರಿಗಳಲ್ಲಿ ಕಂಡುಬರುವ ಪ್ರಾದೇಶಿಕ ವೈಶಿಷ್ಟ್ಯಗಳನ್ನು ವಿಶ್ಲೇಷಿಸಲಾಗಿದೆ.

೪. 'ಕನ್ನಡ ಕಾದಂಬರಿಗಳಲ್ಲಿ ಪ್ರಾದೇಶಿಕತೆ'; ಸಿದ್ದಣ್ಣ ಬಿ. ಉತ್ನಾಳ, ಅನುಪಮ ಪ್ರಕಾಶನ; ಅಥಣಿ; ೧೯೯೦

ಪ್ರಕಟಿತ ಈ ಕೃತಿಯು ಪ್ರಾತಿನಿಧಿಕ ಕನ್ನಡ ಕಾದಂಬರಿಗಳಲ್ಲಿ ಅಭಿವ್ಯಕ್ತವಾಗಿರುವ ಪ್ರಾದೇಶಿಕತೆಯನ್ನು ವಿಶ್ಲೇಷಿಸುತ್ತದೆ. ಪ್ರದೇಶವನ್ನಾಧರಿಸಿ ಕಾದಂಬರಿಗಳ ಪ್ರಾದೇಶಿಕತೆಯನ್ನು ವಿಶ್ಲೇಷಿಸದೆ ಆಯಾ ಕಾದಂಬರಿಗಳಲ್ಲಿ ಕಂಡು ಬರುವ ನಿರ್ದಿಷ್ಟ ಪ್ರದೇಶಗಳ ಪ್ರಾದೇಶಿಕತೆಗಳನ್ನು ತಿಳಿಸುತ್ತದೆ.

೫. ಪ್ರಾದೇಶಿಕತೆಯ ನೆಲೆಯಲ್ಲಿ ಬಳ್ಳಾರಿ ಜಿಲ್ಲೆಯ ಕಥನ ಸಾಹಿತ್ಯ; ಹೆಚ್. ಮಲ್ಲಿಕಾರ್ಜುನ; ಕನ್ನಡ ವಿಶ್ವವಿದ್ಯಾಲಯ ಹಂಪಿ; ೨೦೦೭ (ಎಂ.ಫಿಲ್. ಅಧ್ಯಯನ)

ಹೈದರಾಬಾದ್ ಕರ್ನಾಟಕದ ಭಾಗವಾಗಿರುವ ಬಳ್ಳಾರಿ ಜಿಲ್ಲೆಯ ಕಥನ ಸಾಹಿತ್ಯವನ್ನು ಪ್ರಧಾನ ಆಕರವನ್ನಾಗಿ ಅಧ್ಯಯನವು ಬಳಸಿಕೊಂಡಿದೆ. ಈ ಭಾಗದ ಕಥನ ಸಾಹಿತ್ಯದಲ್ಲಿ ಕಂಡುಬರುವ ಪ್ರಾದೇಶಿಕ ವಿಶಿಷ್ಟತೆಗಳನ್ನು ಇದು ತಿಳಿಸಿಕೊಡುತ್ತದೆ.

ಪ್ರಾದೇಶಿಕತೆಗೆ ಸಂಬಂಧಿಸಿದಂತೆ ಬಿಡಿ ಬಿಡಿಯಾದ ಲೇಖನಗಳು ಕಂಡುಬಂದಿವೆ.

* ಶಿವರಾಮ ಕಾಡನಕುಪ್ಪೆ; ಕುವೆಂಪು ಕಾದಂಬರಿಗಳಲ್ಲಿ ಪ್ರಾದೇಶಿಕತೆ; ಸಾಮಾಜಿಕ ನೆಲೆ; ೧೯೯೯.
* ರಾಜೇಂದ್ರ ಚೆನ್ನಿ; 'ದೇಶೀವಾದ'; ಕರ್ನಾಟಕ ಸಾಹಿತ್ಯ ಅಕಾಡೆಮಿ, ೧೯೯೯ .
* ಡಾ. ಬಿ.ಎ. ವಿವೇಕರೈ; ಪ್ರಾದೇಶಿಕ ಸಂಸ್ಕೃತಿಯ ಪರಿಕಲ್ಪನೆಯಲ್ಲಿ ತುಳುನಾಡು'; ಸಿರಿ ಅಭಿನಂದನಾ ಗ್ರಂಥ.

ಪ್ರಾದೇಶಿಕತೆಗೆ ಸಂಬಂಧಿಸಿದಂತೆ ಕನ್ನಡ ಸಾಹಿತ್ಯದಲ್ಲಿ ಕಂಡುಬಂದ ಅಧ್ಯಯನಗಳು ಹಾಗೂ ಲೇಖನಗಳು ಆ ನೆಲೆಯ ಮುಂದಿನ ಅಧ್ಯಯನಗಳಿಗೆ ಉಪಯುಕ್ತವಾಗಿವೆ. ಪ್ರಸ್ತುತ ಅಧ್ಯಯನವು ಹೈದರಾಬಾದ್ ಕರ್ನಾಟಕದ ಕಥನ ಸಾಹಿತ್ಯದಲ್ಲಿ ಪ್ರಾದೇಶಿಕ ಸಂವೇದನೆಯನ್ನು ಕಂಡುಕೊಳ್ಳುವ ಉದ್ದೇಶವನ್ನು ಹೊಂದಿದೆ. ಅಧ್ಯಯನಕ್ಕೆ ಪೂರಕವಾದ ವಿಷಯಗಳ ತಿಳುವಳಿಕೆಗೆ ಈ ಪ್ರದೇಶಕ್ಕೆ ಸಂಬಂಧಿಸಿದಂತೆ ಸಾಹಿತ್ಯಿಕ ಹಾಗೂ ಸಾಹಿತ್ಯೇತರ ವಿಷಯಗಳಲ್ಲಿ ಕಂಡುಬಂದ ಅಧ್ಯಯನಗಳನ್ನು ಅಭ್ಯಸಿಸಲಾಗಿದೆ. ಸಾಹಿತ್ಯೇತರ ವಿಷಯಗಳಿಗೆ ಸಂಬಂಧಿದಂತೆ ಸಮಾಜ ವಿಜ್ಞಾನ, ಚರಿತ್ರೆ, ಮಹಿಳಾ ಅಧ್ಯಯ, ಜಾನಪದ ಕ್ಷೇತ್ರಗಳಲ್ಲಿ ನಡೆದಿರುವ ಅಧ್ಯಯನಗಳನ್ನು ತಿಳಿದುಕೊಳ್ಳಲಾಗಿದೆ.

**ಸಾಹಿತ್ಯಿಕ ವಿಷಯಗಳಲ್ಲಿ ಕಂಡು ಬಂದ ಅಧ್ಯಯನಗಳು**

**೧. 'ಹೈದರಾಬಾದ್ ಕರ್ನಾಟಕದ ಸಾಹಿತ್ಯದಲ್ಲಿ ಸಾಮಾಜಿಕ ವಾಸ್ತವ; ಅಮರೇಶ ನುಗಡೋಣಿ; ಕನ್ನಡ ವಿಶ್ವವಿದ್ಯಾಲಯ, ಹಂಪಿ; ೧೯೯೯.**

ಹೈದ್ರಾಬಾದ ಕರ್ನಾಟಕದ ಸಾಹಿತ್ಯದಲ್ಲಿ ಈ ಪ್ರದೇಶದ ಜನಬದುಕಿನ ವಾಸ್ತವಿಕ ಚಿತ್ರಣ ಕಂಡುಬರುತ್ತಿರುವ ರೀತಿಯನ್ನು ಕಾಲಘಟ್ಟದ ಒತ್ತಡಗಳಿಗೆ ಅನುಗುಣವಾಗಿಯೇ ವಿಶ್ಲೇಷಿಸಿದ್ದಾರೆ. ನಿಜಾಂ

ಆಳ್ವಿಕೆಯ ರಾಜಕೀಯ ಪರಿಸ್ಥಿತಿಗಳು ತಂದೊಡ್ಡಿದ್ದ 'ರಜಾಕಾರರ' ಹಾವಳಿಯಂತಹ ಸಂದಿಗ್ಧತೆಗಳು ಇಲ್ಲಿನ ಜನ ಬದುಕಿನ ಮೇಲೆ ಉಂಟುಮಾಡಿದ ದುಷ್ಪರಿಣಾಮಗಳನ್ನು ತಿಳಿಸಿದ್ದಾರೆ. ತತ್ವಪದಕಾರರು, ಸಾಹಿತಿಗಳು ಈ ಪ್ರದೇಶದ ಬದುಕನ್ನು ಸಾಹಿತ್ಯದಲ್ಲಿ ಪುನರ್‌ರೂಪಿಸಲೇಬೇಕಾಗಿದ್ದರ ತಾತ್ವಿಕತೆಯನ್ನು ಪ್ರಸ್ತುತ ಅಧ್ಯಯನ ಸ್ಪಷ್ಟಪಡಿಸುತ್ತದೆ.

೨. **ಹೈದರಾಬಾದ್ ಕರ್ನಾಟಕದ ನಾಟಕ ಸಾಹಿತ್ಯ ಒಂದು ಅಧ್ಯಯನ; ಆರ್. ಅಮೃತ ಕಟಕೆ; ಗುಲಬರ್ಗಾ ವಿಶ್ವವಿದ್ಯಾಲಯ; ೨೦೦೪**

ಈ ಅಧ್ಯಯನವು ಹೈದರಾಬಾದ್ ಕರ್ನಾಟಕದ ರಂಗಭೂಮಿಯ ಬೆಳವಣಿಗೆಯನ್ನು ಕುರಿತು ತಿಳಿಸುತ್ತದೆ. ವೃತ್ತಿರಂಗಭೂಮಿ, ಆಧುನಿಕನಾಟಕಗಳು, ನವ್ಯನಾಟಕಗಳು, ಪ್ರಸಾರ ಮಾಧ್ಯಮದ ನಾಟಕಗಳು, ಅನ್ಯಭಾಷಾ ಪ್ರೇರಣೆಯ ನಾಟಕಗಳು, ಇತ್ಯಾದಿ ನಾಟಕದ ವಿವಿಧ ಪ್ರಕಾರಗಳ ಹಿನ್ನೆಲೆಯಲ್ಲಿ ಅಧ್ಯಯನವನ್ನು ಕೈಗೊಂಡಿದ್ದು ಪ್ರದೇಶಕ್ಕೆ ಸಂಬಂಧಿಸಿದಂತೆ ಅವುಗಳ ವಿಶಿಷ್ಟತೆಯನ್ನು ಹಾಗೂ ನಾಟಕ ಸಾಹಿತ್ಯಕ್ಕೆ ಪ್ರದೇಶದಿಂದ ಸಂದ ಕೊಡುಗೆಯನ್ನು ತಿಳಿಸಿದ್ದಾರೆ.

೩. **ಹೈದರಾಬಾದ್ ಕರ್ನಾಟಕದ ಕನ್ನಡ ಲೇಖಕಿಯರ ಸಂಶೋಧನಾ ಕೃತಿಗಳು; ಎಸ್. ಐಶ್ವರಿ; ಗುಲಬರ್ಗಾ ವಿಶ್ವವಿದ್ಯಾಲಯ, ೧೯೯೯.**

ಈ ಪ್ರದೇಶದ ಕನ್ನಡ ಲೇಖಕಿಯರ ಸಂಶೋಧನಾ ಕೃತಿಗಳನ್ನು ಕುರಿತಾದ ಚರ್ಚೆ ಈ ಅಧ್ಯಾಯದಲ್ಲಿದೆ. ಸಾಹಿತ್ಯ ಕ್ಷೇತ್ರಕ್ಕೆ ಸಂಬಂಧಿಸಿದ ಮಹಿಳೆಯರ ಸೇವೆ ಈ ಅಧ್ಯಯನದಿಂದ ತಿಳಿದು ಬರುತ್ತದೆ.

೪. **ಹೈದರಾಬಾದ್ ಕರ್ನಾಟಕದ ಕವಿಕಾವ್ಯ; ಕುಲಕರ್ಣಿ ಶಿವರಾಜ; ಗುಲಬರ್ಗಾ ವಿಶ್ವವಿದ್ಯಾಲಯ; ೧೯೯೭.**

ಈ ಪ್ರದೇಶದ ಪ್ರಾತಿನಿಧಿಕ ಕವಿಗಳ ಕಾವ್ಯವನ್ನಾಧರಿಸಿದ ಅಧ್ಯಯನವು ಕಾವ್ಯದಲ್ಲಿ ಅಭಿವ್ಯಕ್ತಗೊಂಡಿರುವ ವಿಭಿನ್ನ ಆಶಯಗಳನ್ನು ತಿಳಿಸಿಕೊಟ್ಟಿದೆ.

೫. **ಹೈದರಾಬಾದ್ ಕರ್ನಾಟಕದ ಬಂಡಾಯ ಸಾಹಿತ್ಯ ಪರಂಪರೆ; ಜೋಶಿ ಮಧುಸೂದನಾಚಾರ್ಯ; ಗುಲಬರ್ಗಾ ವಿಶ್ವವಿದ್ಯಾಲಯ; ೧೯೯೭.**

ಹೈದರಾಬಾದ್ ಕರ್ನಾಟಕದ ಬಂಡಾಯ ಸಾಹಿತ್ಯ ನಡೆದು ಬಂದ ದಾರಿ ಹಾಗೂ ಸಾಹಿತ್ಯದಲ್ಲಿ ಅಭಿವ್ಯಕ್ತಗೊಂಡಿರುವ ಬಂಡಾಯದ ಸ್ವರೂಪವನ್ನು ಅಧ್ಯಯನ ತಿಳಿಸಿಕೊಡುತ್ತದೆ.

೬. **ಹೈದರಾಬಾದ್ ಕರ್ನಾಟಕದ ಜಾನಪದ ಸಾಹಿತ್ಯ ಒಂದು ಅಧ್ಯಯನ; ಬಿ.ಎಸ್. ಪಾಟೀಲ್; ಕರ್ನಾಟಕ ವಿಶ್ವವಿದ್ಯಾಲಯ; ೧೯೮೪.**

ಹೈದರಾಬಾದ್ ಕರ್ನಾಟಕದಲ್ಲಿ ಪ್ರಚಲಿತವಿರುವ ಮೌಖಿಕ ಹಾಗೂ ಲಿಖಿತ ಜಾನಪದ ಸಾಹಿತ್ಯದ ವೈಶಿಷ್ಟ್ಯವನ್ನು ಈ ಅಧ್ಯಯನವು ತಿಳಿಸಿಕೊಡುತ್ತದೆ.

೭. ಹೈದರಾಬಾದ್ ಕರ್ನಾಟಕ ಪ್ರದೇಶದ ಮಾದಿಗರು ಒಂದು ಅಧ್ಯಯನ; ಬುದ್ಧಾ, ಕಾಶಪ್ಪ, ಸಾಯಪ್ಪ; ಗುಲಬರ್ಗಾ ವಿಶ್ವವಿದ್ಯಾಲಯ; ೨೦೦೫.

ಮಾದಿಗೆ ಸಮುದಾಯದ ಬದುಕಿನ ವಾಸ್ತವಿಕ ಪರಿಸ್ಥಿತಿಗಳನ್ನು ತಿಳಿಸುತ್ತಲೇ, ಈ ಭಾಗದ ಸಾಹಿತ್ಯದಲ್ಲಿ ಇವರಿಗೆ ಸಂಬಂಧಿಸಿದಂತೆ ಕಂಡುಬಂದ ಉಲ್ಲೇಖಗಳನ್ನು ವಿಶ್ಲೇಷಿಸಿದ್ದಾರೆ. ಅವಕಾಶ ವಂಚಿತವಾದ ಈ ಸಮುದಾಯದ ಸ್ಥಿತಿಗತಿಗಳನ್ನು ಈ ಅಧ್ಯಯನವು ತಿಳಿಸಿಕೊಡುತ್ತದೆ.

೮. ಹೈದರಾಬಾದ್ ಕರ್ನಾಟಕದ ಸಾಹಿತ್ಯದಲ್ಲಿ ಮಹಿಳಾ ಬದುಕಿನ ಪ್ರತಿನಿಧೀಕರಣ; ಬಿದರಿ ಚಂದ್ರಭಾಗಾ; ಕನ್ನಡ ವಿಶ್ವವಿದ್ಯಾಲಯ; ೨೦೦೭.

ಹೈದರಾಬಾದ್ ಕರ್ನಾಟಕದ ಸಾಹಿತ್ಯ ಪ್ರಕಾರಗಳಲ್ಲಿ ಸ್ತ್ರೀ ಬದುಕಿಗೆ ಸಂಬಂಧಿಸಿದಂತೆ ಕಂಡುಬರುವ ವಿಷಯಗಳನ್ನು ಸ್ತ್ರೀವಾದಿ ಹಿನ್ನೆಲೆಯಲ್ಲಿ ವಿಶ್ಲೇಷಿಸಿದೆ. ಬದುಕಿನ ಅಸಹಾಯಕತೆಯ ನೆಲೆಗಳನ್ನು ವ್ಯವಸ್ಥೆಯ ಶೋಷಣೆಯನ್ನು ವಿರೋಧಿಸಿ, ನಿಲ್ಲುವ ಸ್ತ್ರೀ ಬದುಕಿನ ದಿಟ್ಟತನ ಇತ್ಯಾದಿ ವಿಷಯಗಳನ್ನು ಸಮುದಾಯ ಹಾಗೂ ಸಾಮಾಜಿಕ ಸ್ಥಾನಮಾನಗಳ ಹಿನ್ನೆಲೆಯಲ್ಲಿ ಗುರುತಿಸಿದೆ.

೯. ಹೈದರಾಬಾದ್ ಕರ್ನಾಟಕದ ವೀರಶೈವ ಮಠಗಳು ಒಂದು ಅಧ್ಯಯನ ರಮೇಶ ಮೂಲಗೆ; ಕನ್ನಡ ವಿಶ್ವವಿದ್ಯಾಲಯ ಹಂಪಿ; ೨೦೦೪.

೧೦. ಲಿಂಗ್ವಿಸ್ಟಿಕ್ ಎನೆಲಿಸ್ ಆಫ್ ಕೊಲೆಕ್ಯುಯಿಮಲ ಕನ್ನಡ ಇನ ಬೀದರ್ ಡಿಸ್ಟ್ರಿಕ್ಟ್ (ಇಂಗ್ಲಿಷ್) ಮುರಿಗೆಪ್ಪ ಎ,; ಕರ್ನಾಟಕ ವಿಶ್ವವಿದ್ಯಾಲಯ, ೧೯೭೮.

ಈ ಪ್ರದೇಶದ ನಿರ್ದಿಷ್ಟ ಜಿಲ್ಲೆಯನ್ನು ಅಧ್ಯಯನಕ್ಕೆ ಆಯ್ದುಕೊಂಡಿರುವುದು ಕೆಲವು ಅಧ್ಯಯನಗಳಲ್ಲಿ ತಿಳಿದುಬರುತ್ತದೆ.

* ಕನ್ನಡ ಸಾಹಿತ್ಯಕ್ಕೆ ಬೀದರ ಜಿಲ್ಲೆಯ ಕೊಡುಗೆ : ಒಂದು ಅಧ್ಯಯನ; ಕಳಸೆ ಹಾವಗಿರಾವ್; ಉಸ್ಮಾನಿಯ ವಿಶ್ವವಿದ್ಯಾಲಯ, ೧೯೯೬.
* ದೇವೇಂದ್ರಕುಮಾರ ಹಕಾರಿ ಮತ್ತು ಅವರ ಸಾಹಿತ್ಯ; ವಿ.ಖೋತ ಬಸವರಾಜ; ಗುಲಬರ್ಗಾ ವಿಶ್ವವಿದ್ಯಾಲಯ; ೧೯೯೮.
* ರಾಯಚೂರು ಜಿಲ್ಲೆಯ ಹರಿದಾಸ ಸಾಹಿತ್ಯ; ವಿಜಯಲಕ್ಷ್ಮೀ ಮಂಗಳಮೂರ್ತಿ, ಗುಲಬರ್ಗಾ ವಿಶ್ವವಿದ್ಯಾಲಯ; ೧೯೯೬.
* ರಾಯಚೂರು ಪರಿಸರದ ಶರಣ ಸಾಹಿತ್ಯ : ಒಂದು ಅಧ್ಯಯನ; ನಾಗರಾಜ ಹೀರಾ; ಗುಲಬರ್ಗಾ ವಿಶ್ವವಿದ್ಯಾಲಯ; ೨೦೦೨.
* ಗುಲಬರ್ಗಾ ಜಿಲ್ಲೆಯ ಕೃಷಿ ಮತ್ತು ಪಾರಿಭಾಷಿಕ ಕನ್ನಡ ಪದಗಳು ಒಂದು ಭಾಷಿಕ ಮತ್ತು ಸಾಂಸ್ಕೃತಿಕ ಅಧ್ಯಯನ; ವಿರಕ್ತ ಮಠ ಎಸ್.ಜಿ.; ಮದ್ರಾಸ್ ವಿಶ್ವವಿದ್ಯಾಲಯ; ೧೯೭೦.
* ಬಳ್ಳಾರಿ ಜಿಲ್ಲೆಯ ಬಯಲಾಟಗಳು; ದುರ್ಗಾದಾಸ್ ಕೆ.ಆರ್.; ಗುಲಬರ್ಗಾ ವಿಶ್ವವಿದ್ಯಾಲಯ; ೧೯೮೯.

* ಬೀದರ ಜಿಲ್ಲೆಯ ಸ್ಥಳನಾಮಗಳು; ಬೈಜನಾಥ ಭಂಡೆ; ಗುಲಬರ್ಗಾ ವಿಶ್ವವಿದ್ಯಾಲಯ; ೧೯೯೨
* ಬೀದರ ಜಿಲ್ಲೆಯ ಕೋಲಾಟ ಒಂದು ಅಧ್ಯಯನ ಸೋಮನಾಥ ನುಚ್ಚಾ; ಗುಲಬರ್ಗಾ ವಿಶ್ವವಿದ್ಯಾಲಯ ೧೯೯೩.
* ಬಳ್ಳಾರಿ ಜಿಲ್ಲೆಯ ಸ್ಥಳನಾಮಗಳು; ವೀರಭದ್ರ ಶರ್ಮ ಕೆ.ಎಂ.; ಬೈಜನಾಥ ಭಂಡೆ; ಗುಲಬರ್ಗಾ ವಿಶ್ವವಿದ್ಯಾಲಯ; ೧೯೯೪.
* ಗುಲಬರ್ಗಾ ಜಿಲ್ಲೆಯ ಸಂಪ್ರದಾಯದ ಹಾಡುಗಳು; ಯಶೋಧಶಾಸ್ತ್ರಿ; ಗುಲಬರ್ಗಾ ವಿಶ್ವವಿದ್ಯಾಲಯ; ೧೯೯೫.
* ಕಲಬುರ್ಗಿ ಕನ್ನಡ ವರ್ಣನಾತ್ಮಕ ವ್ಯಾಖ್ಯಾನ; ನಾಗೇಂದ್ರ ಎಸ್.ಮಸೂತಿ; ಗುಲಬರ್ಗಾ ವಿಶ್ವವಿದ್ಯಾಲಯ, ೧೯೯೭.
* ಬಳ್ಳಾರಿ ಜಿಲ್ಲೆಯ ಜನಪದ ವೃತ್ತಿಗಾಯಕರು; ಆರ್. ಚೇತನಕುಮಾರ; ಗುಲಬರ್ಗಾ ವಿಶ್ವವಿದ್ಯಾಲಯ, ೧೯೯೭.
* ಬಳ್ಳಾರಿ ಜಿಲ್ಲೆಯ ರಂಗಭೂಮಿ ಒಂದು ಅಧ್ಯಯನ; ದ್ಯಾಮಪ್ಪ ಕಿನ್ನಾಳ; ಗುಲಬುರ್ಗಾ ವಿಶ್ವವಿದ್ಯಾಲಯ; ೨೦೦೧.
* ರಾಯಚೂರು ಹಾಗೂ ಕೊಪ್ಪಳ ಜಿಲ್ಲೆಗಳ ಕೋಟೆಗಳು ಒಂದು ಅಧ್ಯಯನ; ಸುಜಾತ ಮಲ್ಲನಗೌಡ; ಕನ್ನಡ ವಿಶ್ವವಿದ್ಯಾಲಯ, ಹಂಪಿ; ೨೦೦೧.
* ಬಳ್ಳಾರಿ ಜಿಲ್ಲಾ ಜನಪದ ದೈವಗಳು; ಗೋವಿಂದ; ಕನ್ನಡ ವಿಶ್ವವಿದ್ಯಾಲಯ, ಹಂಪಿ; ೨೦೦೨.
* ಗುಲಬರ್ಗಾ ನಗರದ ಅಂತರ್ಜಾತಿ ವಿವಾಹಿತರು ಒಂದು ಸಮಾಜಶಾಸ್ತ್ರೀಯ ಅಧ್ಯಯನ; ಸುಧೀರ ಡಿ. ಫುಲೆ; ಕನ್ನಡ ವಿಶ್ವವಿದ್ಯಾಲಯ, ಹಂಪಿ; ೨೦೦೨.
* ಬೀದರ ಜಿಲ್ಲೆಯ ಬೇಡ ಬುಡಕಟ್ಟು ಒಂದು ಅರ್ಥಶಾಸ್ತ್ರೀಯ ಅಧ್ಯಯನ; ಸುಚಿತಾನಂದ ಕೆ.; ಕನ್ನಡ ವಿಶ್ವವಿದ್ಯಾಲಯ, ಹಂಪಿ; ೨೦೦೨.
* ಗುಲಬರ್ಗಾ ಜಿಲ್ಲೆಯ ಬುಡಕಟ್ಟು, ರಾಜಕೀಯ ಅಧ್ಯಯನ; ಚನ್ನಮಲ್ಲಪ್ಪ ಜುಬೀರ; ಕನ್ನಡ ವಿಶ್ವವಿದ್ಯಾಲಯ, ಹಂಪಿ; ೨೦೦೨.
* ಕೊಪ್ಪಳ ಒಂದು ಸಾಂಸ್ಕೃತಿಕ ಅಧ್ಯಯನ; ಅಶ್ವಥ್ ಡಿ.ಎಸ್.; ಕನ್ನಡ ವಿಶ್ವವಿದ್ಯಾಲಯ, ಹಂಪಿ; ೨೦೦೨.
* ಬಳ್ಳಾರಿ ಪರಿಸರದ ಕನ್ನಡ-ತೆಲುಗು ದ್ವಿಭಾಷಿಕತೆ - ಸಮಾಜೋ ಭಾಷಿಕ ಅಧ್ಯಯನ; ಭಾಗ್ಯಲಕ್ಷ್ಮಿ; ಕನ್ನಡ ವಿಶ್ವವಿದ್ಯಾಲಯ, ಹಂಪಿ; ೨೦೦೪.
* ಬೀದರ ಕನ್ನಡ ಸಾಮಾಜಿಕ ಹಾಗೂ ಪ್ರಾದೇಶಿಕ ಭೇದಗಳು; ಶ್ರೀನಿವಾಸ ಬೇಂದ್ರೆ; ಕನ್ನಡ ವಿಶ್ವವಿದ್ಯಾಲಯ, ಹಂಪಿ; ೨೦೦೪.

* ಬಳ್ಳಾರಿ ಜಿಲ್ಲೆಯ ಅವಧೂತರು; ಕರಿಯಪ್ಪ ಜೆ.; ಕನ್ನಡ ವಿಶ್ವವಿದ್ಯಾಲಯ, ಹಂಪಿ; ೨೦೦೪.
* ಬಳ್ಳಾರಿ ಜಿಲ್ಲೆಯ ರಂಗನಟಿಯರ ಅಧ್ಯಯನ; ಸುಜಾತ ಎ.; ಕನ್ನಡ ವಿಶ್ವವಿದ್ಯಾಲಯ, ಹಂಪಿ; ೨೦೦೫.

ಸಾಹಿತ್ಯೇತರ ವಿಷಯಗಳಲ್ಲಿ ಕಂಡು ಬಂದ ಅಧ್ಯಯನಗಳು

* ಹೈದರಾಬಾದ್ ಕರ್ನಾಟಕದ ಗ್ರಾಮದೇವತೆಗಳ ಜಾನಪದೀಯ ಅಧ್ಯಯನ; ಚೆನ್ನಣ್ಣವಾಲೀಕಾರ; ಗುಲಬರ್ಗಾ ವಿಶ್ವವಿದ್ಯಾಲಯ; ೧೯೮೪.

  ಈ ಅಧ್ಯಯನವು ಗ್ರಾಮದೇವತೆಗಳ ಪರಿಕಲ್ಪನೆ. ಗ್ರಾಮದೇವತೆಗಳಲ್ಲಿ ಕಂಡುಬರುವ ವರ್ಗೀಕರಣವನ್ನು ತಿಳಿಸಿಕೊಡುತ್ತದೆ. ಹೈದರಾಬಾದ್ ಕರ್ನಾಟಕದಲ್ಲಿ ಕಂಡುಬರುವ ಪ್ರಮುಖ ಗ್ರಾಮದೇವತೆಗಳನ್ನು ಸಾಂಸ್ಕೃತಿಕ ಮೌಲ್ಯಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸಿದೆ.

* **ಹೈದರಾಬಾದ್ ಕರ್ನಾಟಕದ ಜಾತ್ರೆಗಳು : ಒಂದು ಅಧ್ಯಯನ; ಎಚ್. ಜಗನ್ನಾಥ; ಗುಲಬರ್ಗಾ ವಿಶ್ವವಿದ್ಯಾಲಯ, ೧೯೯೫.**

  ಈ ಪ್ರದೇಶದಲ್ಲಿ ಕಂಡುಬರುವ ಪ್ರಮುಖ ದೈವಗಳು ಹಾಗೂ ಅವುಗಳಿಗೆ ಸಂಬಂಧಿಸಿದಂತೆ ರೂಢಿಗೊಂಡಿರುವ ಜಾತ್ರೆಗಳ ಸಾಂಸ್ಕೃತಿಕ ಪ್ರಾಮುಖ್ಯತೆಯನ್ನು ಅಧ್ಯಯನ ತಿಳಿಸಿಕೊಡುತ್ತದೆ.

* **ಹೈದರಾಬಾದ್ ಕರ್ನಾಟಕದ ಹೆಣ್ಣುಮಕ್ಕಳ ಹಾಡುಗಳು : ಒಂದು ಅಧ್ಯಯನ; ಜಯಶ್ರೀ ಗಾಯಕ್ವಾಡ್; ಗುಲಬರ್ಗಾ ವಿಶ್ವವಿದ್ಯಾಲಯ, ೨೦೦೨.**

  ಹೈದರಾಬಾದ್ ಕರ್ನಾಟಕದ ಹೆಣ್ಣುಮಕ್ಕಳ ಹಾಡುಗಳ ಸಂಗ್ರಹಣೆ ಹಾಗೂ ವಿಶ್ಲೇಷಣೆ ಈ ಅಧ್ಯಯನದಲ್ಲಿ ಇದೆ. ಹೆಣ್ಣುಮಕ್ಕಳ ಹಾಡಿನ ಹಿನ್ನೆಲೆಯಲ್ಲಿ ಕಂಡುಬಂದ ಸಾಂಸ್ಕೃತಿಕ ಪರಿಸರವನ್ನು ತಿಳಿಸಿಕೊಡುವುದಲ್ಲದೆ ಸಮಾಜ ವಿಜ್ಞಾನ ಹಿನ್ನೆಲೆಯಲ್ಲಿ ಹಾಡುಗಳನ್ನು ಅರ್ಥೈಸಿದೆ.

* **ಹೈದರಾಬಾದ್ ಕರ್ನಾಟಕದ ಜನಪದ ಸಾಹಿತ್ಯ; ಒಂದು ಸಾಂಸ್ಕೃತಿಕ ಅಧ್ಯಯನ; ಬಿ.ಎಸ್. ಪೋಲೀಸ್ ಪಾಟೀಲ್; ಗುಲಬರ್ಗಾ ವಿಶ್ವವಿದ್ಯಾಲಯ; ೧೯೮೪.**

  ಗದ್ಯ, ಪದ್ಯ ಹಾಗೂ ಮಿಶ್ರ ಸಾಹಿತ್ಯ ಪ್ರಕಾರಗಳನ್ನೇ ಅಧ್ಯಯನದ ಆಕರವನ್ನಾಗಿ ಬಳಸಿಕೊಳ್ಳುವ ಈ ಅಧ್ಯಯನ ಆಯಾ ಜನಪದ ಸಾಹಿತ್ಯ ಪ್ರಕಾರಗಳಲ್ಲಿ ಕಂಡು ಬರುವ ಸಾಮಾಜಿಕ ವಿಷಯಗಳನ್ನೇ ತಿಳಿಸಿಕೊಡುತ್ತದೆ.

* **ಹೈದರಾಬಾದ್ ಕರ್ನಾಟಕದ ಪ್ರದರ್ಶನ ಕಲೆಗಳು; ಎಚ್.ಟಿ. ಪೋತೆ; ಗುಲಬರ್ಗಾ ವಿಶ್ವವಿದ್ಯಾಲಯ; ೧೯೯೪**

  ಈ ಅಧ್ಯಯನವು ಜನಪದ ಪ್ರದರ್ಶನ ಕಲೆಗಳ ವೈಶಿಷ್ಟ್ಯವನ್ನು ತಿಳಿಸಿಕೊಡುವುದಲ್ಲದೆ, ಗೀತಪ್ರಧಾನ ಕಲೆಗಳು, ನೃತ್ಯಪ್ರಧಾನ ಕಲೆಗಳು ಹಾಗೂ ವಾದ್ಯ ಪ್ರಧಾನ ಕಲೆಗಳೆಂಬ

ವರ್ಗೀಕರಣವನ್ನು ಮಾಡಿದೆ. ಈ ವರ್ಗೀಕರಣಗಳ ಹಿನ್ನೆಲೆಯಲ್ಲಿ ಪ್ರದರ್ಶನ ಕಲೆಗಳನ್ನು ವಿಶ್ಲೇಷಿಸಿದೆ.

* **ಹೈದರಾಬಾದ್ ಕರ್ನಾಟಕದ ಜಾನಪದ ಕಾವ್ಯ ಪ್ರಕಾರಗಳು; ಸಿಂಗೆ ಬುದ್ಧಪ್ಪ ಶಂಕರ; ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ; ೨೦೦೫**

  ಈ ಅಧ್ಯಯನವು ಜನಪದ ಕಾವ್ಯ ಪ್ರಕಾರಗಳ ಪರಂಪರೆಯನ್ನು ತಿಳಿಸಿಕೊಡುತ್ತದೆ. ಇದಲ್ಲದೆ ಹೈದರಾಬಾದ್ ಕರ್ನಾಟಕದ ಜನಪದ ವೃತ್ತಿಗಾಯಕರನ್ನು ಉಲ್ಲೇಖಿಸಿದ್ದಾರೆ ಹಾಗೂ ಕಾವ್ಯ ಪ್ರಕಾರಗಳನ್ನು ವಿಶ್ಲೇಷಿಸಿದೆ.

* **ಹೈದರಾಬಾದ್ ಕರ್ನಾಟಕದ ಅಲೆಮಾರಿಗಳ ಸಮಾಜೋ-ಆರ್ಥಿಕ ವ್ಯವಸ್ಥೆ; ಸಿ. ಅಜ್ಜಯ್ಯ; ಕನ್ನಡ ವಿಶ್ವವಿದ್ಯಾಲಯ, ಹಂಪಿ; ೨೦೦೬**

* ಈ ಅಧ್ಯಯನವು ಹೈದರಾಬಾದ್ ಕರ್ನಾಟಕದ ಭೌಗೋಳಿಕ ವ್ಯಾಪ್ತಿ ಹಾಗೂ ಅದರ ಚಾರಿತ್ರಿಕ ಪ್ರಾಧಾನ್ಯತೆಯ ಹಿನ್ನೆಲೆಯೊಂದಿಗೆ ಈ ಪ್ರದೇಶದ ಅಲೆಮಾರಿಗಳ ಬದುಕಿನ ಸ್ಥಿತಿಗತಿಗಳನ್ನು ತಿಳಿಸುತ್ತದೆ.

* **ಗ್ರಾಮೀಣ ಮಹಿಳೆಯ ಸಬಲೀಕರಣ ಒಂದು ಸ್ತ್ರೀವಾದಿ ಅಧ್ಯಯನ (ಹೈದರಾಬಾದ್ ಕರ್ನಾಟಕವನ್ನು ಅನುಲಕ್ಷಿಸಿ) ಉಮಾದೇವಿ ಎಸ್. ಒಡೆಯರ್; ಕನ್ನಡ ವಿಶ್ವವಿದ್ಯಾಲಯ, ಹಂಪಿ; ೨೦೦೯.**

  ಈ ಅಧ್ಯಯನವು ಸ್ತ್ರೀವಾದದ ಸೈದ್ಧಾಂತಿಕ ಚರ್ಚೆಯೊಂದಿಗೆ ಗ್ರಾಮೀಣ ಮಹಿಳೆಯರ ಸಬಲೀಕರಣದಲ್ಲಿ ಸಂಸ್ಥೆಗಳ ಪಾತ್ರ ಹಾಗೂ ಸ್ವ-ಸಹಾಯ ಗುಂಪುಗಳ ಪಾತ್ರವನ್ನು ತಿಳಿಸಿ ಕೊಡುತ್ತದೆ. ಗ್ರಾಮೀಣ ಮಹಿಳೆಯ ಸಬಲೀಕರಣದಲ್ಲಿನ ತೊಡಕುಗಳನ್ನು ಇದು ವಿವರಿಸುತ್ತದೆ.

* **ಹೈದರಾಬಾದ್ ಕರ್ನಾಟಕದ ಕುರುಬರ ಚಾರಿತ್ರಿಕ ಅಧ್ಯಯನ; ಗುರಿಕಾರ ಉಮೇಶ್; ಕನ್ನಡ ವಿಶ್ವವಿದ್ಯಾಲಯ, ಹಂಪಿ; ೨೦೦೯.**

  ಈ ಅಧ್ಯಯನವು ಹೈದರಾಬಾದ್ ಕರ್ನಾಟಕದ ಚಾರಿತ್ರಿಕ ವಿಷಯಗಳ ಜೊತೆಗೆ ಕುರುಬರ ಸಮುದಾಯದ ಚಾರಿತ್ರಿಕ ಹಿನ್ನೆಲೆಯನ್ನು ತಿಳಿಸಿದೆ. ರಾಜಪ್ರಭುತ್ವದಲ್ಲಿ ಕುರುಬರು ಹಾಗೂ ಕುರುಬರ ಸಾಮಾಜಿಕ, ಧಾರ್ಮಿಕ, ಆರ್ಥಿಕ, ಶೈಕ್ಷಣಿಕ ಸ್ಥಿತಿಗತಿಯನ್ನು ಇದು ತಿಳಿಸಿಕೊಡುತ್ತದೆ.

* **ಹೈದರಾಬಾದ್ ಕರ್ನಾಟಕದ ಶಿಲಾಶಾಸನಗಳು ಒಂದು ಅಧ್ಯಯನ; ದೇವಿದಾಸ ಪುಟ್ಟಮಣಿ; ಗುಲಬರ್ಗಾ ವಿಶ್ವವಿದ್ಯಾಲಯ; ೧೯೯೯.**

  ಈ ಅಧ್ಯಯನವು ಪ್ರದೇಶದ ಚಾರಿತ್ರಿಕ ವಿಶ್ಲೇಷಣೆಯ ಜೊತೆಗೆ ಈ ಪ್ರದೇಶದಲ್ಲಿ ಕಂಡು ಬಂದಿರುವ ಶಿಲಾಶಾಸನಗಳನ್ನು ವಿಶ್ಲೇಷಿಸಿದೆ. ಶಿಲಾಶಾಸನಗಳ ಮೂಲಕ ಈ ಪ್ರದೇಶದ ಚಾರಿತ್ರಿಕ ವಿಷಯಗಳನ್ನು ತಿಳಿಸಿಕೊಟ್ಟಿದೆ.

* **ಹೈದರಾಬಾದ್ ಕರ್ನಾಟಕದ ಜೈನ ಕೇಂದ್ರಗಳು; ಬಿ. ಪ್ರಹ್ಲಾದ ರೆಡ್ಡಿ; ಗುಲಬರ್ಗಾ ವಿಶ್ವವಿದ್ಯಾಲಯ; ೧೯೯೯.**

  ಅಧ್ಯಯನವು ಜೈನ ಧಾರ್ಮಿಕ ಪರಂಪರೆಯನ್ನು ಪ್ರದೇಶಕ್ಕೆ ಅನುಗುಣವಾಗಿ ತಿಳಿಸಿಕೊಡುತ್ತದೆ. ಹೈದರಾಬಾದ್ ಕರ್ನಾಟಕದ ಜೈನ ಕೇಂದ್ರಗಳು, ಅವುಗಳ ವಾಸ್ತುಶಿಲ್ಪ ಹಾಗೂ ಜೈನ ಸಾಹಿತ್ಯವನ್ನು ಕುರಿತು ತಿಳಿಸಿಕೊಡುತ್ತದೆ.

ಹೈದರಾಬಾದ್ ಕರ್ನಾಟಕ ಮತ್ತು ಪ್ರಾದೇಶಿಕತೆಗೆ ಸಂಬಂಧಿಸಿದಂತೆ ಕಂಡುಬಂದಿರುವ ಅಧ್ಯಯನಗಳು ಪ್ರಸ್ತುತ ಅಧ್ಯಯನಕ್ಕೆ ಉಪಯುಕ್ತವಾದ ಮಾಹಿತಿಯನ್ನು ನೀಡಿವೆ. ಹೈದರಾಬಾದ್ ಕರ್ನಾಟಕದ ಕಥನ ಸಾಹಿತ್ಯದಲ್ಲಿ ಪ್ರಾದೇಶಿಕ ಸಂವೇದನೆ ಎಂಬ ಶೀರ್ಷಿಕೆಯಡಿ ಕೈಗೊಳ್ಳುತ್ತಿರುವ ಈ ಅಧ್ಯಯನವು ಈವರೆಗೂ ಕಂಡುಬಂದ ಅಧ್ಯಯನಗಳಿಗಿಂತ ಭಿನ್ನವಾಗಿದೆ.

•••

# ಅಧ್ಯಾಯ ಎರಡು

# ಪ್ರಸ್ತಾವನೆ - ವಿಷಯ ಪ್ರವೇಶ

---

# ಅಧ್ಯಾಯ ಎರಡು

# ಪ್ರಸ್ತಾವನೆ - ವಿಷಯ ಪ್ರವೇಶ

## ಪ್ರವೇಶಿಕೆ

ಜಾಗತಿಕ ಇತಿಹಾಸದ ಅಧ್ಯಯನ ಅದರ ಹಿಂದಿನ ಇಂದಿನ ಆಗು-ಹೋಗುಗಳ ತಿಳುವಳಿಕೆಗೆ ಅನಿವಾರ್ಯವಲ್ಲದ ಅಗತ್ಯವೆನಿಸುತ್ತದೆ. 'ಭೂತ'ದ ಬಗೆಗಿನ ತಿಳುವಳಿಕೆ ಅದರ ವರ್ತಮಾನದ ಸ್ಥಿತಿಗತಿಯ ಅರ್ಥೈಸಿಕೊಳ್ಳುವಿಕೆಯ ಮುಖ್ಯ ಸಾಧನವಾಗಬೇಕು. ಜಾಗತಿಕ ಮಟ್ಟದ ಅಧ್ಯಯನಕ್ಕೆ ಇರುವಷ್ಟೇ ಪ್ರಾಮುಖ್ಯತೆ ಪ್ರತಿಯೊಂದು ದೇಶ, ರಾಜ್ಯ, ಪ್ರದೇಶದ ಇತಿಹಾಸದ ಅಧ್ಯಯನಕ್ಕೂ ಇದೆ. ಪ್ರತಿಯೊಂದು ಪ್ರದೇಶದ ಇತಿಹಾಸದ ಅಧ್ಯಯನಕ್ಕಿರುವ ಸಿದ್ಧಮಾದರಿಗಳನ್ನು ಮೀರಿ ಬೇರೆ ಬೇರೆ ನೆಲೆಯಿಂದ ಇತಿಹಾಸ ವನ್ನು ತಿಳಿದುಕೊಳ್ಳುವುದು, ಪುನರಚನೆಗೆ ತೊಡಗುವುದು ಇಂದಿನ ಹೊಸ ದೃಷ್ಟಿಕೋನ. ಐತಿಹಾಸಿಕ ವಿಷಯಗಳ ಮೂಲಕ ಸಾಹಿತ್ಯವನ್ನು ಗ್ರಹಿಸುವುದು ಒಂದು ರೀತಿಯಾದರೆ, ಸಾಹಿತ್ಯದ ಮೂಲಕ ಇತಿಹಾಸವನ್ನು ತಿಳಿದುಕೊಳ್ಳುವುದು ಇನ್ನೊಂದು ರೀತಿ. ಆದರೆ ಇವೆರಡೂ ಪೂರಕವಾಗಿಯೇ ಇರುವುದು ವಿಭಿನ್ನ ಅಧ್ಯಯನಕ್ಕೆ ತೊಡಗಿಕೊಳ್ಳುವುದಕ್ಕೆ ಸಹಕಾರಿಯಾಗಿದೆ. ಐತಿಹಾಸಿಕ ಸಂಗತಿಗಳ ಮೂಲಕ ಪ್ರದೇಶದ ಸ್ಥಿತಿಗತಿಯನ್ನು ತಿಳಿಯುವುದಲ್ಲದೆ ಸಾಹಿತ್ಯದ ಮೂಲಕ ಐತಿಹಾಸಿಕ ಸಂಗತಿಗಳನ್ನು ಮನದಟ್ಟು ಮಾಡಿಕೊಳ್ಳುವ ಅವಕಾಶ ಇಲ್ಲಿನದು.

## ೨.೧. 'ಹೈದರಾಬಾದ್ ಕರ್ನಾಟಕ' ಪರಿಕಲ್ಪನೆಯ ಹಿನ್ನೆಲೆ, ಪ್ರಸ್ತುತತೆ ಮತ್ತು ಔಚಿತ್ಯ

ಪ್ರದೇಶವೊಂದರ ಮೇಲಿನ ವಿದೇಶಿ ಆಕ್ರಮಣ ಆ ಪ್ರದೇಶದ ವಿಶಿಷ್ಟತೆಯನ್ನೇ ತಿಳಿಸುತ್ತದೆ. ಈ ಮಾತು ಭಾರತದ ಮೇಲೆ ಬ್ರಿಟೀಷರು ಆಕ್ರಮಣ ಮಾಡಿದ್ದಕ್ಕೆ ಮಾತ್ರ ಅನ್ವಯಿಸುವುದಿಲ್ಲ. ಸ್ಥಳೀಯ ಅರಸರ ಆಳ್ವಿಕೆಗೂ ಅನ್ವಯಿಸುತ್ತದೆ. ಸ್ವತಂತ್ರಪೂರ್ವ ಭಾರತ ಸ್ಥಳೀಯ ಅರಸರ ಆಳ್ವಿಕೆಯಲ್ಲಿ ಹಂಚಲ್ಪಟ್ಟಿತ್ತು. ಸುಮಾರು ಐದುನೂರ ಐವತ್ತಾರು ಸಂಸ್ಥಾನಗಳು ಭಾರತದಲ್ಲಿದ್ದವು. ಬ್ರಿಟೀಷರ ಸಹಯೋಗದಲ್ಲಿಯೇ ಆಳ್ವಿಕೆ ನಡೆಸುತ್ತಿದ್ದ ಸ್ಥಳೀಯ ಅರಸು ಮನೆತನಗಳಲ್ಲಿ ಹೈದರಾಬಾದ್ ನಿಜಾಮನ ಮನೆತನವೂ ಒಂದು. ಆಯಾ ಪ್ರಾಂತೀಯ ಅರಸರ ಹಿತಾಸಕ್ತಿಗೆ ಅನುಗುಣವಾಗಿ ಭಾರತದ ಅನೇಕ

ಪ್ರಾಂತ್ಯಗಳು ವಿಶಿಷ್ಟವಾಗಿ ರೂಪುಗೊಂಡಿದ್ದವು. ಅಲ್ಲದೆ ಹರಿದು ಹಂಚಿಹೋಗಿದ್ದ ಈ ಪ್ರಾಂತ್ಯಗಳಿಂದ ಭಾರತದಲ್ಲಿ ವಿಲಕ್ಷಣ ಪರಿಸ್ಥಿತಿಯೊಂದು ಉಂಟಾಗಿತ್ತು. ಇದರಿಂದಾಗಿ ಭಾರತ ಸ್ವಾತಂತ್ರ್ಯಕ್ಕೆ ಅಗತ್ಯವಾಗಿದ್ದ ಐಕ್ಯತೆಯ ಮನೋಭಾವಕ್ಕೆ, ರಾಷ್ಟ್ರೀಯತೆಯ ಪ್ರಜ್ಞೆಯ ಜಾಗೃತಿಗೆ ಅಡ್ಡಿಯುಂಟಾಗಿತ್ತು. ಇಂತಹ ಅಖಂಡತೆಯ ಅನುಪಸ್ಥಿತಿಯಲ್ಲಿಯೂ ರಾಷ್ಟ್ರೀಯತೆಯ ಮನೋಭಾವ ಭಾರತ ಸ್ವಾತಂತ್ರ್ಯಕ್ಕೆ ಚಾಲನೆ ನೀಡಿತು. ೧೯೪೭ರಲ್ಲಿ ಭಾರತ ಬ್ರಿಟೀಷ್ ಆಳ್ವಿಕೆಯಿಂದ ಸ್ವಾತಂತ್ರ್ಯ ಪಡೆಯಿತು. ಆದರೆ ಸ್ವತಂತ್ರ ಭಾರತದಲ್ಲಿ ಅಖಂಡತೆಯ ಸಮಸ್ಯೆ ಹಾಗೆಯೇ ಉಳಿಯಿತು. ಈ ರೀತಿ ಅಖಂಡತೆಯ ಸಮಸ್ಯೆಯನ್ನು ಹಾಗೆಯೇ ಉಳಿಸಿ ಹೋಗುವ ಹುನ್ನಾರ ಬ್ರಿಟೀಷ್ ಸರ್ಕಾರದ್ದಾಗಿತ್ತು. ಬ್ರಿಟಿಷರ ಇಂತಹ ಕುಯುಕ್ತಿಯನ್ನು ಸಹಕರಿಸಿದವರು ಸ್ವತಃ ಇದನ್ನು ಅಪೇಕ್ಷಿಸಿದವರು ಪ್ರಾಂತೀಯ ಅರಸರು.

ಸ್ವತಂತ್ರ ಭಾರತದಲ್ಲಿ ಒಂದಾಗದೆ ಉಳಿದಿದ್ದ ಪ್ರಾಂತೀಯ ಅರಸರುಗಳೆಂದರೆ ಹೈದರಾಬಾದ್ ನಿಜಾಮ, ಭೂಪಾಲಿನ ನವಾಬ ಹಾಗೂ ತಿರುವಾಂಕೂರಿನ ಮಹಾರಾಜ, ಬ್ರಿಟೀಷರ ಹಾಗೂ ಸ್ಥಳೀಯ ಅರಸರ ಅಪೇಕ್ಷೆಗಳು ಒಂದೇ ರೀತಿಯ ದುರುದ್ದೇಶದಿಂದ ಕೂಡಿದ್ದು ಪ್ರಾಂತೀಯ ಜನತೆಯನ್ನು ಸ್ವತಂತ್ರ ಭಾರತದಲ್ಲಿ ಒಂದುಗೂಡದಂತೆ ತಡೆದವು. ಇಂಗ್ಲೆಂಡ್ ಸರ್ಕಾರ ಸ್ವತಂತ್ರ ಭಾರತದೊಂದಿಗೆ ಮಾಡಿಕೊಂಡ ಒಪ್ಪಂದ ಸ್ಥಳೀಯ ಅರಸರ ಕುಯುಕ್ತಿಗೆ ಇಂಬು ನೀಡುವಂತಿದ್ದುದು ದಾಖಲಾರ್ಹ ಸಂಗತಿಯಾಗಿದೆ. "೧೯೩೫ರ ಫೆಡರೇಷನ್ ಕಾಯಿದೆ ಐಕ್ಯ ಭಾರತದಲ್ಲಿ ರಾಜರುಗಳಿಗೆ ಮತ್ತು ಸಂಸ್ಥಾನಗಳಿಗೆ ಪ್ರಧಾನ ಸ್ಥಾನವನ್ನು ನೀಡುವುದರ ಮೂಲಕ ಒಂದು ರಾಜಿ ಸೂತ್ರವನ್ನು ಕಂಡುಕೊಳ್ಳಲು ಪ್ರಯತ್ನಿಸಿತು. ಆದರೆ ನಿಜಾಮ ಭೂಪಾಲಿನ ನವಾಬ ಮತ್ತಿತರ ರಾಜರುಗಳ ದೃಢ ನಿಲುವನ್ನು ತಳೆದಿದ್ದರಿಂದ ಈ ಯೋಜನೆಯನ್ನು ಕಾರ್ಯಗತ ಮಾಡಲಾಗಲಿಲ್ಲ. ೧೯೪೭ರಲ್ಲಿ ಬ್ರಿಟಿಷ್ ಸರ್ಕಾರ ಭಾರತದಿಂದ ಕಾಲ್ತೆಗೆಯುವ ಉದ್ದೇಶವನ್ನು ದೃಢಪಡಿಸುವಾಗ ಅವರು ಅದಕ್ಕೆ ಸಂಸ್ಥಾನಗಳ ಮೇಲೆ ತಮ್ಮ ಅಧಿಕಾರ ತಾನಾಗಿಯೇ ಕಳೆದು ಹೋಗುತ್ತದೆಂದೂ ರಾಜರುಗಳು ತಮ್ಮ ಮೂಲ ಸ್ಥಾನವನ್ನು ಪಡೆಯುತ್ತಾರೆಂದು ಒಂದು ಷರತ್ತನ್ನು ಸೇರಿಸಿದರು. ರಾಷ್ಟ್ರೀಯತೆಯ ಬಲಗಳ ಅರಿವಿಲ್ಲದೆ ಕೆಲವು ದೊಡ್ಡ ರಾಜರುಗಳಿಗೆ ತಮ್ಮ ಸ್ವಾತಂತ್ರ್ಯವನ್ನು ಘೋಷಿಸಿಕೊಳ್ಳಲು ಇದು ಒಳ್ಳೆಯ ಅವಕಾಶವೆಂದು ಯೋಚಿಸುವಂತೆ ಮಾಡಿ ಅವರನ್ನು ತಪ್ಪು ಮಾರ್ಗಕ್ಕೆಳೆಯಿತು. ಈ ನಿರ್ಧಾರವನ್ನು ಕಾರ್ಯಗತಗೊಳಿಸಲು ಹೈದರಾಬಾದ್ ಮತ್ತು ತಿರುವಾಂಕೂರುಗಳು ಕ್ರಮಗಳನ್ನು ಕೈಗೊಂಡವು" (ಅನು: ಡಿ.ಎಸ್. ಜಯಪ್ಪಗೌಡ; ೧೯೮೫; ಪುಟ: ೧೫೯ ರಿಂದ ೧೬೦). ಸ್ವಾತಂತ್ರ್ಯಪೂರ್ವದಿಂದಲೂ ಇಂಗ್ಲೆಂಡ್ ಸರ್ಕಾರದಿಂದ ಪ್ರಾಂತೀಯ ಅರಸರು ನಿರೀಕ್ಷಿಸಿದ್ದ ಬಯಕೆ ಈ ಕಾಯ್ದೆಯಿಂದ ಈಡೇರಿತು. ರಾಷ್ಟ್ರೀಯತೆಯ ಮನೋಭಾವದಿಂದ ಭಾರತ ಸ್ವಾತಂತ್ರ್ಯಗೊಂಡಿತೆ ವಿನಹ ಪ್ರಾಂತೀಯ ಅರಸರ ಪ್ರತ್ಯೇಕತೆಯನ್ನು ಸ್ವಾತಂತ್ರ್ಯ ಸಂದರ್ಭದಲ್ಲಿ ತಡೆಯಲಾಗಲಿಲ್ಲ. ತಿರುವಾಂಕೂರಿನಲ್ಲಿ ಜನತಾ ದಂಗೆಯುಂಟಾಗಿ ದಿವಾನರ ಆಳ್ವಿಕೆ ಕೊನೆಗೊಂಡಿತು. ಆದರೆ ಹೈದರಾಬಾದ್ ನಿಜಾಮ ಸ್ವಾತಂತ್ರ್ಯ ಭಾರತದ ಒಕ್ಕೂಟಕ್ಕೆ ಸೇರಲು ಒಪ್ಪಲಿಲ್ಲ. ಸ್ವಾತಂತ್ರ್ಯ

ಭಾರತವನ್ನು ತಮ್ಮ ಅನುಭವಕ್ಕೂ ತಂದುಕೊಳ್ಳಲಾಗದ ಸ್ಥಿತಿ ನಿಜಾಂ ಆಳ್ವಿಕೆಯಲ್ಲಿ ಉಳಿದಿದ್ದ ಭಾರತೀಯರದ್ದಾಗಿತ್ತು. ಆರಂಭದಿಂದಲೂ ನಿಜಾಂ ಆಡಳಿತವನ್ನು ವಿರೋಧಿಸುತ್ತಿದ್ದ ಸ್ಥಳೀಯ ಜನತೆಗೆ ನಿಜಾಂ ಆಡಳಿತದ ಕ್ರೌರ್ಯ ಮತ್ತಷ್ಟು ಮನದಟ್ಟಾಯಿತು. ಬ್ರಿಟೀಷ್ ಆಳ್ವಿಕೆಯ ಅಂತ್ಯದೊಂದಿಗೆ ನಿಜಾಮರ ಆಳ್ವಿಕೆಯೂ ಕೊನೆಗೊಳ್ಳುತ್ತದೆಂಬ ಈ ಪ್ರಾಂತ್ಯದ ಜನತೆಯ ನಿರೀಕ್ಷೆ ಹುಸಿಯಾಯಿತು. ನಿಜಾಂ ಆಳ್ವಿಕೆಯಲ್ಲಿದ್ದ ಜನತೆ ಸ್ವಾತಂತ್ರ್ಯಕ್ಕೆ ಪ್ರೇರಿತವಾದದ್ದು ಕೇವಲ ರಾಷ್ಟ್ರೀಯತೆಯಿಂದಲ್ಲ. ಪ್ರಾದೇಶಿಕವಾದ ಪ್ರೇರಣೆಯೂ ಇದಕ್ಕಿತ್ತು. ಇದರಂತೆ ಇಲ್ಲಿನ ಜನ ಹೋರಾಟಕ್ಕಿಳಿದ ಸ್ವರೂಪ ಪ್ರಾದೇಶಿಕವಾದದ್ದು. ನಿಜಾಮನ ಆಳ್ವಿಕೆಯಲ್ಲಿದ್ದ ಸ್ಥಳೀಯ ಜನರ ಸ್ವಾತಂತ್ರ್ಯ ಹೋರಾಟ ಪ್ರದೇಶಾಭಿಮಾನದಿಂದ ಕೂಡಿದ್ದು. ಈ ಪ್ರಾದೇಶಿಕ ಅಭಿಮಾನ ಇಡೀ ಪ್ರದೇಶವನ್ನು ಭಾರತ ಸರ್ಕಾರದಲ್ಲಿ ಒಂದಾಗಿಸುವ ನೆಲೆಯದ್ದೇ ವಿನಹ ಪ್ರತ್ಯೇಕಿಸುವ ನೆಲೆಯದ್ದಲ್ಲ.

'ಹೈದರಾಬಾದ್ ಕರ್ನಾಟಕ'ವೆಂದು ಗುರುತಿಸುವ ಪೂರ್ವದಲ್ಲಿ ಈ ಪ್ರದೇಶದ ಗುರುತಿಸುವಿಕೆ ವಿಶಿಷ್ಟವಾಗಿದೆ. ನಿಜಾಂ ಆಕ್ರಮಣದ ಮೊದಲೇ ಈ ಪ್ರದೇಶ ಅನೇಕ ರಾಜಮನೆತನಗಳ ಆಳ್ವಿಕೆಯನ್ನು ಕಂಡಿದೆ. ಮೌರ್ಯರು, ಶಾತವಾಹನರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು ಮುಂತಾದವು ಈ ಪ್ರದೇಶವನ್ನಾಳಿದ ರಾಜಮನೆತನಗಳು. ಈ ರಾಜಮನೆತನಗಳ ಆಳ್ವಿಕೆಯ ಸಂದರ್ಭದ ಕೆಲ ಮಹತ್ವಪೂರ್ಣ ಸಾಂಸ್ಕೃತಿಕ ಘಟನೆಗಳು ಇದನ್ನು ವಿಶಿಷ್ಟವಾಗಿಸಿವೆ. ಆದರೆ ಹೀಗೆ ಆಳ್ವಿಕೆ ನಡೆಸಿದ ಯಾವ ರಾಜಮನೆತನದಿಂದಲೂ ಈ ಪ್ರದೇಶವನ್ನು ಗುರುತಿಸಲಾಗಿಲ್ಲ. 'ಉತ್ತರಕ್ಕೆ ಕೃಷ್ಣಾನದಿ ದಕ್ಷಿಣಕ್ಕೆ ತುಂಗಭದ್ರಾ ನದಿಗಳ ನಡುವಿನ ಪ್ರದೇಶವೆಂದು' ಡಾ. ಜೆ.ಎಫ್. ಫ್ಲೀಟರು ಗುರುತಿಸಿದ ಈ ಭೌಗೋಳಿಕ ಪ್ರದೇಶ 'ಎಡದೊರೆ' ನಾಡೆಂದು ಹೆಸರು ಪಡೆದಿತ್ತು. ಇಡೀ ಪ್ರದೇಶ ತನ್ನ ಭೌಗೋಳಿಕತೆಯ ಕಾರಣದಿಂದ ಇಂತಹ ಹೆಸರನ್ನು ಪಡೆದಿದೆ. ಇದು ಯಾವ ರಾಜಮನೆತನವನ್ನು ಸೂಚಿಸುವುದಿಲ್ಲವೆಂಬುದು ಸ್ಪಷ್ಟವಾಗಿ ತಿಳಿದುಬರುತ್ತದೆ. ಇದನ್ನೇ 'ದೊ ಆಬ್' ಪ್ರದೇಶವೆಂದು ಮುಂದೆ ಕರೆಯಲಾಯಿತು. ಕೃಷ್ಣ, ತುಂಗಭದ್ರಾ ನದಿಗಳ ಮಧ್ಯದ ಈ ಪ್ರದೇಶ ಫಲವತ್ತತೆಗೆ ಹೆಸರುವಾಸಿಯಾಗಿತ್ತು. "ಆಹಾರ ಧಾನ್ಯಗಳು, ಎಣ್ಣೆ ಬೀಜಗಳು, ಖನಿಜ ಸಂಪತ್ತಿನಿಂದ ಆದಾಯ ತರುವ ನಾಡಾಗಿತ್ತು. ಈ ಕಾರಣಕ್ಕಾಗಿಯೇ ಚರಿತ್ರೆಯುದ್ದಕ್ಕೂ ಈ ನಾಡಿಗಾಗಿ ರಾಜ್ಯ-ರಾಜ್ಯಗಳ ನಡುವೆ ಯುದ್ಧಗಳು ನಡೆದವು" (ಅಮರೇಶ ನುಗಡೋಣಿ; ೨೦೦೩; ಪುಟ : ೨೦). ಮೊದಲೇ ತಿಳಿಸಿದಂತೆ ಪ್ರದೇಶವೊಂದರ ಮೇಲಿನ ಆಕ್ರಮಣ ಆ ಪ್ರದೇಶದ ವಿಶಿಷ್ಟತೆಯನ್ನೇ ತಿಳಿಸುತ್ತದೆ. ಫಲವತ್ತಾದ ಎಡೆದೊರೆ ನಾಡಿನ ಮಹತ್ವ ನಿರಂತರವಾಗಿ ಈ ಪ್ರದೇಶವನ್ನು ತಮ್ಮದಾಗಿಸಿಕೊಳ್ಳಬಯಸಿದ ರಾಜರ ಆಕ್ರಮಣದಿಂದ ಸ್ಪಷ್ಟಗೊಳ್ಳುತ್ತದೆ. ಆದರೆ ಈ ಪ್ರದೇಶ ಇಡಿಯಾಗಿ ಒಂದೇ ರಾಜಮನೆತನದ ಆಳ್ವಿಕೆಗೆ ಒಳಗಾಗಿಲ್ಲ. ಕಾರಣ ಈ ಪೂರ್ವದಲ್ಲಿ ಇದು ನಿರ್ದಿಷ್ಟವಾಗಿ ಯಾವೊಂದು ರಾಜಮನೆತನದಿಂದ ಗುರುತಿಸಲ್ಪಟ್ಟಿಲ್ಲ. ಭೌಗೋಳಿಕವಾಗಿ ಮಾತ್ರವಲ್ಲದೆ, ಸೂಚಿತ ರಾಜಮನೆತನಗಳ ಆಳ್ವಿಕೆಯ ಸಂದರ್ಭದ ಕೆಲ ಮಹತ್ವಪೂರ್ಣ ಸಾಂಸ್ಕೃತಿಕ ಘಟನೆಗಳು ಈ ಪ್ರದೇಶವನ್ನು ವಿಶಿಷ್ಟವಾಗಿಸಿವೆ. ಸಾಹಿತ್ಯಿಕ ಕಾರಣಗಳಿಗೆ, ಕಲೆವಾಸ್ತುಶಿಲ್ಪಗಳ ಕಾರಣಗಳಿಗೆ, ಅನುಭಾವಿಗಳ ಕ್ರಾಂತಿಯ

ನೆಲೆಯಾದ ಕಾರಣಕ್ಕೆ ಈ ನೆಲ ನಿಜಾಂ ಆಳ್ವಿಕೆಯ ಪೂರ್ವದಿಂದಲೂ ವಿಶಿಷ್ಟವಾಗಿದೆ. ಈ ಪ್ರದೇಶ ಬಹಮನಿ ಸುಲ್ತಾನರಿಂದ ಆಳ್ವಿಕೆಗೆ ಒಳಗಾದ ಸಂದರ್ಭದಲ್ಲಿಯೂ ಇಲ್ಲಿನ ವೈಶಿಷ್ಟ್ಯಗಳು ಅಭಾದಿತ ವಾಗಿಯೇ ಮುಂದುವರೆದವು. ಆದರೆ ಈ ನೆಲದ ಮುಖ್ಯ ಸಾಂಸ್ಕೃತಿಕ ಪರಿವರ್ತನೆಗಳನ್ನು, ವಿಶಿಷ್ಟತೆಗಳನ್ನು ಮುಂದುವರಿಸಿಕೊಂಡು ಹೋಗಲಾರದ ಸ್ಥಿತಿ ಇಲ್ಲಿನ ಜನತೆಗೆ ಒದಗಿತು. ಕಾರಣ ನಿಜಾಂ ಮನೆತನ ಈ ಪ್ರದೇಶವನ್ನು ಆಕ್ರಮಿಸಿತು. ಇಲ್ಲಿನ ಸಂಸ್ಕೃತಿಗಿಂತ ಭಿನ್ನವಾದ ಸಂಸ್ಕೃತಿ ಆಡಳಿತಕ್ರಮ ಇವರದಾಗಿತ್ತು ಎಂಬುದು ಮಾತ್ರವೇ ಇದಕ್ಕೆ ಕಾರಣವಲ್ಲ. ಸ್ಥಳೀಯ ಭಾಷೆ, ಧರ್ಮ ವೈವಿಧ್ಯಮಯ ಜನಜೀವನವನ್ನು ಈ ಮನೆತನದವರು ಸಹಿಷ್ಣುತೆಯಿಂದ ಕಾಣಲಿಲ್ಲ. ಹೀಗಾಗಿ ಈ ಪ್ರದೇಶದಲ್ಲಿದ್ದ ಸಾಂಸ್ಕೃತಿಕ ಬದುಕು ನಿಜಾಮನ ಆಳ್ವಿಕೆಯ ಸಂದರ್ಭಕ್ಕೆ ಚರಿತ್ರೆಯಾಗತೊಡಗಿತು. ಈ ಪ್ರದೇಶವನ್ನು ಆಕ್ರಮಿಸಿದ ಕೊನೆಯ ಮನೆತನ ನಿಜಾಮರದು. "ಭೌಗೋಳಿಕವಾಗಿ ಮತ್ತು ಜನಸಂಖ್ಯೆ ದೃಷ್ಟಿಯಿಂದ ಬಹುದೊಡ್ಡ ಸಂಸ್ಥಾನವಾಗಿತ್ತು. ತೆಲಂಗಾಣದ ಎಂಟು ಜಿಲ್ಲೆಗಳು, ಮರಾಠವಾಡದ ಐದು ಜಿಲ್ಲೆಗಳು, ಕರ್ನಾಟಕದ ಮೂರು ಜಿಲ್ಲೆಗಳು ಹೀಗೆ ಹದಿನಾರು ಜಿಲ್ಲೆಗಳ ಪ್ರದೇಶವನ್ನು ಹೊಂದಿತ್ತು. ತೆಲಂಗಾಣದ ಎಂಬತ್ತು ಲಕ್ಷ, ಮರಾಠವಾಡದ ನಲವತ್ತು ಲಕ್ಷ, ಕರ್ನಾಟಕದ ಇಪ್ಪತ್ತು ಲಕ್ಷ ಹೀಗೆ ಒಂದೂವರೆ ಕೋಟಿ ಜನಸಂಖ್ಯೆಯನ್ನು ಹೊಂದಿತ್ತು. ಸಂಸ್ಥಾನದಲ್ಲಿ ಐದು ಕೋಟಿ ಎಕರೆ ಜಮೀನು ಜಹಗೀರದಾರರ, ಒಂದು ಕೋಟಿ ಎಕರೆ ಜಮೀನು ದೇಶಮುಖಿ ಹಾಗೂ ದೇಸಾಯಿಗಳ ಒಡೆತನದಲ್ಲಿತ್ತು. ಸ್ವತಃ ನಿಜಾಮನಿಗೆ ಐವತ್ತು ಲಕ್ಷ ಎಕರೆಗಿಂತಲೂ ಹೆಚ್ಚು ಜಮೀನಿತ್ತು" (ಡಾ. ಅಮರೇಶ ನುಗಡೋಣಿ; ೨೦೦೩; ಪುಟ: ೧೨). ವಿಸ್ತಾರವಾಗಿ ಭೌಗೋಳಿಕ ಪ್ರದೇಶವನ್ನು ಹೊಂದಿತ್ತು ಹಾಗೂ ಕೇವಲ ಕನ್ನಡ ಭಾಷಿಕರಲ್ಲದೆ ತೆಲಂಗಾಣದ ತೆಲುಗು ಭಾಷಿಕ ಜನತೆ, ಮರಾಠವಾಡದ ಮರಾಠಿ ಭಾಷಿಕ ಜನತೆಯೂ ಸಹ ಈ ಪ್ರದೇಶದಲ್ಲಿ ವಾಸವಾಗಿತ್ತು. ಸ್ವತಂತ್ರಪೂರ್ವದಿಂದಲೂ ನಿಜಾಮ ಮನೆತನದ ಆಳ್ವಿಕೆಯೊಂದಿಗೆ ಈ ಪ್ರದೇಶ ಗುರುತಿಸಿಕೊಂಡಿದೆ. "ಈ ರಾಜಮನೆತನದ ನಿಜಾಮರು ತಮ್ಮನ್ನು ಮೊಗಲರ ಉತ್ತರಾಧಿಕಾರಿಗಳೆಂದೆ ಕರೆದುಕೊಂಡಿದ್ದಾರೆ" (ಬಸವರಾಜ ಪೋಲಿಸ್ ಪಾಟೀಲ; ೨೦೦೨; ಪುಟ: ೧೮). ಇವರ ಆಳ್ವಿಕೆಯಲ್ಲಿದ್ದ ಕರ್ನಾಟಕದ ಪ್ರದೇಶವನ್ನು ಮೊಗಲಾಯಿ ಎಂದು ಕರೆಯಲಾಗಿದೆ. ಇನ್ನು ಈ ರಾಜಮನೆತನಕ್ಕೆ ಸಂಬಂಧಿಸಿದಂತೆ ಅಸಫ್‌ಜಾಹೀ ಮನೆತನದ ಮೊದಲ ನವಾಬ 'ನಿಜಾಂ ಮುಲ್ಮಾಲ್ಕ್' ಎಂಬುವನಾದ್ದರಿಂದ 'ನಿಜಾಂ ಸಂಸ್ಥಾನ'ವೆಂದು ಸಹ ಈ ಪ್ರದೇಶವನ್ನು ಕರೆಯುತ್ತಾರೆ. ಈ ಮನೆತನದ ಹಿನ್ನೆಲೆ ಮತ್ತು ಆಳ್ವಿಕೆ ಮಾಡಿದ ಅರಸನ ಕಾರಣಕ್ಕೆ ವಿವಿಧ ರೀತಿಗಳಲ್ಲಿ ಇದನ್ನು ಹೆಸರಿಸಲಾಗಿದೆ.

ಬಹುವಿಸ್ತಾರವಾದ ಪ್ರದೇಶವನ್ನು ಬಹುದೀರ್ಘಕಾಲ ಈ ಮನೆತನ ಆಳ್ವಿಕೆ ನಡೆಸಿತು. ಈ ಮನೆತನದ ಆಳ್ವಿಕೆಯುದ್ದಕ್ಕೂ ಇಲ್ಲಿನ ಜನತೆ ಅನೇಕ ಸಂಕಷ್ಟಗಳನ್ನು ಎದುರಿಸಿತು. ಆಡಳಿತಾತ್ಮಕವಾಗಿ, ಶೈಕ್ಷಣಿಕವಾಗಿ, ರಾಜಕೀಯವಾಗಿ, ಸಾಮಾಜಿಕವಾಗಿ, ಜನತೆಗೆ ಯಾವುದೇ ರೀತಿಯ ಹಕ್ಕುಗಳನ್ನು ಅನುಭವಿಸುವ ಅವಕಾಶಗಳು ದೊರೆಯಲಿಲ್ಲ. ಸ್ಥಳೀಯ ಜನತೆಯಲ್ಲಿ ಮತೀಯ ಕಾರಣಗಳಿಗಾಗಿ ಅಂತರ ಉಂಟಾಗುವಂತೆ ಮಾಡುವ ಪ್ರಕ್ರಿಯೆಯೊಂದು ಈ ಪ್ರದೇಶದಲ್ಲಿ ಕಂಡುಬಂದಿತು. ಮತೀಯ

ಸೌಹಾರ್ದತೆಯನ್ನು ಕದಡುವ ಎಲ್ಲಾ ಪ್ರಯತ್ನಗಳನ್ನು ನಿಜಾಂ ಸರ್ಕಾರ ಈ ಸಂದರ್ಭದಲ್ಲಿ ಕೈಗೊಂಡಿತು. 'ಇತ್ತೇಹಾದುಲ್ ಮುಸಲ್ಮೀನ್' ಎಂಬ ಮತೀಯವಾದಿಗಳ ಸಂಘಟನೆಯೊಂದು ಕಾಶಿಂರಜ್ವಿ ಮುಂದಾಳತ್ವದಲ್ಲಿ ರೂಪುಗೊಂಡಿತು. ಇದರ ಚಟುವಟಿಕೆಗಳಿಗೆ ನಿಜಾಮನ ಬೆಂಬಲ ದೊರೆಯಿತು. ಈ ಸಂಘಟನೆ ಸಂಸ್ಥಾನದಲ್ಲಿ ಅಲ್ಪಸಂಖ್ಯಾತರಾಗಿದ್ದ ಮುಸ್ಲೀಮರನ್ನು 'ಇಸ್ಲಾಂ ಖತರೇ ಮೇ ಹೈ' ಎಂಬ ವಾದವನ್ನು ಮುಂದುಮಾಡಿ ಕೆರಳಿಸಲಾಯಿತು' (ಡಾ. ಅಮರೇಶ ನುಗಡೋಣಿ; ೨೦೦೩; ಪುಟ : ೫೯). ಮುಸ್ಲಿಮರನ್ನು ಹಾಗೂ ಮುಸ್ಲಿಮೇತರರನ್ನು ಪರಸ್ಪರ ಕೆರಳಿಸುವ, ಮತೀಯ ಹಿನ್ನೆಲೆಯಲ್ಲಿ ದ್ವೇಷ ಉಂಟುಮಾಡುವ ಕಾರ್ಯಗಳು ಬಹು ಕ್ರೂರ ನೆಲೆಯಲ್ಲಿ ಕಂಡುಬಂದವು. ಹಲವು ಆಮಿಷಗಳನ್ನು ಮುಂದಿಟ್ಟೋ ಇಲ್ಲವೆ ಒತ್ತಾಯಪೂರ್ವಕವಾಗಿ ಇಲ್ಲಿನ ಜನತೆಯನ್ನು ಮುಸ್ಲಿಂ ಜನಾಂಗಕ್ಕೆ ಮತಾಂತರಿಸುವ ಕಾರ್ಯಕ್ಕಿಳಿದ ನಿಜಾಂ ಆಡಳಿತದ ಮತಾಂಧತೆ ಭಾರತದಲ್ಲಿ ಕ್ರೈಸ್ತಧರ್ಮದ ಮತಾಂತರವನ್ನೇ ನೆನಪಿಸುತ್ತದೆ. ಸ್ಥಳೀಯ ಜನತೆ ನಿಜಾಂ ಆಡಳಿತವನ್ನು ಆರಂಭದಿಂದಲೂ ವಿರೋಧಿಸುತ್ತಲೇ ಬಂದಿದೆ. ಸ್ಥಳೀಯವಾಗಿ ರೂಪುಗೊಂಡ ಅನೇಕ ಸಂಘಟನೆಗಳು ನಿಜಾಂ ಆಡಳಿತದಿಂದ ಸ್ವಾತಂತ್ರಗೊಳ್ಳುವಂತೆ ಜನತೆಯನ್ನು ಪ್ರೇರೇಪಿಸಿದವು. 'ಹೈದರಾಬಾದ್ ರಾಜಕೀಯ ಪರಿಷತ್ತು', 'ಹೈದರಾಬಾದ್ ಸ್ವದೇಶಿ ಲೀಗ್', 'ನಿಜಾಮ ಪ್ರಜಾ ಪರಿಷತ್ತು' ಮುಂತಾದ ಸಂಘಟನೆಗಳು ರಚನೆಗೊಂಡು ಹೋರಾಟ ನಡೆಸಿದವು" (ಡಾ. ಅಮರೇಶ ನುಗಡೋಣಿ; ೨೦೦೩; ಪುಟ : ೫೯). ಇಂತಹ ಸಂಘಟನೆಗಳು ನಿಜಾಂ ಸರ್ಕಾರದಿಂದ ಅಡ್ಡಿ- ಆತಂಕಗಳನ್ನು ಎದುರಿಸಬೇಕಾಯಿತು. ಅಲ್ಲದೆ ನಿಜಾಂ ಸರ್ಕಾರದ ಆಮಿಷಕ್ಕೆ ಒಳಗಾದ ಜನತೆಯ ಮನೋಭಾವವನ್ನು ನಿಜಾಂ ಸರ್ಕಾರದ ವಿರುದ್ಧ ಸಂಘಟಿಸುವಂತೆ ಮಾಡುವ ಬಹುದೊಡ್ಡ ಸವಾಲನ್ನು ಈ ಸಂಘಟನೆಗಳು ಎದುರಿಸಿರಲಾರವು ಎಂದು ಹೇಳಲಾಗದು. ಹೀಗಿದ್ದಾಗ್ಯೂ ಸ್ಥಳೀಯ ಜನತೆಯನ್ನು ಸ್ವಾತಂತ್ರ್ಯಕ್ಕಾಗಿ ಸಂಘಟಿಸುವ ಕಾರ್ಯ ಈ ಪ್ರದೇಶದಲ್ಲಿ ಕಂಡು ಬಂದಿದೆ. ಈ ಚಟುವಟಿಕೆಯಷ್ಟೇ ತೀವ್ರವಾಗಿ ಇಲ್ಲಿನ ಜನತೆಯ ಸ್ವಾತಂತ್ರ್ಯಾಪೇಕ್ಷೆಯನ್ನು ನಿಜಾಂ ಆಡಳಿತ ನಿಯಂತ್ರಿಸುತ್ತಿತ್ತು. ಜನತೆಯ ಬದುಕಿನ ವಿವಿಧ ಸ್ತರಗಳನ್ನು ನಿಯಂತ್ರಿಸುವ ಕ್ರೂರ ಆಡಳಿತ ನಿಜಾಮನ ಆಳ್ವಿಕೆಯಲ್ಲಿ ಕಂಡುಬಂದಿತು. 'ಕಾಶಿಂ ರಜ್ವಿ' ಮುಂದಾಳತ್ವದ ರಜಾಕಾರರು ಇಡೀ ಪ್ರಾಂತೀಯ ಜನತೆಯನ್ನು ಹಿಂಸಿಸಿದರು. ಸ್ಥಳೀಯ ಲಾಭಿಗಳು ರಜಾಕಾರರ ಹಿಂಸಾ ಕಾರ್ಯವನ್ನು ವೈಯಕ್ತಿಕ ಹಿತಾಸಕ್ತಿಗೆ ಬಳಸಿಕೊಂಡರು. ರಜಾಕಾರರಿಂದ, ಸ್ಥಳೀಯ ಲಾಭಕೋರರಿಂದ ಇಲ್ಲಿನ ಅಮಾಯಕ ಜನತೆ ಶೋಷಣೆಗೆ ಈಡಾಯಿತು. ಈ ಹಿಂಸೆಯ ಸ್ವರೂಪವೇ ಸ್ಥಳೀಯ ಜನತೆಯನ್ನು ಸ್ವಾತಂತ್ರ್ಯ ಪಡೆಯಲು ತೀವ್ರವಾಗಿ ಪ್ರೇರೇಪಿಸಿತು. ನಿಜಾಮನ ನಿಯಂತ್ರಣವನ್ನು ಮೀರಿ ರಜಾಕಾರರ ಹಾವಳಿ ಈ ಪ್ರದೇಶದ ಜನಜೀವನವನ್ನು ಅಸ್ತವ್ಯಸ್ತಗೊಳಿಸಿತು. ಸ್ವತಃ ಮುಸ್ಲಿಂ ಜನಾಂಗದ ಜನತೆಯೂ ಸಹ ರಜಾಕಾರರ ಕ್ರೂರ ನೀತಿಯನ್ನು ವಿರೋಧಿಸಲಾರಂಭಿಸಿತು. ಇಡೀ ಪ್ರದೇಶದ ಜನತೆಯ ಸ್ವಾತಂತ್ರ್ಯ ಹೋರಾಟವೆಂಬುದು 'ರಜಾಕಾರರ' ವಿರುದ್ಧದ ಹೋರಾಟ ಎನ್ನುವಷ್ಟರಮಟ್ಟಿಗೆ ರಜಾಕಾರರ ಹಾವಳಿ ಆತ್ಯಂತಿಕ ಸ್ಥಿತಿಯನ್ನು ತಲುಪಿತ್ತು. ಈ ರೀತಿಯ ಅಪಾಯಕಾರಕ,

ಅತಂತ್ರ ಪರಿಸ್ಥಿತಿಯಲ್ಲಿ ಜನ ಬದುಕು ಭಾರತ ಸ್ವಾತಂತ್ರ್ಯನಂತರ ಒಂದು ವರ್ಷಾವಧಿ ಹೋರಾಟವನ್ನು ಮುಂದುವರಿಸಿತು. ಸ್ಥಳೀಯ ಜನತೆ ನಿಜಾಂ ಸರ್ಕಾರದಿಂದ ೧೯೪೮ ಸೆಪ್ಟೆಂಬರ್ ೧೭ ರಂದು ಸ್ವಾತಂತ್ರ್ಯ ಪಡೆಯಿತು. ಈ ಸಂದರ್ಭದಲ್ಲಿ ಈ ಪ್ರದೇಶವನ್ನು ಆಳುತ್ತಿದ್ದವನು ಏಳನೆಯ ಹಾಗೂ ಕೊನೆಯ ನಿಜಾಮ 'ಮೀರ್ ಉಸ್ಮಾನ್ ಅಲೀಖಾನ್'. ಸ್ವಾತಂತ್ರ್ಯ ಸಂದರ್ಭದಲ್ಲಿ ಭಾರತ ಸರ್ಕಾರದ ಸೈನ್ಯ ಸರ್ದಾರ ವಲ್ಲಭಬಾಯಿ ಪಟೇಲರ ನೇತೃತ್ವದಲ್ಲಿ ಈ ಪ್ರದೇಶವನ್ನು ಆಕ್ರಮಿಸಿತು. ನಿಜಾಂ ಪ್ರದೇಶ ನಿಜಾಮರ ಆಳ್ವಿಕೆಯಿಂದ ಮುಕ್ತಿಹೊಂದಿ ಆಡಳಿತಾತ್ಮಕವಾಗಿ ಸ್ವಾತಂತ್ರ್ಯ ಭಾರತದ ಒಕ್ಕೂಟಕ್ಕೆ ಸೇರಿತು. ನಿಜಾಂ ಆಳ್ವಿಕೆಯು ಇಡೀ ಪ್ರದೇಶದ ಅಸ್ತಿತ್ವವನ್ನು ರೂಪಿಸಿತು ಎಂಬುದು ಒಮ್ಮುಖ ಧೋರಣೆ. ಇಲ್ಲಿನ ಜನತೆ ನಿಜಾಂ ಆಳ್ವಿಕೆಯಿಂದ ವಿಮುಕ್ತಿ ಹೊಂದಿದ ಕಾರಣಕ್ಕಾಗಿಯೂ ಈ ಪ್ರದೇಶದ ಅಸ್ತಿತ್ವ ದಾಖಲಾಗುತ್ತದೆ. ಈ ಪ್ರದೇಶದ ಜನತೆ ಪಡೆದ ಸ್ವಾತಂತ್ರ್ಯ ಈ ಪ್ರದೇಶದ ಅನನ್ಯತೆಗೆ ಮತ್ತೊಂದು ಅಂಶವಾಗಿ ಸೇರ್ಪಡೆಯಾಗುತ್ತದೆ.

ಸ್ವಾತಂತ್ರ್ಯನಂತರ ಈ ಪ್ರದೇಶ ಅನೇಕ ಸಮಸ್ಯೆಗಳನ್ನು ಎದುರಿಸಬೇಕಾಯಿತು. ಸ್ವಾತಂತ್ರ್ಯ ನಂತರವೂ ತಮ್ಮ ಚಾರಿತ್ರಿಕ ಹಿನ್ನೆಲೆಯ ಕಾರಣಕ್ಕಾಗಿ ಭಾರತದ ಅನೇಕ ಪ್ರಾಂತ್ಯಗಳು ಪ್ರತ್ಯೇಕವಾದ ಹೆಸರಿನಿಂದಲೇ ಗುರುತಿಸಲ್ಪಡುತ್ತಿವೆ. ಸ್ವಾತಂತ್ರ್ಯಪೂರ್ವದಲ್ಲಿ 'ಮೊಗಲಾಯಿ' ಅಥವಾ 'ನಿಜಾಂ ಸಂಸ್ಥಾನ'ವೆಂದು ಕರೆಯುವ ಪ್ರದೇಶದ ಸ್ವರೂಪವೇ ಭಿನ್ನವಾಯಿತು. ಸ್ವಾತಂತ್ರ್ಯ ನಂತರ ಈ ಪ್ರದೇಶ ಭಾಷಾವಾರು ಪ್ರಾಂತ್ಯ ವಿಂಗಡಣೆಯ ಹೊಸ ಸಮಸ್ಯೆಯನ್ನು ಎದುರಿಸಬೇಕಾಯಿತು. ಭಾರತಕ್ಕೆ ಹಾಗೂ ಕರ್ನಾಟಕಕ್ಕೆ ಅನ್ವಯಿಸುವಂತೆ ಅಖಂಡತೆಯ ಅಭಾವ ಸ್ವತಂತ್ರ್ಯಪೂರ್ವದಲ್ಲೂ ಕಂಡುಬಂದಿರುವ ಸಮಸ್ಯೆ. ಏಕೀಕರಣ ಪೂರ್ವದ ಕರ್ನಾಟಕದಲ್ಲಿ ಕನ್ನಡ ಭಾಷಿಕರು ಅನೇಕ ಪ್ರಾಂತ್ಯಗಳಲ್ಲಿ ಚದುರಿದ್ದರು. ಆಯಾ ಪ್ರಾಂತ್ಯಗಳ ಪರಿಸ್ಥಿತಿ ಏಕೀಕರಣಕ್ಕೆ ಪೂರಕವಾಗಿರಲಿಲ್ಲ. ಏಕೀಕರಣ ಪೂರ್ವದ ಕರ್ನಾಟಕದ ಸ್ಥಿತಿಯನ್ನು ಆಲೂರು ವೆಂಕಟರಾಯರು ಈ ರೀತಿ ತಿಳಿಸುತ್ತಾರೆ. "ಕೊಡಗಿನ ಸ್ಥಿತಿಯು ಎಲ್ಲಕ್ಕೂ ವಿಲಕ್ಷಣವಾದದ್ದು. ಅದು ದೂರ ಸಿಡಿದು ಬಿದ್ದ ಸಣ್ಣ ಪ್ರಾಂತ.... ಮೈಸೂರಿನ ರಾಜಕಾರಣವೇ ಬೇರೆ ಅಥವಾ ಅದಕ್ಕೆ ಆಗ ರಾಜಕಾರಣವೇ ಇದ್ದಿಲ್ಲವೆಂದರೂ ಸಾಗುವುದು. ಅಲ್ಪಮಟ್ಟಿಗೆ ಅನುಕೂಲ ಸ್ಥಿತಿ ಇದ್ದುದ್ದರಿಂದಲೂ ಕರ್ನಾಟಕದ ಸುದೈವದಿಂದ ಆ ಸಂಸ್ಥಾನಕ್ಕೆ ಕರ್ನಾಟಕದ ಅಭಿಮಾನಿಗಳೂ ಉದಾರರೂ ಧರ್ಮಶೀಲರೂ ಆದ ಪ್ರಭುಗಳೂ ನಿಷ್ಣಾತರಾದ ಅನೇಕ ದಿವಾನರೂ ದೊರೆತದ್ದರಿಂದಲೂ ಅದು ಶಿಕ್ಷಣದಲ್ಲಿ ಮುಂದುವರೆದಿತ್ತು. ಆದರೆ ಕರ್ನಾಟಕದ ಅಭಿಮಾನವು ಅವರಲ್ಲಿ ತಿಲಪ್ರಾಯವೂ ಒಡಮೂಡಿದ್ದಿಲ್ಲ. ಇನ್ನೂ ಪೂರ್ಣ ಒಡಮೂಡದಿರುವುದು ಕರ್ನಾಟಕದ ದುರ್ದೈವ! ಚಿಕ್ಕ ಚಿಕ್ಕ ಸಂಸ್ಥಾನಗಳು ಮರಾಠಿಗರ ಮೇಲೆ ಜುಲುಮೆಯಿಂದ ಹೇರಿ ಕರ್ನಾಟಕವನ್ನು ತುಂಡು ತುಂಡು ಮಾಡಿದವು. ಸಾಂಗಲಿ, ಜಮಖಂಡಿ, ಮುಧೋಳು, ಮಿರಜ, ಜತ್ತ, ಔಂಧ, ಸವಣೂರು, ಅಕ್ಕಲಕೋಟ, ಕುರುಂದವಾಡ, ಮೊದಲಾದ ನಡುಗಡ್ಡೆಗಳಂತಿರುವ ಸಂಸ್ಥಾನಗಳು ಕರ್ನಾಟಕದ ಜೀವವನ್ನು ಹಣ್ಣು ಹಣ್ಣು ಮಾಡಿದವು... ನಿಜಾಮ

ಕರ್ನಾಟಕವು ದಕ್ಷಿಣ ಹಿಂದುಸ್ತಾನದ ನಡುವೆ ಒಂದು ದ್ವೀಪ ಇದ್ದಂತೆ ಆದರೆ ಅದರ ಆಗಿನ ದುಃಸ್ಥಿತಿಯನ್ನು ಬಣ್ಣಿಸುವುದೇ ಅಸಾಧ್ಯ. ಅದನ್ನು ಊಹಿಸಿಯೇ ತಿಳಿದುಕೊಳ್ಳಬೇಕು! ಆ ಕಾರಣದಿಂದಲೇ ಅದಕ್ಕೆ ಮೊಗಲಾಯಿ ಎಂದು ಹೆಸರು ಬಿತ್ತು. ಮುಸಲ್ಮಾನರ ಸಂಸ್ಕೃತಿ ಮತ್ತು ಆಡಳಿತೆಯಿಂದ ಬದ್ಧವಾದ ಪ್ರದೇಶ. ಅಲ್ಲಿಯ ಕನ್ನಡಿಗರಿಗೆ ರಾಜಕಾರಣವೆಂದರೇನೆ ಗೊತ್ತಿರಲಿಲ್ಲ" (ಆಲೂರು ವೆಂಕಟರಾಯ; ೧೯೯೯; ಪುಟ ೬೪೩ ರಿಂದ ೬೪೪). ಏಕೀಕರಣ ಪೂರ್ವದ ಕರ್ನಾಟಕದ ವಿಲಕ್ಷಣ ಪರಿಸ್ಥಿತಿ ಕರ್ನಾಟಕ ಏಕೀಕರಣದ ಅಗತ್ಯತೆಯನ್ನೇ ತಿಳಿಸುತ್ತದೆ. ಕರ್ನಾಟಕ ಏಕೀಕರಣ ಸಂದರ್ಭದಲ್ಲಿ ಸ್ವಾತಂತ್ರ್ಯನಂತರ ನಿಜಾಂ ಪ್ರಾಂತ್ಯದ ಬೀದರ್, ಗುಲ್ಬರ್ಗಾ, ರಾಯಚೂರು ಜಿಲ್ಲೆಗಳನ್ನು ಮೈಸೂರು ಆಡಳಿತ ವಿಭಾಗಕ್ಕೆ ಸೇರಿಸಲಾಗಿತ್ತು. ಆದರೆ ಮೈಸೂರು ಜನತೆ ಇದನ್ನು ವಿರೋಧಿಸಿದರು. "ಮೈಸೂರು, ಕೊಡಗು, ಮಂಗಳೂರನ್ನು ಒಳಗೊಂಡ ಒಂದು ಕರ್ನಾಟಕ ರಾಜ್ಯವೂ, ಉತ್ತರ ಹಾಗೂ ಹೈದರಾಬಾದ್ ಕರ್ನಾಟಕ ಪ್ರದೇಶಗಳನ್ನು ಒಳಗೊಂಡ ಇನ್ನೊಂದು ಕರ್ನಾಟಕವೂ ರಚಿತವಾಗಬೇಕೆಂಬ ಎರಡು ಕರ್ನಾಟಗಳ ಕಲ್ಪನೆಯು ಮೂರ್ತಿ ಸ್ವರೂಪವನ್ನು ತಳೆಯತೊಡಗಿತು... ಮೈಸೂರಿನ ವೈಶಿಷ್ಟ್ಯವು ಕೊನೆತನಕ ಉಳಿಯಬೇಕೆಂದೂ ಸಂಯುಕ್ತ ಕರ್ನಾಟಕದಿಂದ ಇದಕ್ಕೆ ಬಾಧೆ ಬರುವುದೆಂದೂ ಮುಂದುವರಿದ ಮೈಸೂರಿನೊಂದಿಗೆ ಔದ್ಯೋಗಿಕವಾಗಿ ಹಿಂದು ಬಿದ್ದಿರುವ ಹೊರ ಪ್ರದೇಶಗಳು ಸೇರಬಾರದೆಂದೂ ಇವರ ವಾದವಾಗಿತ್ತು" (ಸಂ: ರಂಗನಾಥ ದಿವಾಕರ; ನವೆಂಬರ್; ೧೯೫೩; ಪುಟ : ೧೧೮). ಕರ್ನಾಟಕ ಏಕೀಕರಣದ ಇತಿಹಾಸದಲ್ಲಿಯೇ ಈ ವಿಷಯ ವಿಷಾದದ ಸಂಗತಿಯಾಗಿ ತೋರುತ್ತದೆ. ೧೯೫೬ರಲ್ಲಿ ಕರ್ನಾಟಕ ಏಕೀಕರಣಗೊಂಡ ಮೇಲೆ ನಿಜಾಂ ಪ್ರದೇಶ ಪ್ರತ್ಯೇಕವಾಗಿ ಉಳಿಯಬೇಕಾಯಿತು. ಈ ಸಂದರ್ಭದಲ್ಲಿ ಬೀದರ್, ಗುಲ್ಬರ್ಗಾ, ರಾಯಚೂರು ಜಿಲ್ಲಾ ಪ್ರದೇಶಗಳ ವ್ಯಾಪ್ತಿಯನ್ನು ಮಾತ್ರ ಇದು ಹೊಂದಿತ್ತು.

ಏಕೀಕರಣದ ನಂತರ ಅಖಂಡ ಕರ್ನಾಟಕವೆಂಬುದು ನಿರ್ಮಾಣವಾಯಿತು ಎಂದು ಹೇಳುವುದು ಆದರ್ಶದ ಮಾತಾಗುತ್ತದೆ. ಸ್ವಾತಂತ್ರ್ಯ ನಂತರ ಭಾರತಕ್ಕಾಗಲಿ, ಏಕೀಕರಣದ ನಂತರ ಕರ್ನಾಟಕಕ್ಕಾಗಲಿ ಅಖಂಡತೆಯೆಂಬುದು ಸಾಧ್ಯವಾಗಿಲ್ಲ. ಮುಂದೆಯೂ ಸಾಧ್ಯವಾಗಲಾರದು. ಸ್ವತಂತ್ರ ಭಾರತದ ಒಕ್ಕೂಟಕ್ಕೆ ಆಡಳಿತಾತ್ಮಕವಾಗಿ ಈ ಪ್ರದೇಶ ಸೇರ್ಪಡೆಯಾದಂತೆ, ಏಕೀಕೃತ ಕರ್ನಾಟಕದಲ್ಲಿ ಸೇರ್ಪಡೆಯಾಯಿತು. ಆದರೆ ಭಾವನಾತ್ಮಕವಾಗಿ ಒಂದಾಗಿಲ್ಲ. ಏಕೀಕೃತ ಕರ್ನಾಟಕದಲ್ಲಿ ಈ ಪ್ರದೇಶವನ್ನು 'ಹೈದರಾಬಾದ್ ಕರ್ನಾಟಕ'ವೆಂದು ಗುರುತಿಸಲಾಗಿದೆ. ಈ ರೀತಿಯ ಗುರುತಿಸುವಿಕೆಯೂ ಇದರ ಚಾರಿತ್ರಿಕವಾದ ಹಿನ್ನೆಲೆಯನ್ನು ಸೂಚಿಸುತ್ತದೆ. 'ನಿಜಾಂ ಸಿಕಂದರ್ ಬಹದೂರ್ (೧೮೦೮-೧೮೨೮) ಪಟ್ಟಕ್ಕೆ ಬಂದ ಸಂದರ್ಭದಲ್ಲಿಯೇ ಔರಂಗಾಬಾದಿನ ಬದಲಾಗಿ 'ಹೈದರಾಬಾದ್' ರಾಜ್ಯಧಾನಿಯಾಯಿತು. ಈತನು ಸಾರಿಗೆ ವ್ಯವಸ್ಥೆ, ನಾಣ್ಯಗಳ ಚಲಾವಣೆ, ಅಂಚೆ ಇತ್ಯಾದಿ ಅತ್ಯಾಧುನಿಕ ಸೌಲಭ್ಯಗಳನ್ನ ತನ್ನ ಆಡಳಿತದಲ್ಲಿ ಅಳವಡಿಸಿಕೊಂಡಿದ್ದನು. ಆದರೆ ತನ್ನ ಆಡಳಿತದ ಇನ್ನಿತರೆ ಪ್ರದೇಶಗಳನ್ನು ಅಭಿವೃದ್ಧಿಪಡಿಸಲು ನಿಜಾಮನು ಕಾರ್ಯೋನ್ಮುಖನಾಗಲಿಲ್ಲ. ಈ ಕಾರಣ ಈತನ ಅಭಿವೃದ್ಧಿಪರ ಚಿಂತನೆಗಳೆಲ್ಲವೂ ರಾಜಧಾನಿಯಾದ

ಹೈದರಾಬಾದ್‌ನಲ್ಲಿ ಮಾತ್ರವೇ ಮೂರ್ತಗೊಂಡವು. ನಿಜಾಂ ಆಳ್ವಿಕೆಯಲ್ಲಿ ಈ ಪ್ರದೇಶ ಸಮಗ್ರ ಅಭಿವೃದ್ಧಿಯನ್ನು ಕಾಣಲಿಲ್ಲ. ನಿಜಾಂ ಆಡಳಿತದಲ್ಲಿ ಬದುಕಿದ್ದ 'ಹೈದರಾಬಾದ್ ಕರ್ನಾಟಕ'ದ ಜನತೆ ಸ್ವಾತಂತ್ರ್ಯ ಭಾರತದಲ್ಲಿದ್ದ ಆಡಳಿತ ಪದ್ಧತಿಯಲ್ಲಿ ಸ್ಥಾನ ಪಡೆಯುವುದು ಕಷ್ಟವಾಯಿತು. ಇನ್ನು ಪ್ರಾದೇಶಿಕವಾಗಿ ಅಭಿವೃದ್ಧಿ ಸಾಧಿಸುವುದಂತೂ ಇಂದಿಗೂ ಸಾಧ್ಯವಾಗದ ಮಾತಾಗಿದೆ. ಒಂದು ವರ್ಷ ತಡವಾಗಿ ಸ್ವಾತಂತ್ರ್ಯ ದೊರೆತ ಕಾರಣಕ್ಕಾಗಿ ಈ ಪ್ರದೇಶ ಅಭಿವೃದ್ಧಿ ಸಾಧಿಸಲಿಲ್ಲ ಅಥವಾ ಹಿಂದುಳಿದಿದೆ ಎಂಬುದು ಅಷ್ಟು ಗಟ್ಟಿಯಾದ ವಿಚಾರವಲ್ಲ. ಸ್ವತಂತ್ರ್ಯ ಭಾರತದಲ್ಲಿ ಆರಂಭದಲ್ಲಿಯೇ ಈ ಪ್ರದೇಶದ ಅಭಿವೃದ್ಧಿಗಾಗಿ ಯಾವ ಚಿಂತನೆಗಳೂ ನಡೆಯಲಿಲ್ಲ. ಗುಲ್ಬರ್ಗಾ, ಬೀದರ್, ರಾಯಚೂರು ಜಿಲ್ಲೆಗಳಿಗೆ ಇನ್ನೆರಡು ಜಿಲ್ಲೆಗಳು ಸೇರ್ಪಡೆಯಾದವು. ೧೯೫೬ರ ರಾಜ್ಯಪುನರ್‌ವಿಂಗಡಣೆಯ ಸಂದರ್ಭದಲ್ಲಿ ರಾಯಚೂರು ಜಿಲ್ಲೆಯಲ್ಲಿದ್ದ ಕೊಪ್ಪಳ ತಾಲೂಕು ಜಿಲ್ಲೆಯಾಗಿ ಮಾರ್ಪಾಡಾಯಿತು. ಇತ್ತೀಚೆಗೆ ಆಡಳಿತಾತ್ಮಕ ಅನುಕೂಲಕ್ಕಾಗಿ ಬಳ್ಳಾರಿ ಜಿಲ್ಲೆಯನ್ನು ಈ ಪ್ರದೇಶಕ್ಕೆ ಸೇರಿಸಲಾಯಿತು. ಒಟ್ಟು ಜಿಲ್ಲೆಗಳನ್ನೊಳಗೊಂಡ ಹೈದರಾಬಾದ್ ಕರ್ನಾಟಕಕ್ಕೆ ಗುಲ್ಬರ್ಗಾ ವಿಭಾಗವನ್ನು ಸ್ಥಾಪಿಸಲಾಗಿದೆ. ವ್ಯಾಪ್ತಿ ವಿಸ್ತರಣೆಯನ್ನು ಬಿಟ್ಟರೆ ಹೆಚ್ಚಿನ ಮಟ್ಟಿಗೆ ಈ ಪ್ರದೇಶ ಅಭಿವೃದ್ಧಿಯನ್ನು ಕಾಣಲಿಲ್ಲ.

ಇತ್ತೀಚೆಗೆ ಈ ಪ್ರದೇಶವನ್ನು ಗುರುತಿಸುವ ಮಾನದಂಡಗಳು ಬದಲಾಗಿವೆ. ಕರ್ನಾಟಕದ ಒಟ್ಟು ಪ್ರದೇಶಗಳನ್ನು ಅಭಿವೃದ್ಧಿ ಹೊಂದಿದ ಪ್ರದೇಶ, ಹಿಂದುಳಿದ ಪ್ರದೇಶವೆಂದು ಪ್ರತ್ಯೇಕಿಸಲಾಗಿದೆ. ಈ ಹಿನ್ನೆಲೆಯಲ್ಲಿ 'ಹೈದರಾಬಾದ್ ಕರ್ನಾಟಕ' ಪ್ರದೇಶವನ್ನು 'ಹಿಂದುಳಿದ ಪ್ರದೇಶ'ವೆಂದು ಗುರುತಿಸ ಲಾಗುತ್ತಿದೆ. ಈ ಪ್ರದೇಶದ ಹಿಂದುಳಿದಿರುವಿಕೆಯ ಇತಿಹಾಸವನ್ನು ಸ್ವಾತಂತ್ರ್ಯಪೂರ್ವದಿಂದ ಇಂದಿನವರೆಗೂ ವಿವರಿಸುವ ಕಾರ್ಯ ಮುಖ್ಯವಾದದ್ದಲ್ಲ. ಇದರಿಂದ ವ್ಯವಸ್ಥೆಯಲ್ಲಿರುವ ತಾರತಮ್ಯ ಧೋರಣೆಯನ್ನು ತಿಳಿದುಕೊಳ್ಳುವುದು ಅಗತ್ಯವಾಗಿದೆ. ಹಿಂದುಳಿದಿರುವ ಪ್ರದೇಶಗಳ ಅಭಿವೃದ್ಧಿಗೆ ಸಂವಿಧಾನಾತ್ಮಕ ಮನ್ನಣೆ ಕಲಂ ೭೩೧ರ ಪ್ರಕಾರ ದೊರೆತಿದೆ. ಆದರೆ ಆಡಳಿತಾತ್ಮಕ ನಿರ್ಲಕ್ಷ್ಯದಿಂದ ಈ ಪ್ರದೇಶ ಹಿಂದುಳಿದಿದೆ. ಪ್ರಾದೇಶಿಕ ಅಭಿವೃದ್ಧಿಯಿಂದ ವಂಚಿತವಾಗಿರುವ ಈ ಪ್ರದೇಶದ ಅನಭಿವೃದ್ಧಿಯೂ ಮತ್ತೊಂದು ದಿಕ್ಕಿನಲ್ಲಿ ಇದನ್ನು ಗುರುತಿಸುವಂತೆ ಮಾಡಿದೆ.

ಅನಭಿವೃದ್ಧಿಯ ಕಾರಣ ಈ ಪ್ರದೇಶ ಪ್ರತ್ಯೇಕವಾಗಿ ಉಳಿಯಬೇಕಾಯಿತೆಂಬುದು ಈ ಹಿಂದೆ ಚರ್ಚಿತವಾದ ವಿಷಯ. ಆದರೆ ಈ ಪ್ರದೇಶದ ಅಭಿವೃದ್ಧಿಯ ಕಾರಣಕ್ಕೆ ಇದನ್ನು ಪ್ರತ್ಯೇಕ ರಾಜ್ಯವನ್ನಾಗಿಸಬೇಕೆಂಬುದು ಇತ್ತೀಚಿನ ಕೆಲ ಚಳುವಳಿಕಾರರ ಅಭಿಪ್ರಾಯವಾಗಿದೆ. ಈ ಚಳುವಳಿಯ ಸ್ವರೂಪ ಎರಡು ರೀತಿಯಲ್ಲಿ ಕಂಡು ಬಂದಿತು. ಈ ಎರಡು ಬಗೆಯ ಚಳುವಳಿಯ ಸ್ವರೂಪವನ್ನು ಬಿ. ಶೇಷಾದ್ರಿಯವರು ದಾಖಲಿಸಿದ್ದಾರೆ. "ಉತ್ತರ ಕರ್ನಾಟಕ ಪ್ರದೇಶವು ಅಭಿವೃದ್ಧಿಯ ದೃಷ್ಟಿಯಿಂದ ದಕ್ಷಿಣ ಕರ್ನಾಟಕ ಪ್ರದೇಶಕ್ಕಿಂತ ಬಹಳ ಹಿಂದುಳಿದಿದೆ ಎಂದು ಹೇಳಲಾಯಿತು. ಏಕೀಕರಣವಾಗಿ ೪೫ ವರ್ಷ ಗಳಾದರೂ ಸಮಸ್ಯೆಯ ಪರಿಹಾರ ಕಾಣಲಿಲ್ಲ. ಚಳುವಳಿಗಾರರ ಪ್ರಕಾರ ಉತ್ತರ ಕರ್ನಾಟಕ ಪ್ರದೇಶವನ್ನು

ಪ್ರತ್ಯೇಕ ರಾಜ್ಯವನ್ನಾಗಿ ಮಾಡುವುದೇ ಇದಕ್ಕೆ ಸೂಕ್ತ ಪರಿಹಾರ. ಹೀಗೆ ಆರಂಭಗೊಂಡ ಚಳುವಳಿಯು ಮುಂದೆ ಉಗ್ರರೂಪ ತಾಳಿ ಉತ್ತರ ಕರ್ನಾಟಕ ಪ್ರದೇಶದ (೧೨ ಜಿಲ್ಲೆಗಳು) ಪ್ರತ್ಯೇಕ ಭೂಪಟವನ್ನು ತಯಾರಿಸುವ ಹಾಗೂ ಹೊಸ ರಾಜ್ಯದ ಭಾವುಟವನ್ನು ಹಾರಿಸುವ (ಹಸಿರು, ಬಿಳಿ ಹಾಗೂ ನೀಲಿ) ಘಟನೆಗಳಿಗೆ ಎಡೆಮಾಡಿಕೊಟ್ಟಿತು. ಹುಬ್ಬಳ್ಳಿ-ಧಾರವಾಡ ವಕೀಲರ ಸಂಘವು ರಚಿಸಿದ್ದ ಕ್ರಿಯಾಸಮಿತಿಯು ೨೧ನೇ ಜೂನ್ ೨೦೦೦ ದಂದು ಹೊಸ ರಾಜ್ಯದ ಉದಯವನ್ನು ಘೋಷಿಸಿತು. ಅನೇಕ ಕಾರಣಗಳಿಂದಾಗಿ ಮುಂದೆ ಚಳುವಳಿಯು ತನ್ನ ಬಿರುಸನ್ನು ಕಳೆದುಕೊಂಡಿತು.

ಎರಡನೆಯ ಚಳುವಳಿಯ ಮೂಲ ಬ್ಾಂಬೆ, ಕರ್ನಾಟಕ ಪ್ರದೇಶದ ಕೇಂದ್ರವಾದ ಹುಬ್ಬಳ್ಳಿ-ಧಾರವಾಡದಲ್ಲಿರಲಿಲ್ಲ. ಇದರ ಮೂಲ ಹೈದರಾಬಾದ್ ಕರ್ನಾಟಕ ಪ್ರದೇಶದ ಗುಲ್ಬರ್ಗಾದಲ್ಲಿತ್ತು. ಉತ್ತರ ಕರ್ನಾಟಕ ಪ್ರದೇಶವನ್ನು ಪ್ರತ್ಯೇಕ ರಾಜ್ಯವನ್ನಾಗಿ ಮಾಡುವುದರ ಬಗ್ಗೆ ಇಲ್ಲಿ ವಿರೋಧವಿತ್ತು. ಇದು ಉತ್ತರ ಕರ್ನಾಟಕ ಪ್ರದೇಶದಲ್ಲಿ ಬಾಂಬೆ ಕರ್ನಾಟಕ ಪ್ರದೇಶವನ್ನು ಹೈದರಾಬಾದ್ ಕರ್ನಾಟಕ ಜಿಲ್ಲೆಗಳನ್ನು (ಬಳ್ಳಾರಿಯನ್ನು ಸೇರಿಕೊಂಡು) ಸೇರಿಸಿಕೊಂಡು ಪ್ರತ್ಯೇಕ ರಾಜ್ಯವನ್ನು ಮಾಡುವ ಗುರಿಯನ್ನು ಹೊಂದಿತ್ತು. ಚಳುವಳಿಯನ್ನು ಔಪಚಾರಿಕವಾಗಿ ನವೆಂಬರ್ ೨೦೦೦ರಲ್ಲಿ 'ಹೈದರಾಬಾದ್ ಕರ್ನಾಟಕ ಪ್ರದೇಶ ಹೋರಾಟ ಸಮಿತಿ'ಯು ಪ್ರಾರಂಭಿಸಿತು" (ಬಿ. ಶೇಷಾದ್ರಿ; ೨೦೦೦; ಪುಟ : ೩೫). ಅಭಿವೃದ್ಧಿಯ ಹಿನ್ನೆಲೆಯಲ್ಲಿ ಪ್ರತ್ಯೇಕ ರಾಜ್ಯವನ್ನು ಕಟ್ಟಬಯಸುವ ಚಳುವಳಿಗಾರರ ಮುಖ್ಯಧೋರಣೆ ಈ ಪ್ರದೇಶದ ಬಗೆಗೆ ಸರ್ಕಾರ ತೋರುವ ನಿರ್ಲಕ್ಷ್ಯವನ್ನು ವಿರೋಧಿಸುವುದಾಗಿದೆ. ಚಳುವಳಿಕಾರರು ಇಡೀ ಪ್ರದೇಶಾಭಿವೃದ್ಧಿಗೆ ಸಂಬಂಧಿಸಿದಂತೆ ಹೋರಾಡುವ ನೆಲೆಯಲ್ಲಿಯೇ ಚಿಂತಿಸುವಂತವರಾದರೆ ಪ್ರತ್ಯೇಕತೆ ಅನಗತ್ಯ. ಚಳುವಳಿಗಳು, ಚಳುವಳಿಕಾರರು ರಾಜಕೀಯ ಪಕ್ಷಗಳಿಂದ ಪ್ರೇರೇಪಿತರಾದಂತವರು. ಆಯಾ ರಾಜಕೀಯ ಪಕ್ಷಗಳು ಆಡಳಿತದಲ್ಲಿ ಸ್ಥಾನ ಪಡೆಯುವ ಮಟ್ಟಿನ ಅಭಿವೃದ್ಧಿ ಚಿಂತನೆಯನ್ನು ಮಾತ್ರವೇ ಚಳುವಳಿಗಳು ಹೊಂದಿರುವ ಕಾರಣ ಇಂದಿನ ಚಳುವಳಿಗಳು ಯಶಸ್ವಿಯನ್ನು ಕಾಣದಾಗಿವೆ. ಈ ಪ್ರದೇಶದ ಅಭಿವೃದ್ಧಿಯ ಅಸಮತೋಲನದ ಅಧ್ಯಯನ, ಅದರ ಸಮಸ್ಯೆಗಳ ಪರಿಹಾರಕ್ಕೆ ಪ್ರಾಂತೀಯ ಜನರಿಂದ ಮಾತ್ರವೇ ಒತ್ತಡಗಳು ಉಂಟಾಗುತ್ತಿವೆ ಎಂಬುದು ಪ್ರಾಂತೀಯ ಜನತೆಯ ಆಹ್ವಾಲುಗಳಲ್ಲೊಂದು. ಉದಾ: ಇಡೀ ಕರ್ನಾಟಕದ ಸಮಸ್ಯೆಯಾಗಿಯೇ ಕಂಡುಬಂದ ಕಾವೇರಿ ನದಿ ವಿವಾದ, ಪ್ರಾಂತೀಯ ಕೂಗಾಗಿಯೇ ಉಳಿದ ಕೃಷ್ಣಾನದಿ ಸಮಸ್ಯೆ. ಇಂತಹ ಪ್ರಾಂತೀಯ ನಿರ್ಲಕ್ಷ್ಯದ ಹಲವು ಉದಾಹರಣೆಗಳು ಹೈದರಾಬಾದ್ ಕರ್ನಾಟಕ ಪ್ರದೇಶವನ್ನು ಇತರ ಮುಂದುವರೆದ ಪ್ರದೇಶಗಳಿಂದ ಪ್ರತ್ಯೇಕಿಸಿವೆ. ಈ ರೀತಿ ಪ್ರತ್ಯೇಕಿಸುವ, ಕಡೆಗಣಿಸುವ ಧೋರಣೆಗಳು ಪ್ರತ್ಯೇಕ ರಾಜ್ಯ ನಿರ್ಮಾಣಕ್ಕೆ ಪ್ರೇರಣೆ ನೀಡಿವೆ. "ಇಂದು ಪಂಜಾಬ್ ಮತ್ತು ಹರಿಯಾಣ ರಾಜ್ಯಗಳು ಸಾಧಿಸಿದ ಪ್ರಗತಿಗೆ ಆ ರಾಜ್ಯಗಳು ಹೊಂದಿರುವ ಸೀಮಿತ ಭೌಗೋಳಿಕ ವ್ಯಾಪ್ತಿಯೇ ಕಾರಣ. ಸಣ್ಣ ರಾಜ್ಯಗಳು ಸ್ಥಾಪನೆಯಾದರೆ ಆಡಳಿತಕ್ಕೆ ಅನುಕೂಲವಾಗುತ್ತದೆ ಎಂದು ಮಹತ್ಮಾಗಾಂಧಿ ಮತ್ತು ಜಯಪ್ರಕಾಶ ನಾರಾಯಣ ಪ್ರತಿಪಾದಿಸಿದ್ದನ್ನು "ವೈಜನಾಥ ಪಾಟೀಲ್ ಪ್ರತ್ಯೇಕ ರಾಜ್ಯ ನಿರ್ಮಾಣದ ಹಿನ್ನೆಲೆಯಲ್ಲಿ ತಮ್ಮ ವಾದವನ್ನು ಮುಂದಿಡುತ್ತಾರೆ"

(ವೈಜನಾಥ ಪಾಟೀಲ್; ೨೦೦೬; ಪುಟ : ೯೫). ಆದರೆ ಈ ರೀತಿಯ ಪಾರಂಪರಿಕ ಆಲೋಚನೆಯ ಹಿನ್ನೆಲೆಯಲ್ಲಿ ಹೈದರಾಬಾದ್ ಕರ್ನಾಟಕದ ಪ್ರತ್ಯೇಕತೆ ಸಾಧಿಸುವ ಪ್ರಗತಿಗಿಂತ, ಹೊಸ ಸವಾಲಿಗೆ ತಲೆ ಕೊಡುವಂತಾಗುವುದು ನಿಶ್ಚಿತ. ಪ್ರದೇಶದ ಪ್ರತ್ಯೇಕತೆ ಅಭಿವೃದ್ಧಿ ಸಾಧನೆಯ ಅಂತಿಮ ಸಾಧನವೆಂದು ಒಪ್ಪಿಕೊಳ್ಳಲಾಗದು. ಇಂತಹ ಪ್ರತ್ಯೇಕತೆಯ ಧೋರಣೆಗಳ ಉದ್ದೇಶವೂ ದೋಷಮುಕ್ತವಾದದ್ದೆಂದು ಹೇಳಲಾಗದು. ಪ್ರತ್ಯೇಕ 'ತೆಲಂಗಾಣ ರಾಜ್ಯ ಸ್ಥಾಪನೆಗೆ ತೀವ್ರಗತಿಯ ಹೋರಾಟ ನಡೆದಿದ್ದು 'ಹೈದರಾಬಾದ್ ಕರ್ನಾಟಕ'ವೆಂಬ ಪ್ರತ್ಯೇಕ ರಾಜ್ಯ ನಿರ್ಮಾಣದ ಆಲೋಚನೆಗಳನ್ನು ಪ್ರೇರೇಪಿಸಿದೇ ಇರದು.

ಈ ರೀತಿ ಪ್ರತ್ಯೇಕ ರಾಜ್ಯದ ಆಲೋಚನೆಯಲ್ಲಿಯೇ ಈ ಪ್ರದೇಶವನ್ನು 'ಕಲ್ಯಾಣರಾಜ್ಯ'ವೆಂದು ಕರೆಯಲಾಗಿದೆ. 'ಕಲ್ಯಾಣರಾಜ್ಯ'ವೆನ್ನುವುದು ಈ ಪ್ರದೇಶದ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ರೂಪಿತವಾಗಿರುವಂತಹದ್ದು. ಇನ್ನೂ ಈ ಪ್ರದೇಶವನ್ನು 'ಈಶಾನ್ಯ ಕರ್ನಾಟಕ''ವೆಂದು ಗುರುತಿಸುತ್ತಿರುವುದು ಸಾರಿಗೆಯ ವ್ಯವಸ್ಥೆಯಲ್ಲಿ. ಈ ರೀತಿಯ ಹೆಸರಿಸುವಿಕೆ ಕರ್ನಾಟಕದಲ್ಲಿ ಈ ಪ್ರದೇಶದ ದಿಕ್ಸೂಚಕವಾಗಿದೆ. ಇಡೀ ಪ್ರದೇಶದ ಗುರುತಿಸುವಿಕೆಯ ಹಿನ್ನೆಲೆಗಳು ಇಡೀ ಪ್ರದೇಶದ ಬದಲಾಗುತ್ತ ಸಾಗಿರುವ ಸ್ಥಿತಿಗತಿಗಳ ಸೂಚಕಗಳೇ ಆಗಿವೆ.

ರಾಷ್ಟ್ರೀಯತೆಯಲ್ಲಿ ಒಂದಾಗಲೇಬೇಕೆಂದು ಹಾರೈಸಿದ ಈ ಪ್ರದೇಶದ ಸ್ವಾತಂತ್ರ್ಯ ಹೋರಾಟ ಇದರ ಪ್ರತ್ಯೇಕ ರಾಜ್ಯ ನಿರ್ಮಾಣದ ವಿಚಾರಗಳಿಂದ ಅರ್ಥಹೀನವಾಗುತ್ತಿದೆ. ಪ್ರತ್ಯೇಕತೆಯ ವಿಚಾರವನ್ನು ಬದಗಿಟ್ಟು ಇಡೀ ಪ್ರದೇಶದ ಅಭಿವೃದ್ಧಿಗೆ ಸಂಬಂಧಿಸಿದಂತೆ ಆಲೋಚನೆಗಳು ಕಾರ್ಯಗತಗೊಳ್ಳಬೇಕು. ಇದಕ್ಕೆ ಅಡ್ಡಿಯಾಗಿರುವ ರಾಜಕೀಯ ನಿರಾಸಕ್ತಿಯನ್ನು, ಸ್ಥಳೀಯ ಮಟ್ಟದಲ್ಲಿ ಅಭಿವೃದ್ಧಿಯು ಉಳ್ಳವರಲ್ಲಿ ಕೇಂದ್ರೀಕೃತವಾಗುತ್ತಿರುವುದನ್ನು ತೀವ್ರವಾಗಿ ವಿರೋಧಿಸುವ ನೆಲೆಯಲ್ಲಿ ಚಳುವಳಿಗಳು ಸಾಗಬೇಕಿದೆ. "ಅಭಿವೃದ್ಧಿಯೆಂಬುದು ಕೇವಲ ಕಟ್ಟಡಗಳ ನಿರ್ಮಾಣವಲ್ಲ, ಜನರ ಜೀವನ ಮಟ್ಟದ ಸುಧಾರಣೆಯೆಂಬುದು ಒಪ್ಪಬಹುದಾದ ವಿಚಾರ" (ಅಮರೇಶ ನುಗಡೋಣಿ; ೨೦೦೩; ಪುಟ: ೪೬). ಇದಕ್ಕನುಗುಣವಾಗಿ ಯಾವ ಜನರ ಜೀವನ ಮಟ್ಟದ ಸುಧಾರಣೆಯಾಗಬೇಕು ಮತ್ತು ಸುಧಾರಿಸುವ ಮಾರ್ಗೋಪಾಯಗಳಾವವು ಎನ್ನುವ ಕಡೆಗೆ ಚಿಂತನೆಗಳು ನಡೆಯಬೇಕಿದೆ. ಈ ರೀತಿಯ ಚಿಂತನೆಗಳ ಕೊರತೆಯಿಂದಾಗಿಯೇ 'ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ' ಹೆಚ್ಚು ಫಲಕಾರಿಯಾಗಲಿಲ್ಲ.

ಪ್ರದೇಶವೊಂದರ ಅಸ್ತಿತ್ವವನ್ನು ರೂಪಿಸುವ ಚಾರಿತ್ರಿಕ ಹಾಗೂ ವರ್ತಮಾನದ ಎಲ್ಲಾ ಸಾಂದರ್ಭಿಕ ಅಂಶಗಳು ರಾಷ್ಟ್ರವೊಂದರ ಅಸ್ತಿತ್ವವೊಂದನ್ನು ರೂಪಿಸುವ ಸಾಂದರ್ಭಿಕ ಅಂಶಗಳಷ್ಟೆ ಮುಖ್ಯವಾದವುಗಳು. ರಾಷ್ಟ್ರವೊಂದಕ್ಕೆ ಸಲ್ಲಬಹುದಾದ ಎಲ್ಲಾ ಮಹತ್ವಗಳು ಪ್ರದೇಶವೊಂದಕ್ಕೆ ಇವೆ. ರಾಷ್ಟ್ರೀಯವಾಗಿ ನಮ್ಮನ್ನು ನಾವು ಪ್ರತ್ಯೇಕಿಸಿಕೊಳ್ಳುವಲ್ಲಿ ಅಥವಾ ಪ್ರತಿನಿಧಿಸಿಕೊಳ್ಳುವಲ್ಲೆಲ್ಲ ಪ್ರಾದೇಶಿಕತೆ ಪ್ರಮುಖವಾಗಿ ಕಂಡು ಬರುತ್ತದೆ. ಈ ರೀತಿಯ ಪ್ರಾದೇಶಿಕ ಪ್ರತಿನಿಧೀಕರಣದ ಸಂದರ್ಭವು ಅಭಿಮಾನದ (ಹೆಮ್ಮೆಯ) ಇಲ್ಲವೆ

ಆತಂಕದ ವಿಷಯವಾಗಿಯೂ ಪರಿಣಮಿಸುವುದಿದೆ. ಹೈದರಾಬಾದ್ ಕರ್ನಾಟಕದ ಜನತೆ ಈ ಎರಡು ಭಾವಗಳನ್ನು ಅನುಭವಿಸುವ ಸ್ಥಿತಿಯೊಂದು ಕಂಡುಬರುತ್ತಿದೆ. ಗತಕಾಲದಿಂದ ಇಂದಿನವರೆಗೂ ಈ ನೆಲದಲ್ಲಿ ಹೆಮ್ಮೆ ಪಡಬಹುದಾದಂತಹ ಸಾಂಸ್ಕೃತಿಕ ಮಹತ್ವದ ಸಂಗತಿಗಳ ಜೊತೆಯಲ್ಲಿಯೇ ಅಖಂಡ? ಕರ್ನಾಟಕದಲ್ಲಿ ಸಾಂಸ್ಕೃತಿಕ ಹಿಂದುಳಿದಿರುವಿಕೆಯ ಆತಂಕದ ಭಾವವನ್ನು ನಿರಂತರವಾಗಿ ಇಲ್ಲಿನ ಜನತೆ ಅನುಭವಿಸಿದೆ. ಈ ಪ್ರದೇಶದ ವಿಭಿನ್ನ ಗುರುತಿಸುವಿಕೆ ನಿರಂತರವಾಗಿ ಬದಲಾಗುತ್ತ ಸಾಗಿರುವಂತಹದ್ದು ಮತ್ತು ಸಾಪೇಕ್ಷವಾಗಿರುವಂತಹದ್ದು, ಭೌಗೋಳಿಕವಾಗಿ, ಐತಿಹಾಸಿಕವಾಗಿ, ಸಾಂಸ್ಕೃತಿಕವಾಗಿ, ರಾಜಕೀಯವಾಗಿ, ಅಭಿವೃದ್ಧಿಯ ಹಿನ್ನೆಲೆಯಲ್ಲಿ ಈ ಪ್ರದೇಶವನ್ನು ವಿಭಿನ್ನವಾಗಿ ಗುರುತಿಸಲಾಗಿದೆ. ಪ್ರಸ್ತುತ ಪ್ರದೇಶಕ್ಕೆ ಸಂಬಂಧಿಸಿದ ಚಾರಿತ್ರಿಕ ಹಾಗೂ ವರ್ತಮಾನದ ಎಲ್ಲಾ ವಿಷಯಗಳು ಈ ಪ್ರದೇಶವನ್ನು ಕುರಿತಾದ ಅಧ್ಯಯನಕ್ಕೆ ಅಗತ್ಯವಾದ ಪೀಠಿಕೆಯನ್ನು ಒದಗಿಸುತ್ತವೆ. ನಿರಂತರ ಸಾಮಾಜಿಕ ಪರಿವರ್ತನೆಯಲ್ಲಿ ಸಂಚಲನಗೊಳ್ಳುತ್ತಾ ಸಾಗಿರುವ ಈ ಪ್ರದೇಶದ ಅನನ್ಯತೆ ತನ್ನ ಇರುವಿಕೆಯನ್ನು ವಿವಿಧ ನೆಲೆಗಳಲ್ಲಿ ಪ್ರತಿಪಾದಿಸುತ್ತಾ ಸಾಗಿದೆ.

### ೨.೨. ಪ್ರಾದೇಶಿಕತೆ-ಪ್ರಾದೇಶಿಕ ಸಂವೇದನೆ ಮತ್ತು ಪ್ರಾದೇಶಿಕ ಸಾಹಿತ್ಯದ ಪರಿಕಲ್ಪನೆ

ಪ್ರದೇಶವು ದೇಶದ ಒಂದು ಭಾಗ. ದೇಶವು ಹಲವು ವೈವಿಧ್ಯಮಯ ಭೌಗೋಳಿಕ ಪರಿಸರವನ್ನೊಳಗೊಂಡಿರುತ್ತದೆ. ಪ್ರತಿ ವಿಭಿನ್ನ ಪರಿಸರಕ್ಕೆ ತನ್ನದೇ ಆದ ಭಾಷೆ, ಜನಾಂಗ, ಸಂಸ್ಕೃತಿಗಳಿರುತ್ತವೆ. ವೈವಿಧ್ಯಮಯ ಸಾಂಸ್ಕೃತಿಕ ಅಂಶಗಳ ಕಾರಣದಿಂದಾಗಿಯೇ ಆ ಪ್ರದೇಶವು ಹಾಗೂ ಪ್ರದೇಶದ ಕಾರಣದಿಂದ ಅಲ್ಲಿರುವ ಸಾಂಸ್ಕೃತಿಕ ಅಂಶಗಳು ವಿಶಿಷ್ಟತೆಯನ್ನು ಪಡೆಯುತ್ತವೆ. ಒಂದರ ಅನನ್ಯತೆಗೆ ಮತ್ತೊಂದು ಪೂರಕವಾಗಿರುತ್ತವೆ.

ವಸಾಹತುಶಾಹಿ ಸಂದರ್ಭದಲ್ಲಿ ದೊರೆತ ಹೊಸ ಅನುಭವ ಹಾಗೂ ಸ್ವಾತಂತ್ರ್ಯ ಚಳುವಳಿಯ ಜಾಗೃತಿ ಈ ಎರಡು ರೀತಿಯ ಸಂವೇದನೆಗಳನ್ನು ಸರಿದೂಗಿಸುವ ಸವಾಲು ಆರಂಭ ಘಟ್ಟದ ಕನ್ನಡ ಸಾಹಿತ್ಯಕ್ಕೆ ಕಂಡುಬಂದಿತು. ಇಂಗ್ಲಿಷ್ ಸಾಹಿತ್ಯವನ್ನು ಅರಗಿಸಿಕೊಳ್ಳುವುದರ ಜೊತೆಗೆ ಸಾಮಾಜಿಕ ಜೀವನಕ್ಕೆ ಸ್ಪಂದಿಸಬೇಕಾಗಿದ್ದ ಅಗತ್ಯದಿಂದಾಗಿಯೇ ವಾಸ್ತವವಾದಿ ಕಥನ ಸ್ವರೂಪ ಈ ಸಂದರ್ಭದಲ್ಲಿ ಸೂಕ್ತವಾಯಿತು. ವಾಸ್ತವವಾದಿ ಕಥನಶೈಲಿಯಲ್ಲಿ ಪ್ರಾದೇಶಿಕತೆಯೂ ಕಂಡುಬಂದಿದೆ. ಒಂದರ್ಥದಲ್ಲಿ ವಾಸ್ತವಿಕತೆಯ ಭಾಗವೆಂದು ಪ್ರಾದೇಶಿಕತೆಯನ್ನು ಪರಿಭಾವಿಸಿದರೆ ತಪ್ಪಾಗದು. ಹೈದರಾಬಾದ್ ಕರ್ನಾಟಕದ ಕಥನ ಸಾಹಿತ್ಯ ಇಂತಹ ಬಿಕ್ಕಟ್ಟನ್ನು ಕನ್ನಡ ಸಾಹಿತ್ಯ ಆರಂಭವಾದ ಎಷ್ಟೋ ವರ್ಷಗಳ ನಂತರ ಅನುಭವಿಸಿತು. ಉರ್ದು ಕಲಿಕೆಯಿಂದ ಹೊರಬಂದು ಕನ್ನಡ ಕಲಿಕೆಗೆ ಮುಂದಾದ ಈ ಭಾಗದ ಜನತೆ ಸಾಹಿತ್ಯಿಕ ರಚನೆಗೆ ತೊಡಗುವ ಸಂದರ್ಭದಲ್ಲಿ ಎದುರಿಸಬೇಕಾಗಿದ್ದ ಸವಾಲು ಇಂತಹದ್ದೇ. ಸ್ವಾತಂತ್ರ್ಯ ಹೋರಾಟ, ಸ್ವಾತಂತ್ರ್ಯನಂತರದ ಅತಂತ್ರ ಸ್ಥಿತಿ ಜೊತೆಗೆ ವಾಸ್ತವ ಬದುಕಿನಲ್ಲಿ ಜನರ ಸ್ಥಿತಿಗತಿಗಳನ್ನು ಸಾಹಿತ್ಯಿಕ ರೂಪದಲ್ಲಿ ತೆರೆದಿಡುವ ಸವಾಲು ಇಲ್ಲಿನ ಕಥನಕಾರರಿಗೆ ಮುಖ್ಯವಾಗಿತ್ತು. ಈ ಸಂದರ್ಭದ ಸಾಹಿತ್ಯದ ಅಧ್ಯಯನವು ಪ್ರಾದೇಶಿಕತೆಯ ವಿವಿಧ ನೆಲೆಗಳನ್ನು ತಿಳಿಸುತ್ತಲೇ ಸಾಗುತ್ತದೆ.

ದೇಶೀಯತೆಯ ಪರಿಕಲ್ಪನೆಯೊಂದು ಇದ್ದಾಗ್ಯೂ ಪ್ರಾದೇಶಿಕತೆಯ ಪರಿಕಲ್ಪನೆ ಕಂಡುಬಂದದ್ದು ಅದರ ಮಹತ್ವವನ್ನು ತಿಳಿಸುತ್ತದೆ. ಆದರೆ ಸೈದ್ಧಾಂತಿಕವಾಗಿ ದೇಶೀಯತೆಯ ಬಗೆಗೆ ನಡೆದಷ್ಟು ಚರ್ಚೆ ಪ್ರಾದೇಶಿಕತೆಯ ಬಗೆಗೆ ನಡೆದಿಲ್ಲ. ಪ್ರಾದೇಶಿಕತೆ 'ದೇಶೀಯತೆ'ಯ ನೆರಳಿನಲ್ಲಿಯೇ ಕಂಡು ಬಂದಿರುವಂತಹದ್ದು. ಅದರ ಭಾಗವಾಗಿರುವಂತಹದ್ದು. ದೇಶೀವಾದದ ಹಿನ್ನೆಲೆಯಲ್ಲಿಯೇ ಇದರ ವ್ಯಾಖ್ಯಾನ ವನ್ನು ರಾಜೇಂದ್ರ ಚೆನ್ನಿಯವರು ಹೀಗೆ ಕಟ್ಟಿಕೊಡುತ್ತಾರೆ. "ಒಂದು ಸಾಹಿತ್ಯ ಪ್ರಾದೇಶಿಕ ಸತ್ವವನ್ನು, ಆ ಸಾಹಿತ್ಯವು ಹುಟ್ಟಿಕೊಳ್ಳುವ ಭಾಷಾ ಸಮುದಾಯದ ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಅನನ್ಯತೆಯನ್ನು ಮತ್ತು ಸಾಹಿತ್ಯಕ್ಕಿರುವ ತನ್ನದೇ ಆದ ಸ್ವಾಯತ್ತತೆಯನ್ನು ಗುಣಾತ್ಮಕವೆಂದು ಒಪ್ಪಿಕೊಳ್ಳುವ ಧೋರಣೆ ಅಥವಾ ಸಿದ್ಧಾಂತ. ದೇಶೀವಾದವೆನ್ನುವ ಪದದಿಂದಲೇ ಸ್ಪಷ್ಟವಾಗುವಂತೆ ಅದರ ಪರಿಕಲ್ಪನೆಗೆ ಒಂದು ನಿರ್ದಿಷ್ಟವಾದ ಭೌಗೋಳಿಕ ಪ್ರದೇಶದಲ್ಲಿ ಬದುಕುವ ಭಾಷಾ ಸಮುದಾಯವೊಂದರ ಇರವು ಅವಶ್ಯಕವಾಗಿದೆ. ಆದರೆ ಈ ಪರಿಕಲ್ಪನೆಯಲ್ಲಿ ಕೇವಲ ಭೌಗೋಳಿಕ ಅಂಶಕ್ಕೆ ಮಹತ್ವವನ್ನು ಕೊಟ್ಟು ಬಿಟ್ಟರೆ ಅದು ದೇಶಿವಾದಕ್ಕಿಂತ ಭಿನ್ನವಾಗಿ ಪ್ರಾದೇಶಿಕತೆಯ ಪರಿಕಲ್ಪನೆಯಾಗಿ ಬಿಡುತ್ತದೆ" (ರಾಜೇಂದ್ರ ಚೆನ್ನಿ; ೧೯೯೯; ಪುಟ : ೨).

ದೇಶೀವಾದದ ಲಕ್ಷಣವು ಪ್ರಾದೇಶಿಕತೆಯ ಲಕ್ಷಣವೂ ಆಗಿದೆ. ದೇಶಿವಾದದ ಭಾಗವಾಗಿ ಪ್ರಾದೇಶಿಕತೆಯ ವ್ಯಾಖ್ಯಾನ ಒಪ್ಪಿತ ವಿಚಾರವೆ. ಆದರೆ ಇದರೊಂದಿಗೆ ಒಪ್ಪಿಕೊಳ್ಳಬೇಕಾದ ಇನ್ನೊಂದು ವಿಚಾರವನ್ನು ಮರೆಯುವಂತಿಲ್ಲ. ದೇಶೀವಾದದ ಹುಟ್ಟಿಗೆ ಕಾರಣವಾದಂತಹ ವಿಚಾರಗಳನ್ನು ಪ್ರಾದೇಶಿಕತೆಗೆ ಅನ್ವಯಿಸುವುದು ತಪ್ಪೆನಿಸಲಾರದು. ದೇಶೀವಾದದ ಆವಿರ್ಭಾವಕ್ಕೆ ಕಾರಣವಾಗಿದ್ದ ಅಂಶವನ್ನು ಗಿರಡ್ಡಿಯವರು ಈ ರೀತಿ ಗುರುತಿಸುತ್ತಾರೆ. "ಸಾಹಿತ್ಯದಲ್ಲಿ ದೇಶೀವಾದವೆಂದರೆ, ಲೇಖಕ ತಾನು ಬೆಳೆದು ಬಂದ ಸಮಾಜ, ಸಂಸ್ಕೃತಿ, ಪರಂಪರೆಗಳೊಂದಿಗೆ ತನ್ನನ್ನು ಗುರುತಿಸಿಕೊಳ್ಳುವುದು; ಅವುಗಳೊಂದಿಗೆ ಆತ್ಮೀಯವಾದ, ಸೃಜನಶೀಲ ಸಂಬಂಧವನ್ನು ಸ್ಥಾಪಿಸಿಕೊಳ್ಳುವುದು; ನಮ್ಮ ಸಾಹಿತ್ಯವು ಪಾಶ್ಚಾತ್ಯೀಕರಣದ ತೀವ್ರತೆಯ ಬಗ್ಗೆ ಎಚ್ಚರವಹಿಸುವುದು; ಮುಖ್ಯವಾಗಿ, ಅಂತಾರಾಷ್ಟ್ರೀಯತೆಯ ಹೆಸರಿನಲ್ಲಿ ನಾವು ನಮ್ಮ ನೆಲದಲ್ಲಿಯ ಬೇರುಗಳನ್ನೇ ಕಳೆದುಕೊಳ್ಳುವ ಅಪಾಯದಿಂದ ರಕ್ಷಿಸಿಕೊಳ್ಳುವುದು. ಹಾಗೆಂದು ಇದು ಪರಂಪರೆಯ ಅಂಧಾನುಕರಣೆಯೂ ಅಲ್ಲ" (ಗಿರಡ್ಡಿ ಗೋವಿಂದರಾಜು; ೧೯೯೨; ಪುಟ : ೯೩).

ದೇಶೀವಾದವು ತನ್ನತನದ ಅಭಿವ್ಯಕ್ತಿಯಲ್ಲದೆ, 'ಅನ್ಯ'ದರೊಂದಿಗೆ ತನ್ನನ್ನು ಉಳಿಸಿಕೊಳ್ಳುವಿಕೆ ಯಾಗಿದೆ. ಅನ್ಯಸಂಸ್ಕೃತಿಯ ಹೇರಿಕೆಯ ಅಪಾಯವನ್ನು ಮೀರುವಿಕೆಯಾಗಿ ಪ್ರಾದೇಶಿಕತೆಯು ಕಂಡು ಬಂದಿತು. ಪ್ರಾದೇಶಿಕತೆಯನ್ನು ಕುರಿತು ಬಿಡಿ ಬಿಡಿಯಾಗಿ ನಡೆದ ಕೆಲ ಚರ್ಚೆಗಳ ಅವಲೋಕನ ಅದರ ಸ್ವರೂಪದ ರೂಪುರೇಷೆಗಳನ್ನು ತಿಳಿಸುತ್ತದೆ. ನಿರ್ದಿಷ್ಟ ಪ್ರದೇಶದ ಭೌಗೋಳಿಕ, ಸಾಮುದಾಯಿಕ, ಸಾಂಸ್ಕೃತಿಕ, ಭಾಷಿಕ ಅಧ್ಯಯನದ ಹಿನ್ನೆಲೆಯಲ್ಲಿ ಪ್ರಾದೇಶಿಕತೆಯು ಮುಖ್ಯವಾಗಿದೆ. ಈ ನಿರ್ದಿಷ್ಟ ವಿಷಯಗಳ ಹಿನ್ನೆಲೆಯಲ್ಲಿ ಪ್ರಾದೇಶಿಕತೆಯನ್ನು ಅರ್ಥೈಸುವ ವಿದ್ವಾಂಸರ ವಿಚಾರಗಳು ಮುಖ್ಯವೆನಿಸುತ್ತವೆ.

ನಿರ್ದಿಷ್ಟ, ಭೌಗೋಳಿಕ ಚೌಕಟ್ಟೊಂದು ಪ್ರಾದೇಶಿಕತೆಯ ಅಧ್ಯಯನಕ್ಕೆ ಮುಖ್ಯವೆಂದು ತಿಳಿಸುವ ಡಾ. ಬಿ.ಎ. ವಿವೇಕ ರೈ ಅವರ ವಿಚಾರಗಳು ಪ್ರಮುಖವಾದಂತವುಗಳು -

೧. ನಿರ್ದಿಷ್ಟ ಭೌಗೋಳಿಕ ಪ್ರದೇಶವೊಂದರ ವೈಶಿಷ್ಟ್ಯಗಳನ್ನು ಗುರುತಿಸಲು ಅನುಕೂಲವಾಗುವಂತೆ ಕೆಲವು ವಿಶಿಷ್ಟ ಅಂಶಗಳನ್ನು ಶೋಧಿಸುವುದು.

೨. ಸಂವಹನ ವಿನ್ಯಾಸಗಳನ್ನು ಗಮನಿಸುವುದು ಮತ್ತು ಅಂತಹ ಸಂವಹನ ಜಾಲವು ವಿಸ್ತರಣೆಗೊಳ್ಳುವ ಭೌಗೋಳಿಕ ಪ್ರದೇಶವನ್ನು ಗುರುತಿಸುವುದು.

೩. ನಿರ್ದಿಷ್ಟ ಸಂಗತಿಯೊಂದನ್ನು ಒಂದು ಭೌಗೋಳಿಕ ಪ್ರದೇಶದಲ್ಲಿ ಗುರುತಿಸುವುದು ಮತ್ತು ಆ ಪ್ರದೇಶದ ಕೇಂದ್ರ ಸ್ಥಳದಿಂದ ದೂರ ಹೋದಂತೆಲ್ಲಾ ಅದು ಕಣ್ಮರೆಯಾಗುತ್ತಾ ಹೋಗುವ ರೀತಿಯನ್ನು ಗಮನಿಸುವುದು.

೪. ಕೆಲವು ನಿರ್ದಿಷ್ಟ ಅಂಶಗಳ ಭೌಗೋಳಿಕ ಮೇರೆಗಳನ್ನು ಗುರುತಿಸುವುದು, ಅಂತಹ ವಿಶಿಷ್ಟ ಸಂಗತಿಗಳು ಸಂಪೂರ್ಣವಾಗಿ ಕಣ್ಮರೆಯಾಗುವ ಪ್ರಾದೇಶಿಕ ಹೊರ ಮೇರೆಯನ್ನು ಗಮನಿಸುವುದು.

ಪ್ರಾದೇಶಿಕ ಅಧ್ಯಯನದ ಈ ನಾಲ್ಕು ದೃಷ್ಟಿಕೋನಗಳೂ ಪರಸ್ಪರ ಪೂರಕವಾದವು. ಪ್ರತಿಯೊಂದು ದೃಷ್ಟಿಕೋನವೂ ಪ್ರಾದೇಶಿಕತೆಯನ್ನು ಕುರಿತು ಒಂದು ಭಿನ್ನವಾದ ಒತ್ತನ್ನು ಕೊಡುತ್ತವೆ. ಒಂದು ಭಿನ್ನವಾದ ಆಲೋಚನೆಯ ರೀತಿಯನ್ನು ಕೊಡುತ್ತದೆ. ಯಾವುದೇ ದೃಷ್ಟಿಕೋನವನ್ನು ತೆಗೆದುಕೊಂಡರೂ ಪ್ರಾದೇಶಿಕ ಪರಿಕಲ್ಪನೆಯಲ್ಲಿ ಭೌಗೋಳಿಕ ಆಯಾಮವು ಪ್ರಾದೇಶಿಕತೆಯ ಕೇಂದ್ರೀಯ ದೃಷ್ಟಿಯಾಗಿರುತ್ತದೆ (ಡಾ. ಬಿ.ಎ. ವಿವೇಕ ರೈ; ಪುಟ : ೧).

ಇಲ್ಲಿ ಒಂದು ನಿರ್ದಿಷ್ಟ ಪ್ರದೇಶ ಹಾಗೂ ಅಲ್ಲಿನ ವಿಶಿಷ್ಟ ಅಂಶಗಳ ನೆಲೆಯಲ್ಲಿ ಪ್ರಾದೇಶಿಕತೆಯು ನಿರ್ವಚನಗೊಂಡಿದೆ. ಪ್ರಾದೇಶಿಕ ಮೇರೆಯೆ ಅಲ್ಲಿನ ವೈಶಿಷ್ಟ್ಯಗಳ ಗುರುತಿಸುವಿಕೆಯ ಆದಿ ಮತ್ತು ಅಂತ್ಯ. "ಪ್ರಾದೇಶಿಕತೆ ಒಂದು ಪ್ರದೇಶದ ಸಾಂಸ್ಕೃತಿಕ ವಿಭಿನ್ನತೆಯನ್ನು ಆ ಜನ ಸಮುದಾಯದ ಸಾಮೂಹಿಕ ಚೆಲುವನ್ನು ಎತ್ತಿಹಿಡಿಯುವ ಪರಿಕಲ್ಪನೆ, ವೈಯಕ್ತಿಕ ಅಭಿವ್ಯಕ್ತಿಗಿಂತ ಇಲ್ಲಿ ಸಾಮೂಹಿಕ ಅಭಿವ್ಯಕ್ತಿ ಮಹತ್ವದ್ದಾಗುತ್ತದೆ. ಪ್ರತಿ ಜನಸಮುದಾಯವೂ ಬದುಕನ್ನು ದಕ್ಕಿಸಿಕೊಳ್ಳುವ ಒಂದು ಪ್ರಾದೇಶಿಕ ಶೈಲಿಯನ್ನು ಹೊಂದಿರುತ್ತದೆ. ಪ್ರತಿ ಪ್ರದೇಶಕ್ಕೂ ತನ್ನದೇ ಆದ ಜಾನಪದ ಛಾಪು ಮತ್ತು ಛಾತಿ ಇರುತ್ತದೆ. ಇದೇ ಪ್ರಾದೇಶಿಕತೆಯ ಜೀವಾಳ (ಬಿದರಹಳ್ಳಿ ನರಸಿಂಹಮೂರ್ತಿ, ಪುಟ : ೩, ಪ್ರಾದೇಶಿಕತೆಯ ಒಳನೋಟಗಳು, ಶೂದ್ರ). ಬದುಕಿನ ವಿಶಿಷ್ಟ ಶೈಲಿ ಹಾಗೂ ಸಂಸ್ಕೃತಿಯ ಅನನ್ಯತೆಯ ಮುಖೇನ ಪ್ರಾದೇಶಿಕತೆಯನ್ನು ಈ ವ್ಯಾಖ್ಯಾನ ನಿರ್ವಚಿಸುತ್ತದೆ. "ಒಂದು ಪ್ರದೇಶದ ಪ್ರಾದೇಶಿಕತೆ ಎಂಬುದು ಅದರ ಭೌಗೋಳಿಕ, ಭಾಷಿಕ, ಸಾಂಸ್ಕೃತಿಕ ಮತ್ತು ಸಾಮಾಜಿಕ ಅಂಶಗಳಲ್ಲಿ ವ್ಯಕ್ತವಾಗುತ್ತದೆ. ಈ ಪ್ರಾದೇಶಿಕ ವಿಭಿನ್ನಾಂಗಗಳು ಮತ್ತೊಂದು ಪ್ರದೇಶದ ಇಂಥವೇ ಅಂಶಗಳಿಗಿಂತ ವಿಶಿಷ್ಟವೂ, ವಿನೂತನವೂ

ಆಗಿದ್ದಾಗ ಮಾತ್ರ ಅವು ಗಮನಾರ್ಹವಾಗುತ್ತವೆ" (ಶಿವರಾಮ ಕಾಡನುಕುಪ್ಪೆ; ೨೦೦೩, ಪುಟ : ೩೭). ಈ ಮೇಲಿನ ಎಲ್ಲಾ ಅಭಿಪ್ರಾಯಗಳು ನಿರ್ದಿಷ್ಟ ಪ್ರದೇಶವೊಂದಕ್ಕೆ ಸಂಬಂಧಿಸಿದಂತೆ ಪ್ರಾದೇಶಿಕತೆಯ ಚಹರೆಗಳನ್ನು ತೆರೆದಿಡುತ್ತವೆ. ಈ ವ್ಯಾಖ್ಯಾನಗಳನ್ನು ಗಮನಿಸಿದಾಗ ಸಹ ದೇಶೀಯತೆಯ ಉಗಮಕ್ಕೆ ಕಾರಣವಾದ ಅನ್ಯ ಸಂಸ್ಕೃತಿಯಿಂದಾಗಿ ಎದುರಾದ ವಿಸ್ಮೃತಿಯ ಆತಂಕವನ್ನು ಎದುರಿಸುವಂತಹ ಸಂದರ್ಭದಲ್ಲಿಯೋ ಪ್ರಾದೇಶಿಕತೆಯ ಅವಿರ್ಭಾವವೂ ಆಗಿದೆ ಎನ್ನಬಹುದು. ಹಾಗಾಗಿ ಭಾಷಿಕ, ಜನಾಂಗಿಕ, ಸಾಂಸ್ಕೃತಿಕ ಅಭದ್ರತೆಯ ಆತಂಕವು 'ಪ್ರಾದೇಶಿಕತೆ'ಯ ಆಗಮನದ ಅಗತ್ಯ ವಾತಾವರಣವನ್ನು ರೂಪಿಸಿತು.

"Some comman factors respeonsible for the rise of nativist, regional demands have been specified, viz, influx of migrants, cultural differences between the migrants and local people, restricted job opportunities for indigenous middle class, immobility of local population, rapid growth of education among the lower middle classes, a competitive labour market, language domination or a sense of insecurity of language - culture, religion, etc, (Sajal Basu ; 1992; page No : 4).

ಅನ್ಯಸಂಸ್ಕೃತಿಯ ಜನರು ನಮ್ಮ ನೆಲದಲ್ಲಿ ನೆಲೆ ಪಡೆದದ್ದು ಸಮಾಜದಲ್ಲಿ ಸಾಂಸ್ಕೃತಿಕ ಅಂತರವನ್ನು ಉಂಟುಮಾಡಿತು. ಇದರಿಂದ ದೇಶೀಯರಲ್ಲಿ ಉಂಟಾದ ಭಾಷಿಕ, ಸಾಂಸ್ಕೃತಿಕ ಹಾಗೂ ಜನಾಂಗೀಯ ಅಭದ್ರತೆ ಹಾಗೂ ಅನ್ಯದರ ಹೇರಿಕೆಯ ಒತ್ತಡಗಳು ಪ್ರಾದೇಶಿಕತೆಯ ಉಗಮವನ್ನು ಪ್ರೇರೇಪಿಸಿದವು.

ಅನ್ಯ ಎನ್ನಬಹುದಾದ ಜನಾಂಗ, ಸಂಸ್ಕೃತಿ, ಭಾಷೆಯನ್ನು ಅನಿವಾರ್ಯ ಎನ್ನುವ ಮಟ್ಟದ ಹೇರುವಿಕೆಯನ್ನು ಮೀರುವಲ್ಲಿ ಪ್ರಾದೇಶಿಕತೆಯು ಅಗತ್ಯವಾಯಿತು. ವಿಸ್ಮೃತಿಯ ಆತಂಕ ಪ್ರಾದೇಶಿಕತೆಯ ಹುಟ್ಟಿಗೆ ಕಾರಣವಾದ ಪ್ರಮುಖ ಅಂಶ. ಆದರೆ ಹೈದರಾಬಾದ್ ಕರ್ನಾಟಕ ಪ್ರದೇಶಕ್ಕೆ ಸಂಬಂಧಿಸಿದಂತೆ ಅನ್ಯ ಎನ್ನುವ ಸಂಸ್ಕೃತಿ, ಭಾಷೆ, ಜನಾಂಗವನ್ನು ಅನಿವಾರ್ಯವಾಗಿ ಒಪ್ಪಿಕೊಂಡಂತೆ ಕಂಡು ಬರುತ್ತದೆ. ಅದಾಗ್ಯೂ ಮುಸ್ಲಿಂ ಆಳ್ವಿಕೆಯಿಂದಾಗಿ ಪಡೆದ ಭಾಷಿಕ, ಸಾಂಸ್ಕೃತಿಕ ವೈಶಿಷ್ಟ್ಯಗಳನ್ನು ತಮ್ಮ ಭಾಷೆ, ಸಂಸ್ಕೃತಿಯ ವಿಸ್ಮೃತಿಗೆ ಕಾರಣವಾಗುವ ಅಂಶವೆಂದೂ, ಅದನ್ನು ಸಂಪೂರ್ಣ ತಿರಸ್ಕರಿಸಿ, ನಮ್ಮದೆಂದು ಹೇಳಬಹುದಾದ ಭಾಷೆ, ಸಂಸ್ಕೃತಿಯನ್ನು ಮಾತ್ರವೇ ಉಳಿಸಿಕೊಳ್ಳಬೇಕೆನ್ನುವ ಮಡಿವಂತಿಕೆ ಇಲ್ಲಿ ಕಂಡುಬಂದಿಲ್ಲ. ಅನ್ಯ ಪ್ರಭುತ್ವದ ನೆರಳಿನಲ್ಲಿ ನಮ್ಮದು, ಅನ್ಯದು ಎಂದು ಭೇದಿಸಲಾಗದಷ್ಟು ಬೆರೆತುಹೋದ, ಪಕ್ವಗೊಂಡ, ವೈಶಿಷ್ಟ್ಯಪೂರ್ಣವಾಗಿ ರೂಪುಗೊಂಡ ಇಲ್ಲಿನ ಭಾಷೆ, ಸಂಸ್ಕೃತಿ, ಜನಾಂಗವು ಸ್ವಾತಂತ್ರ್ಯನಂತರ ಬೇರೆ ಬೇರೆ ನೆಲೆಯಲ್ಲಿ ತನ್ನ ಹಿಂದುಳಿದಿರುವಿಕೆಯನ್ನು ಸಮರ್ಥಿಸಿಕೊಂಡಿದೆ. ಈ ಹಿನ್ನೆಲೆಯಲ್ಲಿ ಪ್ರಾದೇಶಿಕ ಸಂವೇದನೆಯ ಸ್ವರೂಪದ ಅರ್ಥೈಸುವಿಕೆ ಇಲ್ಲಿ ಬಹುಮುಖ್ಯವಾಗಿದೆ.

ಇದುವರೆಗೂ ಮುಖ್ಯವೆಂದು ಪರಿಗಣಿತವಾಗಿದ್ದ ಭೌಗೋಳಿಕ ಭಾಷಿಕ, ಜನಾಂಗಿಕ, ಸಾಂಸ್ಕೃತಿಕ ವಿಷಯಗಳಿಗೆ ಪ್ರತಿಯಾಗಿ ಇಲ್ಲವೆ ಸರಿ ಮಿಗಿಲಾಗಿ ಗುರುತಿಸಿಕೊಳ್ಳಲು ಹೆಣಗುತ್ತಿರುವ ನಿರ್ದಿಷ್ಟ ಪ್ರದೇಶ

ಹಾಗೂ ಅದರ ಭಾಷಿಕ, ಜನಾಂಗಿಕ, ಸಾಂಸ್ಕೃತಿಕ ವೈಶಿಷ್ಟ್ಯಗಳ ಸಂವೇದನೆಯೇ ಪ್ರಾದೇಶಿಕ ಸಂವೇದನೆ. ಸಂವೇದನೆ ಇಲ್ಲಿ ವ್ಯಕ್ತಿಗತವಾಗದೆ, ಕೋಮುವಾದಿಯಾಗದೇ ಒಟ್ಟಾರೆ ಪ್ರದೇಶದ ವೈಶಿಷ್ಟ್ಯಕ್ಕೆ ಕಾರಣವಾಗಿರುವ ಸಾಂಸ್ಕೃತಿಕ, ಭಾಷಿಕ, ಜನಾಂಗಿಕ ಅಸ್ಮಿತತೆಯ ಅನುಭವದ ಅಭಿವ್ಯಕ್ತಿಯಾಗಿ ಕಂಡುಬರುತ್ತದೆ. ಒಂದು ಪ್ರದೇಶದ ಒಳಗಡೆಯೇ ಇಲ್ಲವೆ ಪ್ರದೇಶ ಪ್ರದೇಶಗಳ ನಡುವೆ ಕಂಡು ಬರುವ ಅಸ್ಮಿತತೆಯ ಅಪೇಕ್ಷೆ ಆಯಾ ಪ್ರದೇಶದ, ಸಾಂಸ್ಕೃತಿಕ, ಭಾಷಿಕ, ಜನಾಂಗಿಕ ಅನನ್ಯತೆಯನ್ನು ಕಟ್ಟಿಕೊಡುತ್ತದೆ. ಪ್ರದೇಶ ಪ್ರದೇಶಗಳ ನಡುವೆ ಉಂಟಾದ ಅಂತರ, ಹಾಗೆಯೇ ಪ್ರದೇಶದ ಒಳಗಡೆಯೇ ಉಂಟಾದ ಸಾಂಸ್ಕೃತಿಕ ಜನಾಂಗಿಕ, ಭಾಷಿಕ ಅಂತರ ಈ ರೀತಿಯ (ಪ್ರಾದೇಶಿಕ ಸಂವೇದನೆ) ಅಸ್ಮಿತತೆಯ ಅಪೇಕ್ಷೆಗೆ ಕಾರಣವಾಗಿದೆ. ಸಾಮಾಜಿಕ ಹಾಗೂ ಸಾಹಿತ್ಯಿಕ ವಲಯದಲ್ಲಿ ಪ್ರಧಾನ (Major) ಎಂದು ಗುರುತಿಸಲಾದ ಜನಾಂಗ, ಭಾಷೆ, ಸಂಸ್ಕೃತಿಯೊಂದರ ಸಂವೇದನೆಯಿಂದಾಗಿ ಅಲ್ಲಿನ ಭೌಗೋಳಿಕ ಪರಿಸರದಲ್ಲಿನ ಇನ್ನಿತರೆ ವೈಶಿಷ್ಟ್ಯಪೂರ್ಣ ಜನಾಂಗ, ಭಾಷೆ, ಸಂಸ್ಕೃತಿಯ ಸಂವೇದನೆಗಳನ್ನು ಹೊರಗುಳಿಸಲಾಗುತ್ತಿದೆ. ಇಡಿಯಾದ ರಾಷ್ಟ್ರೀಯತೆಯ ಒಳಗಡೆ ರಾಜ್ಯ ರಾಜ್ಯಗಳ ನಡುವೆ, ಪ್ರದೇಶ ಪ್ರದೇಶಗಳ ಮಧ್ಯೆ ಪ್ರದೇಶಕ್ಕೆ ಸಂಬಂಧಿಸಿದಂತೆ ಸಮುದಾಯ ಸಮುದಾಯಗಳ ನಡುವೆ ಹೊರಗುಳಿಸಿರುವಿಕೆಯ ಕೀಳರಿಮೆಯು ಪ್ರಾದೇಶಿಕ ಸಂವೇದನೆಯ ಅಭಿವ್ಯಕ್ತಿಯ ಮುಖ್ಯ ಹಿನ್ನೆಲೆಯಾಗಿದೆ.

೨೦ನೇ ಶತಮಾನಕ್ಕೂ ಪೂರ್ವದಲ್ಲಿ ವಸಾಹುತುಶಾಹಿಯ ವಿರೋಧಿಯಾಗಿ ಕಂಡುಬಂದದ್ದು ರಾಷ್ಟ್ರೀಯತೆ. ರಾಷ್ಟ್ರೀಯತೆಯನ್ನು ಬಿಂಬಿಸುವ ಈ ಅವಧಿಯ ಕಥನ ಸಾಹಿತ್ಯದಲ್ಲಿಯೂ ಪ್ರಾದೇಶಿಕತೆ ಕಂಡುಬರುತ್ತದೆ. ಈ ಸಂದರ್ಭದ ಪ್ರಾದೇಶಿಕತೆ ಅಭಿವ್ಯಕ್ತಿ ವಿಶಿಷ್ಟ ಅರ್ಥವನ್ನು ಪಡೆದಿತ್ತು. ಅದು ಈ ಹಿಂದೆ ಹೇಳಿದಂತೆ ಅನ್ಯಸಂಸ್ಕೃತಿಗೆ ಪ್ರತಿಯಾಗಿ ಕಂಡು ಬಂದಿರುವಂತಹದ್ದೇ ವಿನಹ ತನ್ನ ನೆಲೆದಲ್ಲಿ ತನ್ನನ್ನೇ ಪ್ರತಿನಿಧಿಸಿಕೊಳ್ಳಬೇಕಾದಂತಹ ಸ್ವರೂಪದ್ದಲ್ಲ. ರಾಷ್ಟ್ರೀಯತೆಯ ಜನತೆಯಲ್ಲಿ ಐಕ್ಯತೆಯನ್ನುಂಟು ಮಾಡಿತು ಎಂಬುದು ಬ್ರಿಟಿಷ್ ಆಡಳಿತದಿಂದ ಭಾರತ ಸ್ವಾತಂತ್ರ್ಯಗೊಳ್ಳುವುದಕ್ಕೆ ರೂಪುಗೊಂಡ ಸನ್ನಿವೇಶವಾಗಿತ್ತು. ಆದರೆ ರಾಷ್ಟ್ರೀಯತೆಯ ಪರಿಕಲ್ಪನೆಯನ್ನು ಮೀರಿ ಸ್ವತಂತ್ರ್ಯ ಭಾರತದಲ್ಲಿ ಪ್ರತಿಯೊಂದು ರಾಜ್ಯವೂ ತನ್ನ ಅಸ್ತಿತ್ವಕ್ಕಾಗಿ ಹೋರಾಡಿತು. ಇದರ ಪರಿಣಾಮ ರಾಜ್ಯಗಳ ಪುನರ್‌ವಿಂಗಡಣೆ ಕಂಡು ಬಂದಿತು. ಪ್ರತಿಯೊಂದು ರಾಜ್ಯವೂ ತನ್ನದೇ ಆದ ಅನನ್ಯತೆಯನ್ನು ಹೊಂದಿದ್ದರೂ ಪುನರ್‌ವಿಂಗಡಣೆಯ ಮೂಲಕ ಅಧಿಕೃತಗೊಳ್ಳುವ ಆಸಕ್ತಿಯನ್ನು ತೋರಿದವು. ಭೌಗೋಳಿಕತೆಗಿಂತ ಮುಖ್ಯವಾಗಿ ಭಾಷೆಯ ಆಧಾರದ ಮೇಲೆ ಪ್ರತ್ಯೇಕ ರಾಜ್ಯಗಳ ನಿರ್ಮಾಣವಾಯಿತು. ಈ ಹಿನ್ನೆಲೆಯಲ್ಲಿ ಒಂದು ಭೌಗೋಳಿಕ ಪರಿಸರಕ್ಕೆ ಹೊಂದಿಕೊಂಡಿದ್ದು ಒಂದು ನಿರ್ದಿಷ್ಟ ಭಾಷೆಯನ್ನು ಮಾತೃಭಾಷೆಯನ್ನಾಗಿ ಸ್ವೀಕರಿಸಿದ್ದ ಗಡಿ ಪ್ರದೇಶದ ಜನತೆಯ ಜೀವನ ಅತಂತ್ರವಾಯಿತು. ಪ್ರತಿ ರಾಜ್ಯವು ತನ್ನ ಮೇರೆಗಾಗಿ ವ್ಯಾಜ್ಯಕ್ಕಿಳಿದದ್ದು ಇತ್ತೀಚಿಗೂ ಕೊನೆಗಾಣದ ಸಮಸ್ಯೆಯಾಗಿದೆ. ಆದರೆ ಪ್ರಾದೇಶಿಕತೆಯ ಅಪೇಕ್ಷೆಯ ಮೊದಲ ಹೆಗ್ಗುರುತೆಂದು ರಾಜ್ಯ ಪುನರ್‌ವಿಂಗಡಣೆಯನ್ನು ಪರಿಗಣಿಸುವುದು ತಪ್ಪೆನಿಸಲಾರದು, ಆಯಾ ರಾಜ್ಯ ತನ್ನ ಭಾಷೆ, ಸಾಹಿತ್ಯ, ಕಲೆ-ಸಂಸ್ಕೃತಿಗಳ ಬಗೆಗೆ ತನ್ನದೇ ಆದ ಸಂವೇದನೆಯನ್ನು ಹೊಂದಿದ್ದು ಆ ಮೂಲಕ ತನ್ನ ಅನನ್ಯತೆಯನ್ನು

ಸ್ಥಾಪಿಸಿದೆ. ಇದರಿಂದ ಪ್ರತಿಯೊಂದು ರಾಜ್ಯವು ಸಂಪೂರ್ಣ ಒಂದೇ ಧರ್ಮ, ಭಾಷೆ, ಜನಾಂಗ, ಸಂಸ್ಕೃತಿಯ ದ್ವೀಪವಾಗಿ ಪರಿಣಮಿಸಿದೆ ಎನ್ನಲಾಗದು. ಆದರೆ ರಾಷ್ಟ್ರೀಯತೆಯ ವ್ಯಾಪಕ ಆಯಾಮದಲ್ಲಿ ಪ್ರತಿ ರಾಜ್ಯವೂ ತನ್ನ ಅಸ್ತಿತ್ವದ ಸ್ಥಾಪನೆಗೆ ಸದಾ ಕಾತರಿಸುತ್ತಿದೆ.

"Regionalism may be defined as counfer - movement to any exaggerated or oppressive form of Centralisation" (Encyclopedia of Social Sciences, Vol. 13. pp. 208-9, Binahamton Education, New York, 1969).

ಭಾರತೀಯ ಸಂದರ್ಭದಲ್ಲಿ ಈ ಮಾತನ್ನು ಒಪ್ಪಿಕೊಳ್ಳುವುದು ಅನುಚಿತವೇನಲ್ಲ. ದೇಶಕ್ಕೆ ಅನ್ವಯಿಸುವಂತೆ ಪ್ರತಿಯೊಂದು ರಾಜ್ಯ, ಪ್ರತಿ ರಾಜ್ಯದಲ್ಲಿ ಪ್ರತಿಯೊಂದು ಪ್ರದೇಶ, ಪ್ರತಿಯೊಂದು ಪ್ರದೇಶದಲ್ಲಿರುವ ವಿಶಿಷ್ಟ ಸಮುದಾಯ, ಸಂಸ್ಕೃತಿ, ಭಾಷೆ ಕೇಂದ್ರೀಯ ನೆಲೆ(Major)ಯಲ್ಲಿರುವುದನ್ನು ಪ್ರಶ್ನಿಸುತ್ತಲೇ ಅನನ್ಯತೆಗಾಗಿ ಹೋರಾಡುತ್ತಿರುತ್ತವೆ. ರಾಜ್ಯದ ಒಳಗೆ ತನ್ನ ಅಸ್ತಿತ್ವಕ್ಕಾಗಿ, ಹಿಂದುಳಿದಿರುವಿಕೆಯ ಹಪಹಪಿಕೆಯಲ್ಲಿ ಉಳಿದಿರುವ ಪ್ರದೇಶವೇ **ಹೈದರಾಬಾದ್ ಕರ್ನಾಟಕ**. ಈ ಪ್ರದೇಶದ ಪ್ರಾದೇಶಿಕತೆಯ ಅನಾವರಣ ಇಸ್ಲಾಂ ದಾಳಿಯ ವಿರುದ್ಧವಾಗಿ ನಮ್ಮದು ಎನ್ನುವ ವೈಶಿಷ್ಟ್ಯಗಳನ್ನು ಎತ್ತಿ ಹಿಡಿಯುವ ಮಾದರಿಯದ್ದಲ್ಲ. ವಸಾಹತುಶಾಹಿ ಸಂದರ್ಭಕ್ಕೆ ಪ್ರತಿಕ್ರಿಯಿಸಿದ ಇತರೆ ಪ್ರದೇಶದ ಸಾಹಿತ್ಯದಂತೆ ಈ ಪ್ರದೇಶದ ಸಾಹಿತ್ಯ ಅನ್ಯ ಆಕ್ರಮಣಕ್ಕೆ ಪ್ರತಿಕ್ರಿಯಿಸದೆ ಉಳಿಯಿತು ಎಂದು ಹೇಳಲಾಗದು. ಆದರೆ ಅಂದಿನ ನಿರ್ದಿಷ್ಟ ಕಾಲಘಟ್ಟದಲ್ಲಿಯೇ ತನ್ನ ಪ್ರತಿಕ್ರಿಯೆಯನ್ನು ಅಭಿವ್ಯಕ್ತಿಸುವ ಅವಕಾಶ ಇಲ್ಲಿನ ಸಾಹಿತ್ಯಕ್ಕೆ ದೊರೆಯಲಿಲ್ಲ. ಹಾಗಾಗಿ ಮುಂದೆ ಪ್ರಗತಿಶೀಲ ಸಾಹಿತ್ಯ ಸಂದರ್ಭದಲ್ಲಿ ಸಾಹಿತ್ಯ ರಚನೆಗೆ ತೊಡಗಿಸಿಕೊಂಡ ಇಲ್ಲಿನ ಸಾಹಿತ್ಯಕ್ಕೂ ಕರ್ನಾಟಕದ ಇನ್ನಿತರೆ ಪ್ರದೇಶದ ಪ್ರಗತಿಶೀಲ ಸಾಹಿತ್ಯಕ್ಕೂ ವ್ಯತ್ಯಾಸವಿದೆ. ಈ ಹಿಂದೆ ಪ್ರಾದೇಶಿಕವಾಗಿ ಕಂಡುಬಂದ ಸ್ವಾತಂತ್ರ್ಯ ಹೋರಾಟದ ಸ್ಥಿತಿಯನ್ನು ಹಾಗೂ ಸಮಾಜದ ವಾಸ್ತವಿಕ ಪರಿಸ್ಥಿತಿಗಳೆರಡಕ್ಕೂ ಸ್ಪಂದಿಸಬೇಕಾಗಿದ್ದ ಸವಾಲನ್ನು ಇಲ್ಲಿನ ಆರಂಭಘಟ್ಟದ ಸಾಹಿತ್ಯ ಎದುರಿಸಬೇಕಾಯಿತು. ಈ ಎರಡು ವಿಷಯಗಳನ್ನು ಸರಿದೂಗಿಸಿದ, ಅಧ್ಯಯನದ ಆಕರವಾಗುತ್ತಿರುವ ಇಲ್ಲಿನ ಕಥನದ ಸಾಹಿತ್ಯದ ಅಂತಃಸತ್ವವು ವಿಶಿಷ್ಟವಾಗಿದೆ.

ಒಂದೇ ರಾಜ್ಯದ ಒಳಗೆ ಬೇರೆ ಬೇರೆ ಪ್ರದೇಶಗಳ ಸಾಹಿತ್ಯಿಕ ಅಭಿವೃದ್ಧಿಯ ಜೊತೆಗೆ ತನ್ನನ್ನು ಗುರುತಿಸಿಕೊಳ್ಳಲು ಪ್ರಯತ್ನಿಸುತ್ತಿರುವ ಇಲ್ಲಿನ ಸಾಹಿತ್ಯಿಕ ರಚನೆ ವಿಶಿಷ್ಟವಾಗಿಯೇ ರೂಪುಗೊಳ್ಳುತ್ತಿದೆ. 'ಒಂದು ಕಾದಂಬರಿ ಪ್ರಾದೇಶಿಕ ವಿವರಗಳ ಮೂಲಕ ಒಳ್ಳೆಯ ಪ್ರಾದೇಶಿಕ ಕಾದಂಬರಿಯಾಗಬಹುದು. ಆದರೆ ಅಷ್ಟೇ ಉತ್ತಮವಾಗಿ ಪ್ರಾದೇಶಿಕತೆಯನ್ನು ಒಳಗೊಂಡು ಸಾಹಿತ್ಯವನ್ನು ರಚಿಸಿದರೂ ಅದು ರಾಷ್ಟ್ರೀಯತೆಯನ್ನು ಒಳಗೊಂಡಿರುವುದಿಲ್ಲ. ಏಕೆಂದರೆ ಯಾವ ಪ್ರದೇಶವೇ ಆಗಲಿ ತನ್ನ ಪ್ರಭುತ್ವವನ್ನು ಬಹಳ ವರ್ಷಗಳ ಕಾಲ ಕಳೆದುಕೊಂಡರೆ ಕ್ರಮೇಣ ಕ್ಲೈಬ್ಯತನಕ್ಕೆ ತುತ್ತಾಗುತ್ತದೆ, ಕ್ರಿಯಾಶೀಲತೆ ಕಳೆದುಕೊಳ್ಳುತ್ತದೆ. ಯೋಚಿಸುವ, ಚಿಂತಿಸುವ ಶಕ್ತಿಯನ್ನು ಕಳೆದುಕೊಂಡು ಬಿಡುತ್ತದೆ' (ಯು.ಆರ್.

ಅನಂತಮೂರ್ತಿ; ಪುಟ : ೧೫೮). ಎನ್ನುವ ಮಾತು ಈ ಪ್ರದೇಶದ ಸಾಹಿತ್ಯಕ್ಕೆ ಅನ್ವಯಿಸುವುದಿಲ್ಲ. ಈ ಮೇಲಿನ ಮಾತುಗಳಲ್ಲಿ ಸತ್ಯಾಂಶಗಳಿವೆ. ಆದರೂ ಹೈದರಾಬಾದ್ ಕರ್ನಾಟಕದ ಸಾಹಿತ್ಯದಲ್ಲಿ ಯೋಚಿಸುವ, ಚಿಂತಿಸುವ ಶಕ್ತಿ ಉಳಿದುಕೊಂಡಿರುವುದು ಗುರುತಿಸಲೇಬೇಕಾದ ಅಂಶವಾಗಿದೆ.

ಪಂಥ ಪರಿಕಲ್ಪನೆಯ ಹಿನ್ನೆಲೆಯಲ್ಲಿ ಸಾಹಿತ್ಯಿಕ ಅಧ್ಯಯನಕ್ಕೆ ತೊಡಗಿಕೊಳ್ಳುವುದು ಇಲ್ಲಿನ ಉದ್ದೇಶವಲ್ಲ. ಆದರೆ ನವೋದಯ ಸಂದರ್ಭದ ಕುವೆಂಪು, ಕಾರಂತರ ಕಥನದಲ್ಲಿ ಪ್ರಾದೇಶಿಕತೆಯನ್ನು ಗುರುತಿಸುವುದಕ್ಕೂ, ಹೈದರಾಬಾದ್ ಕರ್ನಾಟಕದ ಕಥನ ಸಾಹಿತ್ಯದಲ್ಲಿ ಪ್ರಾದೇಶಿಕತೆಯನ್ನು ಗುರುತಿಸುವುದಕ್ಕೂ ಅಂತರವಿದೆ. ಪ್ರಕೃತಿ ಸೌಂದರ್ಯ, ಸಮುದಾಯಗಳ ವಿಶಿಷ್ಟ ಭಾಷೆ, ಸಂಸ್ಕೃತಿಯ ಜೊತೆಗೆ ಈ ಪ್ರದೇಶದ ಕಥನ ಜನಾಂಗಿಕ ಹಾಗೂ ಪ್ರಾದೇಶಿಕ ಹಿಂದುಳಿದಿರುವಿಕೆಯ ಹಿನ್ನೆಲೆಯಲ್ಲಿ ಪ್ರಾದೇಶಿಕತೆಯನ್ನು ಅಭಿವ್ಯಕ್ತಿಸುವುದು ಇಲ್ಲಿ ಮುಖ್ಯವಾಗಿದೆ. ಪ್ರಾದೇಶಿಕತೆಯ ಪರಿಕಲ್ಪನೆಯು ಸಾಮಾಜಿಕವಾಗಿ ಬದಲಾವಣೆ ಮಾತ್ರವಲ್ಲ ಜೊತೆಗೆ ಸಾಹಿತ್ಯಿಕವಾಗಿಯೂ ಬದಲಾವಣೆಯನ್ನುಂಟುಮಾಡಿತು. ಸಾಹಿತ್ಯಿಕ ವಲಯದಲ್ಲಿ ಚರ್ಚಿತವಾಗುತ್ತಿದ್ದ ಯಾವುದೋ ಒಂದು ನಿರ್ದಿಷ್ಟ ಸಮುದಾಯಗಳನ್ನು ಸಂಸ್ಕೃತಿಯಿಂದ ಹೊರಗುಳಿದಿದ್ದ ಸಂಸ್ಕೃತಿ, ಸಮುದಾಯಗಳನ್ನು ಮುನ್ನೆಲೆಗೆ ತರಲು ಇಲ್ಲಿನ ಕಥನ ಸಾಹಿತ್ಯ ಪ್ರಯತ್ನಿಸಿತು. ಇದರಿಂದ ಸಾಹಿತ್ಯದ ವ್ಯಾಪಕತೆ ಕಂಡು ಬಂದಿತಲ್ಲದೆ ಸಾಹಿತ್ಯಿಕ ಚಲನಶೀಲತೆಯೂ ಸಾಧ್ಯವಾಯಿತು. ನವೋದಯ, ಪ್ರಗತಿಶೀಲ, ದಲಿತ-ಬಂಡಾಯ, ಸ್ತ್ರೀವಾದ, ನವ್ಯ, ನವ್ಯೋತ್ತರ ಹೀಗೆ ಬೇರೆ ಬೇರೆ ಸಾಹಿತ್ಯಿಕ ಪ್ರಯೋಗಗಳಿಗೆ ಪ್ರಾದೇಶಿಕತೆಯು ಹೊಸ ಆಯಾಮವನ್ನು ಒದಗಿಸಿತು. ವಿಶಿಷ್ಟವಾದ ಜನಾಂಗ ಅದರ ಸಂಸ್ಕೃತಿ, ಭಾಷೆಯನ್ನು ಸಾಹಿತ್ಯಕ್ಕೆ ತರುವ ಮೂಲಕ ಸೃಜನಶೀಲತೆಯನ್ನು ಅನೇಕ ಕತೆಗಾರರು ಸಾಧಿಸಿದ್ದಾರೆ.

ಸಾಹಿತ್ಯ ವಿಮರ್ಶೆಯಲ್ಲಿ ಪ್ರಾದೇಶಿಕತೆಯ ಬಗ್ಗೆ, ಅದು ಸಾಹಿತ್ಯದಲ್ಲಿ ಕಂಡುಬರಬೇಕಾದ ವಿಧಾನದ ಕುರಿತು ಚರ್ಚೆಗಳಿವೆ. ಪ್ರಾದೇಶಿಕತೆಯು ಒಂದರ್ಥದಲ್ಲಿ ಸಾಹಿತ್ಯಿಕ ಬರವಣಿಗೆಯ ಒಂದು ಶೈಲಿ. ನಿರ್ದಿಷ್ಟ ಪ್ರದೇಶದ ಸಾಂಸ್ಕೃತಿಕ ಪರಿಸರ ಈ ಶೈಲಿಯನ್ನು ದಟ್ಟವಾಗಿ ಪ್ರಭಾವಿಸಿರುತ್ತದೆ. ಭೌಗೋಳಿಕ, ಭಾಷಿಕ, ಜನಾಂಗಿಕ, ಸಾಂಸ್ಕೃತಿಕ ಆಯಾಮಗಳೆಲ್ಲವುಗಳಿಂದಲೂ ಕೆಲ ವೇಳೆ ಇವುಗಳಲ್ಲಿ ಯಾವುದಾದರೊಂದು ಆಯಾಮದಿಂದ ಪ್ರಾದೇಶಿಕತೆಯ ಅಭಿವ್ಯಕ್ತಿ ಸಾಹಿತ್ಯ ಕೃತಿಯಲ್ಲಿ ಮೂರ್ತಗೊಳ್ಳುತ್ತದೆ. ಸಾಹಿತ್ಯದ ವಿಮರ್ಶೆ ಕೇವಲ ಕೃತಿಯ ವಿಷಯಕ್ಕೆ ಮಾತ್ರವೇ ಸೀಮಿತವಾಗದೆ ಅಲ್ಲಿರುವ ಪ್ರಾದೇಶಿಕ ವಿಚಾರಗಳ ಕಡೆಗೆ ವ್ಯಾಪಿಸಿರುವುದು ಸೂಕ್ಷ್ಮ ಓದನ್ನು ಸಾಧ್ಯವಾಗಿಸಿದೆ. ಇದರಿಂದ ಈ ಹಿಂದಿನ ಹಾಗೂ ಇತ್ತೀಚಿನ ಸಾಹಿತ್ಯಿಕ ರಚನೆಯ ಶೈಲಿಯಲ್ಲಾದ ಬದಲಾವಣೆಗಳನ್ನು ತಿಳಿಯಬಹುದಾಗಿದೆ. ಒಂದು ಸಾಹಿತ್ಯ ಕೃತಿಯ ಶ್ರೇಷ್ಠತೆಯನ್ನು ತಿಳಿಸುವ ಸಂದರ್ಭದಲ್ಲಿ ಅದರಲ್ಲಿನ ಪ್ರಾದೇಶಿಕ ವಿಚಾರಗಳ ಉಲ್ಲೇಖವೂ ಚರ್ಚಿತ ವಾಗುತ್ತದೆ. ಕೃತಿಯೊಂದರ ಆಶಯದ ಅಭಿವ್ಯಕ್ತಿಗೆ ಸೂಕ್ತ ರೀತಿಯಲ್ಲಿ ಪ್ರಾದೇಶಿಕತೆಯನ್ನು ಬಳಸಿಕೊಂಡ ಕೃತಿ ಮಾನ್ಯತೆಯನ್ನು ಪಡೆಯುತ್ತದೆ. ಪ್ರಾದೇಶಿಕತೆಯನ್ನು ಸಂಪೂರ್ಣವಾಗಿ ಕಡೆಗಣಿಸುವ ಇಲ್ಲವೆ

ಅತಿಯಾದ ಪ್ರಾದೇಶಿಕ ವಿವರಗಳಿಂದ ಕೂಡಿರುವ ಸಾಹಿತ್ಯ ಕೃತಿಗಳು ನಿರೀಕ್ಷಿತ ಮಟ್ಟದ ಯಶಸ್ಸನ್ನು ಕಾಣುವುದಿಲ್ಲ. "ಪ್ರಾದೇಶಿಕತೆ ಎಂಬುದು ಕಾದಂಬರಿಯಲ್ಲಿ ಕಲೆಯಾಗಬೇಕು. ಅದರ ವಿವರಗಳು ಬದುಕಿನ ವಿವರಗಳ ಜೊತೆ ಅವಿನಾಭಾವ ಸಂಬಂಧಗಳಿಸಿಕೊಂಡು ಮಾನವೀಯ ಸಂಬಂಧಗಳಿಗೆ ಪ್ರತಿಮೆಗಳಾಗಿಯೋ ಪ್ರತೀಕಗಳಾಗಿಯೋ ಬಂದಿರಬೇಕು. ಒಂದು ಪರಿಸರ ಪ್ರಪಂಚದ ರೀತಿ ರಿವಾಜುಗಳನ್ನು ನಾವು ಓದುತ್ತಿದ್ದೇವೆ ಎನ್ನುವುದಕ್ಕಿಂತ ಒಂದು ಬದುಕನ್ನು ಅದರ ಎಲ್ಲ ಸೂಕ್ಷ್ಮಾತಿ ಸೂಕ್ಷ್ಮ ಸಂಬಂಧಗಳ ಜೊತೆ ಸಂವೇದಿಸುತ್ತಾ ಅನುಭವಿಸುತ್ತಿದ್ದೇವೆ ಎಂಬ ಅನುಭವವಾಗಬೇಕು" (ಶಿವರಾಮ ಕಾಡನಕುಪ್ಪೆ; ೨೦೦೩; ಪುಟ : ೩೮೮). ಈ ಅಭಿಪ್ರಾಯಗಳು ಪ್ರಾದೇಶಿಕತೆಯೆಂಬುದು ವಿವೇಚನೆಯಿಂದ ಕೂಡಿದ ಕಥನದ ಆಕೃತಿಯೆಂಬುದನ್ನು ತಿಳಿಸಿಕೊಡುತ್ತವೆ. ಹೈದರಾಬಾದ್ ಕರ್ನಾಟಕದ ಕಥನ ಸಾಹಿತ್ಯದಲ್ಲಿ ಪ್ರಾದೇಶಿಕತೆಯನ್ನು ತರಲೇಬೇಕೆನ್ನುವ ಹಠದಲ್ಲಿ ಇಲ್ಲಿನ ಸಾಹಿತ್ಯ ಮೂಡಿಬಂದಿಲ್ಲ. ಸಂವೇದನೆಗಳೊಂದಿಗೆ ಅನುಭವಕ್ಕೆ ಬರುವ ಇಲ್ಲಿನ ಪ್ರಾದೇಶಿಕತೆ ಇದುವರೆಗೂ ತಿಳಿದಿದ್ದ ಪ್ರಾಕೃತಿಕ ಸೌಂದರ್ಯದ ವರ್ಣನೆಯನ್ನು ಮೀರಿದ್ದಾಗಿದೆ. ಬಿರುಬಿಸಿಲಿನಲ್ಲಿ ಉಳಿದುಕೊಂಡ ತಂಪನ್ನು, ಹಿಂದುಳಿದಿರುವಿಕೆ, ಅಜ್ಞಾನದಲ್ಲಿಯೂ ಉಳಿದುಕೊಂಡಿರುವ ಮನುಷ್ಯ ಬದುಕಿನ ಮಾನವೀಯತೆಯನ್ನು ತಿಳಿಸಿರುವಂತ ಹದ್ದಾಗಿದೆ. ಈ ಭಾಗದ ಕಥನ ಶಕ್ತಿ ಪಡೆಯುವುದೇ ಇಲ್ಲಿನ ಭೌಗೋಳಿಕ, ಸಾಮುದಾಯಿಕ, ಸಾಂಸ್ಕೃತಿಕ ಸಮಸ್ಯೆಗಳಿಗೆ ಉತ್ತರ ಕಂಡುಕೊಳ್ಳುವಲ್ಲಿ ಅತಿಯಾದ ಪ್ರಾದೇಶಿಕತೆಯಿಂದ ಸೋಲುವ 'ಬೆಳ್ಳ' (ಚೆನ್ನಣ್ಣ ವಾಲೀಕಾರ) ಕಾದಂಬರಿಯಾಗಲಿ, ಒಂದು ಹದವರಿತು ಪ್ರಾದೇಶಿಕತೆಯನ್ನು ಸಾಹಿತ್ಯದಲ್ಲಿ ಬಳಸಿ ಯಶಸ್ವಿಯಾದ 'ಮಲೆಗಳಲ್ಲಿ ಮದುಮಗಳು' (ಕುವೆಂಪು), 'ಗ್ರಾಮಾಯಣ' (ರಾವ್‌ಬಹದ್ದೂರ), 'ಮರಳಿ ಮಣ್ಣಿಗೆ' (ಶಿವರಾಮ ಕಾರಂತ) ಕಾದಂಬರಿಗಳಾಗಲಿ ಆಶಯದ ದೃಷ್ಟಿಯಿಂದ ಮುಖ್ಯವಾಗಿಯೇ ನಿಲ್ಲುತ್ತವೆ. ಪ್ರಾದೇಶಿಕತೆಯನ್ನು ಸಾಹಿತ್ಯದ ಬರವಣಿಗೆಯಾಗಿಸಲು ಇಂತಹದ್ದೇ ಎನ್ನುವ ಸಿದ್ಧಮಾದರಿಯ ಚೌಕಟ್ಟೊಂದು ಇಲ್ಲ. ಅದು ಕತೆಗಾರನ ಅಭಿವ್ಯಕ್ತಿ ಶೈಲಿಯ ಪಕ್ವತೆಯನ್ನು ಅವಲಂಬಿಸಿರುತ್ತದೆ.

ಈ ರೀತಿಯ ಶೈಲಿಯ ಪಕ್ವತೆಯನ್ನು ಸಾಹಿತ್ಯಲೋಕಕ್ಕೆ ತೋರುವುದು ಹೈದರಾಬಾದ್ ಕರ್ನಾಟಕದ ಕಥನದ ಮುಖ್ಯ ತುರ್ತು ಹಾಗೂ ಸಾಮಾಜಿಕವಾದ ಜವಾಬ್ದಾರಿ ಎನಿಸುತ್ತದೆ. ಅಪರಿಚಿತವಾಗಿದ್ದ, ಅನಾಗರೀಕ ನೆಲೆಯಿಂದ ನೋಡಲಾಗಿದ್ದ ಬದುಕನ್ನು ಅಲ್ಲಿನ ಸಂಘರ್ಷಗಳನ್ನು ಸಾಹಿತ್ಯಿಕ ಭಾಷೆಗೆ ಒಗ್ಗಿಸುವುದು ಮಹತ್ವದ ಸಾಹಿತ್ಯಿಕ ಬೆಳವಣಿಗೆಯೇ ಆಗಿದೆ. ಪ್ರಾದೇಶಿಕ ಸಂವೇದನೆಯು ಸೀಮಿತ ವ್ಯಾಪ್ತಿಗೆ ಮಾತ್ರವೇ ಉಳಿದುಕೊಳ್ಳುವಂತಹದ್ದಲ್ಲ. 'ಪ್ರಾದೇಶಿಕತೆಯ ಜೊತೆಗೆ ಸಾರ್ವಲೌಕಿಕತೆಯು ಸಾಹಿತ್ಯಕ್ಕಿರಬೇಕು. ಇಲ್ಲದಿದ್ದರೆ ಅದು ವಿಶ್ವಮೋಹಕವಾಗಲಾರದು. ಸಾಹಿತ್ಯ ದೇಶಮಾನ್ಯವೂ, ಲೋಕಮಾನ್ಯವೂ ಆಗಬೇಕಾದರೆ ಅದರಲ್ಲಿ ಒಂದು ಪ್ರದೇಶ ಅಥವಾ ಗುಂಪಿನ ಜನರ ವಿಶಿಷ್ಟ ಗುಣದೋಷಗಳು ಪ್ರತಿಬಿಂಬಿತವಾಗಿರುವಂತೆಯೇ ಎಲ್ಲ ಮಾನವರಿಗೂ ಸಾಮಾನ್ಯವಾದ ಕೆಲವು ಲಕ್ಷಣಗಳು ಇರಬೇಕು. ಇಲ್ಲದಿದ್ದರೆ ಆ ಸಾಹಿತ್ಯ ಒಂದು ಕಾಲಕ್ಕೆ ಒಂದು ಸಂಕುಚಿತ ಪರಿಮಿತಿಯುಳ್ಳ ದೇಶಕ್ಕೆ

ಮಾತ್ರ ಬೆಲೆಯುಳ್ಳದ್ದಾಗಿ ಅದಕ್ಕೆ ಶಾಶ್ವತ ಕೀರ್ತಿಗೆ ಹಕ್ಕಿಲ್ಲದಂತಾಗುತ್ತದೆ. ಪ್ರಾದೇಶಿಕತೆಯ ಅಂಶಗಳು ಇಲ್ಲದೆ ಸಾಹಿತ್ಯ ಗಟ್ಟಿ ನೆಲದೊಡನೆ ತನ್ನ ಸಂಪರ್ಕವನ್ನು ಕಳೆದುಕೊಳ್ಳುತ್ತದೆ ನಿಜ. ಆದರೆ ಪ್ರಾದೇಶಿಕತೆಯೊಂದೇ ತನ್ನ ಗುಣ ವಿಶೇಷವಾಗಿರುವ ಸಾಹಿತ್ಯ ಜಗತ್ತಿನ ಮಹಾಕೃತಿಗಳೊಡನೆ ಹೆಗಲೆಣೆಯಾಗಿ ನಿಲ್ಲಲಾರದು. ಪ್ರಪಂಚದ ಶ್ರೇಷ್ಠ ಸಾಹಿತಿಗಳೆಲ್ಲರೂ ಈ ರಾಷ್ಟ್ರೀಯತೆ, ಪ್ರಾದೇಶಿಕತೆ ಮತ್ತು ಮಾನವೀಯತೆಗಳನ್ನು ತಮ್ಮ ಕೃತಿಗಳಲ್ಲಿ ಸಮರಸವಾಗಿ ಬೆರೆಸಿರುವವರೇ ಆಗಿರುತ್ತಾರೆ" (ಎಂ. ರಾಮ್‌ರಾವ್; ಪುಟ : ೧೭೩-೧೭೪).

ಕಾಲ, ದೇಶಗಳಾಚೆ ಸಾರ್ವತ್ರಿಕ ಹಾಗೂ ಸಾರ್ವಕಾಲಿಕವಾದ ಸಂವೇದನೆಗಳನ್ನು ತಿಳಿದುಕೊಳ್ಳುವುದು ಇಲ್ಲಿ ಮುಖ್ಯವಾಗಿದೆ. ಪ್ರಾದೇಶಿಕ ಪ್ರಾತಿನಿಧ್ಯದ ಜೊತೆಗೆ ವಸಾಹತೋತ್ತರ ಸಂದರ್ಭದ ವಾಣಿಜ್ಯೀಕರಣ, ಕೈಗಾರಿಕೀಕರಣಗಳ ದಾಳಿ, ಇಂಗ್ಲಿಷ್ ಶಿಕ್ಷಣದ ಪ್ರಭಾವ, ಆಧುನಿಕ ಸಂಸ್ಕೃತಿ ಇತ್ಯಾದಿಗಳಿಂದಾಗಿ ಎದುರಾಗಿರುವ ಸಮಸ್ಯೆಗಳಿಗೂ ಸಾಹಿತ್ಯವು ಸ್ಪಂದಿಸುತ್ತಿದೆ. ಪ್ರಾದೇಶಿಕವಾಗಿ ಇಂತಹ ಬಿಕ್ಕಟ್ಟುಗಳಿಗೆ ಸ್ಪಂದಿಸುತ್ತಿರುವ ರೀತಿಯೂ ವಿಶಿಷ್ಟವಾಗಿರುವುದನ್ನು ಗುರುತಿಸಬೇಕಿದೆ.

ಪ್ರಸ್ತುತ ಅಧ್ಯಾಯದಲ್ಲಿ ಪ್ರಾದೇಶಿಕ ಸಂವೇದನೆಯ ಹಲವು ಮಾದರಿಗಳನ್ನು ವಿಶ್ಲೇಷಿಸಲಾಗಿದೆ. ಪ್ರಾದೇಶಿಕತೆಗೆ ಸಂಬಂಧಿಸಿದಂತೆ ಇದುವರೆಗೂ ಕಂಡುಬಂದ ಆಲೋಚನಾ ಕ್ರಮಗಳಿಗಿಂತ ಭಿನ್ನವಾಗಿ ಪ್ರಾದೇಶಿಕ ಸಂವೇದನೆಯನ್ನು ಕಂಡುಕೊಳ್ಳುವ ಪ್ರಯತ್ನಕ್ಕೆ ಇದು ಪೂರ್ವಪೀಠಿಕೆಯಾಗಿದೆ.

**ಅಡಿಟಿಪ್ಪಣಿ**

೧. 'ಈಶಾನ್ಯ ಕರ್ನಾಟಕ'ವೆಂದು ಗುರುತಿಸುವ ಹೈದರಾಬಾದ್ ಕರ್ನಾಟಕದ ಸ್ಥಿತಿಯೇ 'ಈಶಾನ್ಯ ಭಾರತ'ದಲ್ಲಿಯೂ ಇದೆ. ಬುಡಕಟ್ಟು ಸಮುದಾಯಗಳು ವಾಸವಾಗಿರುವ ಈ ಪ್ರದೇಶದ ಅಭಿವೃದ್ಧಿಗೆ ಕಲಂ ೭೩೧ರ ಪ್ರಕಾರ ಸಂವಿಧಾನಾತ್ಮಕ ಒಪ್ಪಿಗೆ ದೊರೆತಿದೆ. ಆದರೆ 'ಅಹೋಂ' ಸಾಮ್ರಾಜ್ಯದ ಆಡಳಿತದ ನಂತರ ಬ್ರಿಟಿಷರ ಆಳ್ವಿಕೆಯಲ್ಲಿ ಪರಕೀಯತೆಯನ್ನು ಈ ಪ್ರದೇಶದ ಜನತೆ ಅನುಭವಿಸಿತು. ಸ್ವತಂತ್ರ್ಯ ಭಾರತದಲ್ಲಿದ್ದಾಗ್ಯೂ ಈ ಪ್ರದೇಶ ಸರ್ಕಾರದ ನಿರ್ಲಕ್ಷ್ಯದಿಂದಾಗಿ ಅಭಿವೃದ್ಧಿಯನ್ನು ಹೊಂದಿಲ್ಲ. ರಾಷ್ಟ್ರೀಯತೆಯ ಮನೋಭಾವದಲ್ಲಿ ಒಂದಾಗಬೇಕೆಂಬ ಈ ಪ್ರದೇಶದ ಭಾವನಾತ್ಮಕತೆ ಈಡೇರಿಲ್ಲ. ಈ ಕಾರಣ 'ಉದಯಾಚಲ' ಎಂದು ಪ್ರತ್ಯೇಕ ರಾಜ್ಯ ನಿರ್ಮಾಣ ಮಾಡುವ ಇಚ್ಛೆ ಇಲ್ಲಿ ಕಂಡು ಬಂದಿದೆ. ಈಶಾನ್ಯ ಭಾರತ ಪ್ರತ್ಯೇಕ ರಾಜ್ಯ ನಿರ್ಮಾಣ ಮಾಡಬೇಕೆನ್ನುವ ವಿಚಾರದಿಂದಾಗಿ ಅಮೇರಿಕಾ ಮತ್ತು ಚೀನಾ ದೇಶಗಳು ಹಸ್ತಕ್ಷೇಪ ಮಾಡುತ್ತಿರುವುದು ತಿಳಿದಿರುವ ಸಂಗತಿಯಾಗಿದೆ. ಪ್ರತ್ಯೇಕ ರಾಜ್ಯ ನಿರ್ಮಾಣದ ದುಷ್ಪರಿಣಾಮವನ್ನು ಈಶಾನ್ಯ ಭಾರತಕ್ಕೆ ಹಾಗೂ ಹೈದರಾಬಾದ್ ಕರ್ನಾಟಕಕ್ಕೆ ಅನ್ವಯಿಸುವಂತೆ ಸಮೀಕರಿಸಬಹುದಾಗಿದೆ. ಅಲ್ಲದೆ ಪ್ರತ್ಯೇಕತೆಯ ವಿಚಾರವನ್ನು ಕೈಬಿಡಬೇಕಿದೆ.

•••

## ಅಧ್ಯಾಯ ಮೂರು

# ಕಥನ ಸಾಹಿತ್ಯ ಮತ್ತು ನಾಡು-ನುಡಿಯ ಅಭಿವ್ಯಕ್ತಿ

ದೇಶ - ಭಾಷೆಯ ವಿಷಯ ವಸ್ತುವನ್ನುಳ್ಳ ಕಥನ ಸಾಹಿತ್ಯ ಕೇವಲ ಸಾಹಿತ್ಯಿಕ ರಚನೆಯಾಗಿ ಉಳಿದಿಲ್ಲ. ಚರಿತ್ರೆಯ ಪುನರ್‌ಮೌಲೀಕರಣಕ್ಕೆ ಕಾರಣವಾಗಿರುವಂತಹದ್ದು. ನಿರ್ದಿಷ್ಟ ಕಾಲಘಟ್ಟಕ್ಕೆ ಈ ವಿಷಯ ಸೀಮಿತವಾದದ್ದಲ್ಲ. ನಿರ್ದಿಷ್ಟ ವಿಷಯದ ಬಗೆಗೆ ಆಯಾ ಕಾಲಘಟ್ಟದ ಅಪೇಕ್ಷೆಯನ್ನು ಸಾಹಿತ್ಯ ತುಂಬಿಕೊಡುತ್ತಲೇ ಅದರ ಸಾಧ್ಯತೆಗಳನ್ನು ವಿಸ್ತರಿಸಿಕೊಂಡಿದೆ. ಕಾಲಘಟ್ಟವೊಂದರಿಂದ ಪ್ರೇರಿತವಾದ ವಿಷಯ ಆಯಾ ಕಾಲಘಟ್ಟದಲ್ಲಿಯೇ ಸಾಹಿತ್ಯಕ ರೂಪವನ್ನು ಪಡೆಯಬಹುದು ಇಲ್ಲವೆ ಘಟಿಸಿದ ಕಾಲಘಟ್ಟದ ಎಷ್ಟೋ ವರ್ಷಗಳ ನಂತರ ಅಭಿವ್ಯಕ್ತಿಯನ್ನು ಪಡೆಯಬಹುದು. ಈ ಅಂತರ ಕೇವಲ ಸಾಹಿತ್ಯಿಕ ಭಿನ್ನತೆಯನ್ನು ಮಾತ್ರವೇ ತೆರೆದಿಡದೆ ಕಾಲಘಟ್ಟದ ಬಿಕ್ಕಟ್ಟುಗಳನ್ನು ತೆರೆದಿಡುತ್ತದೆ.

ಬ್ರಿಟೀಷ್ ಆಳ್ವಿಕೆಯಲ್ಲಿ ಕನ್ನಡ ಸಾಹಿತ್ಯ ಮುಂದುವರೆಯುವ ಪರಿಸ್ಥಿತಿ ೧೯ನೇ ಶತಮಾನದಲ್ಲಿ ರೂಪಗೊಂಡಿತ್ತು. ಈ ಸಂದರ್ಭದ ಕರ್ನಾಟಕದಲ್ಲಿ ಬ್ರಿಟೀಷ್ ಆಳ್ವಿಕೆಯು ಎರಡು ರೀತಿಯಲ್ಲಿ ಕಂಡುಬಂದಿತು. ಒಂದು ಬ್ರಿಟಿಷರ ನೇರ ಆಳ್ವಿಕೆ, ಇನ್ನೊಂದು ಪ್ರಾಂತೀಯ ಅರಸರ ಮೂಲಕ ಬ್ರಿಟೀಷ್ ಆಳ್ವಿಕೆ. ವಿದೇಶಿಯರ ಆಳ್ವಿಕೆಗೆ ಒಳಗಾದ ಈ ಎರಡೂ ಪ್ರದೇಶಗಳಿಗೆ ಸಾಮ್ಯ ಮತ್ತು ವ್ಯತ್ಯಾಸಗಳಿವೆ. ಆಡಳಿತದ ಹೊಸ ಮಾದರಿ, ಪ್ರಭುತ್ವ ಯೋಜಿತ ಶಿಕ್ಷಣ ಪದ್ಧತಿ, ಪ್ರಭುತ್ವದ ಮತಪ್ರಚಾರ, ಮತಾಂತರವನ್ನು ಪುರಸ್ಕರಿಸುವ ರೀತಿ ಇವೆಲ್ಲವೂಗಳಲ್ಲಿಯೂ ಸಾಮ್ಯತೆ ಇದೆ. ಆದರೆ ಬ್ರಿಟಿಷರ ನೇರ ಆಳ್ವಿಕೆಯ ಪ್ರದೇಶದ ಸಾಮಾಜಿಕ ಬದಲಾವಣೆಗಳಿಗೂ, ಪ್ರಾಂತೀಯ ಅರಸರ ಆಳ್ವಿಕೆಯಲ್ಲಿದ್ದ ಪ್ರದೇಶದ ಸಾಮಾಜಿಕ ಸ್ಥಿತಿಗೂ ವ್ಯತ್ಯಾಸಗಳಿವೆ. ಇಂಗ್ಲಿಷ್ ಶಿಕ್ಷಣ, ಮಿಶನರಿಗಳ ಕನ್ನಡ ಭಾಷೆ, ವ್ಯಾಕರಣ ಸಂಬಂಧಿಸಿದ ಸೇವೆ ಇತ್ಯಾದಿಯಿಂದಾಗಿ ಬ್ರಿಟಿಷರ ಆಳ್ವಿಕೆಯ ಪ್ರದೇಶದ ಕನ್ನಡ ಕಲಿಕೆಯಲ್ಲಿ ಒಂದು ಹೊಸ ಸಾಧ್ಯತೆ ಕಂಡುಬಂದಿತು. ಈ ಪ್ರದೇಶದ ಇಂಗ್ಲಿಷ್ ಕಲಿಕೆಯು ಕನ್ನಡ ಸಾಹಿತ್ಯದಲ್ಲಿ ಭಾಷಾಂತರ, ವಿಭಿನ್ನ ಪಾಶ್ಚಾತ್ಯ ಸಾಹಿತ್ಯ ಪ್ರಕಾರಗಳ ಅನುಕರಣೆಯಂತಹ ಹೊಸ ಪ್ರಯೋಗಗಳಿಗೆ ಪ್ರೇರಕವಾಯಿತು. ಇದಲ್ಲದೆ ದೇಶವನ್ನು ವಸಹತುವನ್ನಾಗಿಸಿಕೊಂಡ ಬ್ರಿಟಿಷರ ದಬ್ಬಾಳಿಕೆ; ಹಿಂದೂ ಸಂಪ್ರದಾಯವಾದಿ

ನಿಲುವುಗಳು, ಕ್ರೈಸ್ತ ಧರ್ಮ ತಂದೊಡ್ಡಿದ್ದ ಮತಾಂತರದ ತಲ್ಲಣಗಳು ಇತ್ಯಾದಿಗಳನ್ನು ಕುರಿತು ವಿದ್ಯಾವಂತ ವರ್ಗ ಯೋಚಿಸುವಂತೆ ಮಾಡಿತು. ಪ್ರಭುತ್ವದ ಕಪಿಮುಷ್ಟಿಯಲ್ಲಿಯೇ ಅದನ್ನು ವಿರೋಧಿಸುವ ಶಕ್ತಿಯೊಂದು ಜಾಗೃತಗೊಳ್ಳತೊಡಗಿತ್ತು. ಈ ಸಂಧರ್ಭದಲ್ಲಿ ರಾಷ್ಟ್ರೀಯತೆಯ ಜಾಗೃತಿಯನ್ನು ಡಿ.ಆರ್. ನಾಗರಾಜ ಅವರು ಗುರುತಿಸುವ ರೀತಿ ವಿಶಿಷ್ಟವಾಗಿದೆ. "ಭಾರತದಲ್ಲಂತೂ ರಾಷ್ಟ್ರೀಯತೆಯ ಉಗಮದ ಹಿಂದಿನ ಪ್ರಧಾನ ಪ್ರೇರಣೆ ಪಾಶ್ಚಾತ್ಯ ಸಂಸ್ಕೃತಿಯ, ರಾಷ್ಟ್ರೀಯ ಪ್ರಭುತ್ವದ ಸಂಪರ್ಕ. ಹೀಗಾಗಿ ಶತ್ರುವಿನ ಜತೆಗೆ ಹೋರಾಡುವಾಗ ಕೂಡಾ ಅವರಿಂದಲೇ ಕಲಿತ, ಅಂತರಂಗೀಕರಿಸಿಕೊಂಡ ಪರಿಕಲ್ಪನೆಗಳ ಗ್ರಹಿಕೆಗಳ ಬಳಕೆಯಾಗುತ್ತದೆ. ಭಾರತೀಯ ನವೋದಯದ ಸನ್ನಿವೇಶದಲ್ಲಿ ನಾವು ಕಲ್ಪಿಸಿಕೊಂಡ ರಾಷ್ಟ್ರದ ಪರಿಕಲ್ಪನೆಯಲ್ಲಿ ದೇಸಿತತ್ವ, ದೇಸಿರೂಪಗಳೆಷ್ಟು, ನಮ್ಮ ಶತ್ರುವಿನ ವಿಚಾರಗಳೆಷ್ಟು ಎಂದು ವಿಂಗಡಿಸಿದಾಗ ಬಹುಶಃ ಗಾಬರಿಯಾಗುವಷ್ಟು ಪರಕೀಯ ಆದರ್ಶಗಳು ಮತ್ತು ಮೌಲ್ಯಗಳು ಇವೆ. ಈ ಹಿನ್ನೆಲೆಯಿಂದ ಭಾರತೀಯ ನವೋದಯದಲ್ಲಿ ರೂಪುಗೊಂಡ ಭಾರತ ರಾಷ್ಟ್ರದ ಪರಿಕಲ್ಪನೆಯಲ್ಲಿ ಅನೇಕ ಮಹತ್ವದ ವ್ಯತ್ಯಾಸಗಳು ಇವೆ. ಮುಖ್ಯವಾಗಿ ಗಮನಿಸಬೇಕಾದ ಸಂಗತಿಯೆಂದರೆ ಗಾಂಧಿ ಚಿಂತಿಸಿದ, ಕಲ್ಪಿಸಿದ ಭಾರತದ ಸತ್ವ ಮತ್ತು ಗುರಿಗಳೂ ಬೇರೆ, ಹಿಂದೂ ರಾಷ್ಟ್ರೀಯವಾದಿಗಳು ಕಲ್ಪಿಸಿದ ರಾಷ್ಟ್ರದ ಸತ್ವ ಮತ್ತು ಗುರಿಗಳು ಬೇರೆ. ಒಂದೇ ಚಾರಿತ್ರಿಕ ಘಟ್ಟದಲ್ಲಿ ಹೀಗೆ ಭಿನ್ನ ರೀತಿಯ ಪರಸ್ಪರ ವಿರುದ್ಧ ನೆಲೆಗಳ ರಾಷ್ಟ್ರೀಯತೆಯ ಪರಿಕಲ್ಪನೆಗಳು ಹುಟ್ಟಿದವು ಎಂಬುದು ತುಂಬ ಕುತೂಹಲಕಾರಿ ಸಂಗತಿ" (ನಾಗರಾಜ ಡಿ.ಆರ್.; ೨೦೦೬; ಪುಟ : ೨೭೪-೨೭೫).

ರಾಷ್ಟ್ರೀಯತೆಯ ಜಾಗೃತಿ ಈ ಭಾಗದಲ್ಲಿ ಕಂಡುಬಂದ ರೀತಿಯು ವಿಶಿಷ್ಟವಾಗಿದೆ. ನಾಡು-ನುಡಿ ಅಭಿಮಾನವುಳ್ಳ ಸಾಹಿತ್ಯಿಕ ರಚನೆ ಈ ಭಾಗದಲ್ಲಿ ನವೋದಯ ಪೂರ್ವದಿಂದಲೂ ಕಂಡು ಬಂದದ್ದು ಆ ಕಾಲಘಟ್ಟಕ್ಕೆ ಸಾಹಿತ್ಯಿಕ ಸ್ಪಂದನವನ್ನು ನೀಡಿದೆ.

ಸ್ವಾತಂತ್ರ್ಯಪೂರ್ವದ ಹೈದರಾಬಾದ್ ಕರ್ನಾಟಕದಲ್ಲಿ ಇಂಗ್ಲೀಷ್ ಶಿಕ್ಷಣಕ್ಕೆ ಹೆಚ್ಚಿನ ಆದ್ಯತೆ ದೊರೆಯಲಿಲ್ಲ. ಸ್ವಾತಂತ್ರ್ಯ ನಂತರದ ದಿನಗಳಲ್ಲಿ ಇಂಗ್ಲೀಷ್ ಶಿಕ್ಷಣಕ್ಕೆ ಆದ್ಯತೆ ದೊರೆತರೂ ಅದು ಕೇವಲ ಆಡಳಿತ ನಿರ್ವಹಣೆಯ, ರಾಜಕೀಯ ಹಿತಾಸಕ್ತಿಯ ಗುರಿಯನ್ನು ಮುಖ್ಯವಾಗಿ ಹೊಂದಿತ್ತು. ಪ್ರಭುತ್ವದ ಹೇರಿಕೆಯಾದ ಉರ್ದು ಕಲಿಕೆ ಹೇಳಿಕೊಳ್ಳುವಂತಹ ಸಾಮಾಜಿಕ ಬದಲಾವಣೆಗಳನ್ನು ಈ ಪ್ರದೇಶದಲ್ಲಿ ತರಲಿಲ್ಲ. ಉರ್ದು ಶಿಕ್ಷಣ ಕೇವಲ ಉದ್ಯೋಗಕ್ಕಾಗಿ ಎಂಬ ನೆಲೆಯಲ್ಲಿಯೇ ಉಳಿದು ಕೊಂಡಂತೆ ಕಂಡುಬರುತ್ತದೆ. ಆ ಕಾಲದ ವಿದ್ಯಾವಂತ ವರ್ಗದಲ್ಲಿ ಉರ್ದುಸಾಹಿತ್ಯ ಗಜಲ್, ಶಾಹಿರಿ ಮುಂದಾವುಗಳ ರಚನೆ, ಹಾಡುಗಾರಿಕೆಯನ್ನು ಪ್ರೇರೇಪಿಸಿದೆ. ಆದರೆ ಸಾಮಾಜಿಕವಾದ ಅನಿಷ್ಟ ಪದ್ಧತಿಗಳ ಬಗೆಗೆ ಜಾಗೃತಿಯನ್ನುಂಟು ಮಾಡಿಲ್ಲ. ಬ್ರಿಟಿಷರ ಇಂಗ್ಲೀಷ್ ಶಿಕ್ಷಣ ನಿಜಾಮರ ಉರ್ದು ಶಿಕ್ಷಣಕ್ಕಿಂತ ಉತ್ತಮವೆಂಬುದು ಇಲ್ಲಿನ ಅಭಿಪ್ರಾಯವಲ್ಲ. ಕರ್ನಾಟಕದ ನಿರ್ದಿಷ್ಟ ಪ್ರದೇಶಗಳನ್ನಾಳಿದ ಈ ಭಾಷೆಗಳಿಗೆ ಅವುಗಳದೆ ಆದ ರಾಜಕೀಯ ಹಿತಾಸಕ್ತಿಗಳಿವೆ. ಈ ಎರಡೂ ಭಾಷೆಗಳ ಕಲಿಕೆ ಪ್ರಾದೇಶಿಕ ಭಾಷೆಯಾಗಿದ್ದ

ಕನ್ನಡ ಕಲಿಕೆಯನ್ನು, ಜೊತೆಗೆ ಸಾಮಾಜಿಕ ಬದುಕನ್ನು ಪ್ರಭಾವಿಸಿದ ರೀತಿ ಪ್ರತ್ಯೇಕವಾದ ಎರಡು ಪ್ರಾದೇಶಿಕ ಚಹರೆಗಳನ್ನೇ ರೂಪಿಸಿದವು.

ಈ ಪ್ರದೇಶಗಳಲ್ಲಿನ ಜನತೆ ಸ್ವಾತಂತ್ರ್ಯಕ್ಕೆ ಪ್ರೇರಿತವಾದ್ದರ ಹಿನ್ನೆಲೆಗಳ ಸೂಕ್ಷ್ಮ ಅವಲೋಕನ ಸ್ವಾತಂತ್ರ್ಯ ಹೋರಾಟಕ್ಕೆ ಭಿನ್ನ ಆಯಾಮಗಳನ್ನು ಒದಗಿಸುತ್ತದೆ. ಈ ಎರಡೂ ಪ್ರದೇಶಗಳಲ್ಲಿ ಆಡಳಿತ ಭಾಷೆಯಲ್ಲಿ ಶಿಕ್ಷಣವನ್ನು ಪಡೆದು ಬದುಕನ್ನು ಸುಭದ್ರಗೊಳಿಸಿಕೊಂಡವರು ಬ್ರಾಹ್ಮಣರು ಮತ್ತು ಇನ್ನುಳಿದ ಕೆಲ ಉತ್ತಮಕುಲದವರೆನಿಸಿದ ಸ್ಥಿತಿವಂತರು. ಈ ಎರಡು ಪ್ರದೇಶಗಳಲ್ಲಿ ಪ್ರಭುತ್ವದ ಕೋಮನ್ನು ಹೊರತುಪಡಿಸಿ ಆಡಳಿತದ ಉನ್ನತ ಹುದ್ದೆಗಳಲ್ಲಿದ್ದವರು ಬ್ರಾಹ್ಮಣರು. ಪ್ರಭುತ್ವದೊಂದಿಗೆ ರಾಜಿಯಾಗಿಯೇ ಈ ವರ್ಗದವರು ತಮ್ಮ ಜೀವನವನ್ನು ನಿರ್ವಹಿಸಿದ್ದಾರೆ. ಬಹುಪಾಲು ಈ ವರ್ಗದವರು ರಾಷ್ಟ್ರೀಯತೆ, ಸ್ವಾತಂತ್ರ್ಯವೆಂಬ ಮನೋಭಾವಕ್ಕೆ ಒಗ್ಗಿದ್ದು ಮತೀಯವಾಗಿ ಎದುರಾದ ಸಮಸ್ಯೆಗಳಿಂದ. ವಸಾಹತುಶಾಹಿ ಸಂದರ್ಭದಲ್ಲಿ ಕ್ರೈಸ್ತ ಧರ್ಮ ಉಂಟುಮಾಡಿದ ತಲ್ಲಣಗಳು ಹಾಗೆಯೇ ಹೈದರಾಬಾದ್ ಕರ್ನಾಟಕದಲ್ಲಿ ಮುಸ್ಲಿಂ ಮತದ ಪ್ರಚಾರ, ಮತಾಂತರದ ಒತ್ತಾಯಗಳು ಬಹುಪಾಲು ಉನ್ನತ ವರ್ಗದವರನ್ನು ಸ್ವಾತಂತ್ರ್ಯಕ್ಕೆ ಜಾಗೃತಗೊಳ್ಳುವಂತೆ ಮಾಡಿದವು. ಮತೀಯ ಹಿನ್ನೆಲೆಯಲ್ಲಿ ಉಂಟಾದ ಹೊಡೆತಗಳು ಸಮಾಜದ ಉನ್ನತ ವರ್ಗಗಳ ಜಾತಿ ಅಭಿಮಾನವನ್ನು ಅದನ್ನು ಉಳಿಸಿಕೊಳ್ಳುವ ಉಪಾಯವಾಗಿ ಸ್ವಾತಂತ್ರ್ಯ ಹೋರಾಟವನ್ನು ಪ್ರೇರೇಪಿಸಿದವು. ಇದನ್ನು ಹೊರತುಪಡಿಸಿ ಉನ್ನತ ವರ್ಗದವರೆನಿಸಿದವರು ಆಡಳಿತಕ್ಕೆ ನಿಷ್ಠವಾಗಿ, ಅವರ ಆಡಳಿತದ ಬಗೆಗೆ ಉತ್ತಮ ಎನ್ನುವ ಮಟ್ಟದ ಸಡಿಲತೆಯನ್ನು ಹೊಂದಿದ್ದರು. ಇನ್ನು ಬ್ರಾಹ್ಮಣಾದಿ ಉನ್ನತ ವರ್ಗದವರಿಂದ ಅನೇಕ ಶತಮಾನಗಳಿಂದ ಶೋಷಿತರಾಗಿದ್ದ ದುಡಿಯುವ ವರ್ಗಕ್ಕೆ ಅನ್ಯಪ್ರಭುತ್ವದ ಆಡಳಿತ ಒಂದು ರೀತಿಯ ಸ್ವಾತಂತ್ರ್ಯವನ್ನು, ಸೌಲಭ್ಯವನ್ನು ಒದಗಿಸಿತು. ಮತಾಂತರ ಹೊಂದುವುದು ದಲಿತರಿಗೆ ದೊಡ್ಡ ಪ್ರಶ್ನೆಯಾಗಿ ಕಾಡಲಿಲ್ಲ. (ಚೋಮನಂತಹ ವ್ಯಕ್ತಿತ್ವಗಳನ್ನು ಹೊರತುಪಡಿಸಿ) ಬ್ರಿಟೀಷ್ ಆಡಳಿತದ ಪ್ರದೇಶಗಳಲ್ಲಿ ಅನೇಕ ದಲಿತ ವರ್ಗಗಳಿಗೆ ಪ್ರಭುತ್ವದೊಂದಿಗೆ ಈ ಕಾರಣಕ್ಕೆ ಒಂದು ರಾಜಿ ಮನೋಭಾವವಿತ್ತು.

ಹೈದರಾಬಾದ್ ಕರ್ನಾಟಕದ ಮುಕ್ತಿ ಹೋರಾಟದ ಸಂದರ್ಭದಲ್ಲಿಯೂ ಸಹ ಉನ್ನತವರ್ಗದವರ ಹಾಗೂ ದಲಿತರ ಪ್ರಭುತ್ವದೊಂದಿಗಿನ ರಾಜಿ ಮನೋಭಾವ ಭಿನ್ನವಾಗಿರಲಿಲ್ಲ. ಆದರೆ ಹೈದರಾಬಾದ್ ಕರ್ನಾಟಕದಲ್ಲಿ ಮತಾಂತರದಿಂದಾಗಿಯೋ, ರಜಾಕಾರರಾಗಿಯೋ ಕೆಳವರ್ಗದವರು ಅನುಭವಿಸಿದ ಸ್ವಾತಂತ್ರ್ಯ ಈವರೆಗಿನ ಭಾರತದ ಸಾಮಾಜಿಕ ವ್ಯವಸ್ಥೆ ಅವರ ಜೀವನದ ಮೇಲೆ ಈವರೆಗೂ ಎಸಗಿದ ಅನ್ಯಾಯವನ್ನು ಪ್ರತಿಬಿಂಬಿಸುತ್ತದೆ. ಸ್ವಾರ್ಥದ ನೆಲೆಯಲ್ಲಿ ರಜಾಕಾರರೆನಿಸಿದ ಭೂಮಾಲೀಕರು ಇನ್ನಿತರ ಸ್ಥಿತಿವಂತರು ಪರಿಸ್ಥಿತಿಯನ್ನು ಎಲ್ಲಾ ಕಾಲಕ್ಕೂ ತಮಗೆ ಅನುಕೂಲವಾಗುವಂತೆಯೇ ಉಳಿಸಿಕೊಂಡರು. ಸ್ವಾತಂತ್ರ್ಯ ನಂತರ ಸ್ಥಿತಿವಂತರೆನಿಸಿದ್ದ ಉನ್ನತ ವರ್ಗಗಳು ಫ್ಯೂಡಲ್‌ಗಳಾಗಿ ತಮ್ಮ ದರ್ಪದಲ್ಲಿಯೇ ದಲಿತರನ್ನು ಶೋಷಿಸಿದರು. ಅನ್ಯರ ಆಕ್ರಮಣದಲ್ಲಿಯೇ ಕೆಲಕಾಲ ತಕ್ಕಮಟ್ಟಿನ ಬದಲಾವಣೆಗಳನ್ನು ಅನುಭವಿಸಿದರೂ

ಸ್ವಾತಂತ್ರ್ಯನಂತರ ದಲಿತರು ಶೋಷಿತರಾಗಿಯೇ ಉಳಿದರು. ಹೈದರಾಬಾದ್ ಕರ್ನಾಟಕದ ಮತ್ತು ಇನ್ನುಳಿದ ಪ್ರದೇಶದ ಮುಕ್ತಿ ಹೋರಾಟದ ಸಂದರ್ಭಕ್ಕೆ ನಾಡು-ನುಡಿಯ ಅಭಿಮಾನವೊಂದರಿಂದಲೇ ಪ್ರೇರಣೆ ದೊರಕಿತು ಎಂಬುದು ಆದರ್ಶದ ಮಾತಾಗುತ್ತದೆ. ಅನ್ಯಪ್ರಭುತ್ವಗಳ ನೆರಳಿನಲ್ಲಿ ವಿಮುಕ್ತಿ ಹೋರಾಟಕ್ಕೆ ಪ್ರೇರಿತವಾದ ಇಲ್ಲಿನ ಜನತೆಯ ಬದುಕು ಬೇರೆ ಬೇರೆ ಕಾರಣಗಳ ಹಿನ್ನೆಲೆಯನ್ನು ಸ್ವಾತಂತ್ರ್ಯ ಹೋರಾಟಕ್ಕೆ ಒದಗಿಸಿಕೊಡುತ್ತದೆ.

ರಾಷ್ಟ್ರೀಯತೆಯ ಪ್ರಜ್ಞೆ ಜಾಗೃತಿಗೂ ಶೈಕ್ಷಣಿಕವಾದ ಚಟುವಟಿಕೆಗಳಿಗೂ ಅವಿನಾಭಾವ ಸಂಬಂಧವಿದೆ. ಈ ಎರಡೂ ಪ್ರದೇಶಗಳಲ್ಲಿಯ ಕಥನ ಸಾಹಿತ್ಯದಲ್ಲಿಯೂ ಇದು ಕಂಡುಬರುತ್ತದೆ. ಆಡಳಿತದ ಹಿತಾಸಕ್ತಿಯ ಹಿನ್ನೆಲೆಯಲ್ಲಿಯೇ ಕನ್ನಡ ಕಲಿಕೆಗೆ ಮುಂಬೈ, ಮದ್ರಾಸ್, ಮೈಸೂರು ಭಾಗದಲ್ಲಿ ಅವಕಾಶ ಸಿಕ್ಕಿತು. ಹೈದರಾಬಾದ್ ಕರ್ನಾಟಕದಲ್ಲಿ ಸ್ವಾತಂತ್ರ್ಯಪೂರ್ವದಲ್ಲಿಯೇ ಉರ್ದು ಭಾಷೆಯ ಹೇರಿಕೆ ಕನ್ನಡ ಕಲಿಕೆಯನ್ನು ತಡೆದಿತ್ತು. ಸ್ವಾತಂತ್ರ್ಯನಂತರ ಈ ಪ್ರದೇಶದಲ್ಲಿ ಕನ್ನಡಿಗರಿಂದಲೇ ಕನ್ನಡ ಭಾಷೆಯ ಕಲಿಕೆಗೆ ವಿರೋಧ ಕಂಡು ಬಂದಿದ್ದನ್ನು ಅಮರೇಶ ನುಗಡೋಣಿಯವರು ಗುರುತಿಸುತ್ತಾರೆ. “ಈ ಪ್ರಾಂತದಲ್ಲಿ ಪ್ರಾಂತದ ಜನರಿಂದಲೇ ಸ್ಥಾಪನೆಯಾದ ‘ನೂತನ ವಿದ್ಯಾಲಯ’ (ಗುಲಬರ್ಗಾ), ‘ಹಮದರ್ದ ಶಾಲೆ’ (ರಾಯಚೂರು), ‘ವಿದ್ಯಾನಂದ ಗುರುಕುಲ’ (ಕುಕನೂರು) ಮುಂತಾದ ಶಾಲೆಗಳಲ್ಲಿ ಕನ್ನಡ ಮಾಧ್ಯಮ ಆರಂಭದಲ್ಲಿ ಇರಲಿಲ್ಲ. ವಿದ್ಯಾವಂತ ಮರಾಠಿ ಭಾಷೆಯ ಕನ್ನಡಿಗರು ಕನ್ನಡ ಮಾಧ್ಯಮವನ್ನು ವಿರೋಧಿಸಿದರು. ರಾಯಚೂರಿನಲ್ಲಿ ಆರಂಭವಾದ ಹಮದರ್ದ ಶಾಲೆಯಲ್ಲಿ ಕನ್ನಡ ಮಾಧ್ಯಮವನ್ನು ಕನ್ನಡಿಗರೇ ವಿರೋಧಿಸಿದರೆಂದು ಪಂಡಿತ ತಾರಾನಾಥರೇ ಹೇಳಿಕೊಂಡಿದ್ದಾರೆ (ಅಮರೇಶ ನುಗಡೋಣಿ; ೨೦೦೩; ಪುಟ : ೮೧). ಸ್ವಾತಂತ್ರ್ಯನಂತರವೂ ಈ ಪ್ರದೇಶದ ಕನ್ನಡ ಕಲಿಕೆಯು ಎದುರಿಸಬೇಕಾಗಿದ್ದ ಸಮಸ್ಯೆಗಳು ೨೦ನೇ ಶತಮಾನದ ಕೊನೆಯ ಹೊತ್ತಿಗೆ ತಿಳಿಗೊಳ್ಳತೊಡಗಿದವು. ಈ ಪ್ರದೇಶದ ಕನ್ನಡ ಕಲಿಕೆಯು ಬಿಕ್ಕಟ್ಟುಗಳಲ್ಲಿಯೇ ಮುಂದುವರೆದುಕೊಂಡು ಬಂದದ್ದು ಇಲ್ಲಿನ ಕನ್ನಡ ಸಾಹಿತ್ಯ ರಚನೆಯನ್ನು ಪ್ರಭಾವಿಸಿತು. ೧೯೨೦ರಲ್ಲಿ ನಿಜಾಮೇತರ ಪ್ರದೇಶಗಳಲ್ಲಿ ಕಥನ ಸಾಹಿತ್ಯ ಕಂಡು ಬಂದಿತ್ತು. ನಾಡು-ನುಡಿಯ ಅಭಿಮಾನದ ಆಶಯಗಳನ್ನು ಹೊತ್ತ ಕಾವ್ಯ, ಕಥನ ಸಾಹಿತ್ಯ ಈ ಪ್ರದೇಶದಲ್ಲಿ ಈಗಾಗಲೇ ಕಂಡು ಬಂದಿದ್ದವು. ಆದರೆ ನವೋದಯ ಸಾಹಿತ್ಯಿಕ ಸಂದರ್ಭದಲ್ಲಿ ಹೈದ್ರಾಬಾದು ಕರ್ನಾಟಕದ ಕನ್ನಡ ಸಾಹಿತ್ಯ ಮೂಕ ವೇದನೆಯನ್ನೇ ಅನುಭವಿಸಿತು. ಹೈದ್ರಾಬಾದ್ ಕರ್ನಾಟಕದ ಸಾಹಿತ್ಯ ಪ್ರಗತಿಶೀಲ ಸಾಹಿತ್ಯ ಸಂದರ್ಭದಲ್ಲಿ ಬೆಳಕು ಕಂಡಿತು.

ಈ ಸಂದರ್ಭದಲ್ಲಿ ಪ್ರಗತಿಶೀಲ ಸಾಹಿತ್ಯಿಕ ಧೋರಣೆಗಳ ಪ್ರಭಾವವನ್ನು, ತಮ್ಮದೇ ಆದ ಪ್ರಾದೇಶಿಕ ವೈಶಿಷ್ಟ್ಯವನ್ನು ಇಲ್ಲಿನ ಸಾಹಿತಿಗಳು ರೂಢಿಸಿಕೊಂಡಿದ್ದರು. ಸ್ವಾತಂತ್ರ್ಯಕ್ಕಾಗಿ ಎದುರಿಸಿದ ಬಿಕ್ಕಟ್ಟಿನ ಸಂದರ್ಭಗಳು, ದೇಶ, ಭಾಷೆ, ಪ್ರಾದೇಶಿಕ ಒಲವು, ರಾಷ್ಟ್ರೀಯತೆ, ದೇಶ ವಿಭಜನೆ, ಇತ್ಯಾದಿ ವಿಷಯಗಳಿಗೆ ಇಲ್ಲಿನ ಕಥನ ಸಾಹಿತ್ಯ ಸ್ಪಂದಿಸಿದೆ. ಶಾಂತರಸ, ಜಯತೀರ್ಥ ರಾಜಪುರೋಹಿತ, ಚಂದ್ರಕಾಂತ

ಕುಸನೂರು, ಮುಂತಾದ ಈ ಭಾಗದ ಕಥನಕಾರರ ಕಥನದಲ್ಲಿ ನಾಡು-ನುಡಿಯ ಬಗೆಗಿನ ಸಂವೇದನೆಗಳ ಅಭಿವ್ಯಕ್ತಿಯನ್ನು ಕಾಣಬಹುದಾಗಿದೆ. ಪ್ರಧಾನವಾಗಿ ಇಲ್ಲವೆ ಆಂಶಿಕವಾಗಿ ನಾಡು-ನುಡಿ ವಿಷಯವನ್ನು ಕುರಿತು ಬಂದ ಕಥನ ಸಾಹಿತ್ಯವನ್ನು ಪ್ರಧಾನ ಆಕರವಾಗಿ ಅಧ್ಯಯನಕ್ಕೆ ತೆಗೆದುಕೊಂಡಾಗ ಅನೇಕ ವಾಸ್ತವಿಕ ಅಂಶಗಳು ತಿಳಿದು ಬರುತ್ತವೆ. ನಾಡು-ನುಡಿಗೆ ಸಂಬಂಧಿಸಿದ ವಿಷಯವನ್ನು ಕೇವಲ ಆದರ್ಶದ ನೆಲೆಯಲ್ಲಿ ಇಲ್ಲಿ ಗ್ರಹಿಸಲಾಗಿಲ್ಲ. ಕಥನ ಸಾಹಿತ್ಯದಲ್ಲಿ ಕಂಡುಬರುವ ದೇಶ-ಭಾಷೆಗೆ ಸಂಬಂಧಿಸಿದ ಓದಿನ ವಿಚಾರಗಳು ಚಾರಿತ್ರಿಕವಾದ ಹೊಸ ಆಯಾಮವನ್ನು ರೂಪಿಸುವಂತಹುಗಳು. ಈ ನೆಲೆಯಲ್ಲಿ ಇಲ್ಲಿನ ಕಥನ ಸಾಹಿತ್ಯದಲ್ಲಿ ಕಂಡು ಬರುವ ನಾಡು-ನುಡಿಗೆ ಸಂಬಂಧಿಸಿದ ವಿಚಾರಗಳ ಅಧ್ಯಯನ ಪ್ರಾಮುಖ್ಯತೆ ಪಡೆಯುತ್ತದೆ.

ರಾಜಕೀಯ ಪರಿಸ್ಥಿತಿಯ ಬದಲಾವಣೆಗಳು ಜನಸಾಮಾನ್ಯರ ಬದುಕಿನ ಮೇಲೆ ಉಂಟುಮಾಡುವ ಪರಿಣಾಮವನ್ನು ಶಾಂತರಸರ 'ಉರಿದ ಬದುಕು' ಕತೆ ತಿಳಿಸುತ್ತದೆ. ದೌರ್ಜನ್ಯಯುತ ಆಡಳಿತದ ಪರಿಸ್ಥಿತಿಯನ್ನು ವೈಯಕ್ತಿಕ ನೆಲೆಯಲ್ಲಿಯೇ ವಿರೋಧಿಸ ಬಯಸುವ ತಿಪ್ಪಣ್ಣ(ಉರಿದ ಬದುಕು)ನ ಬದುಕು ಸ್ವಾತಂತ್ರ್ಯ ಅಪೇಕ್ಷೆಯ ವಿಸ್ತೃತ ಆಯಾಮವನ್ನೇ ಪಡೆಯುತ್ತದೆ. ಕಾಶೀಮಲಿಯೊಂದಿಗಿನ ಸೌಹಾರ್ದಯುತ ಬದುಕಿನ ನೆನಪುಗಳಲ್ಲಿಯೇ ನಿಜಾಮ ಆಡಳಿತವನ್ನು ಈತ ಒಪ್ಪುತ್ತಾನೆ. ರಾಜಕೀಯ ಬದಲಾವಣೆಯ ಗಾಳಿ ತಾಕುವ ಮುನ್ನವೇ ವೈಯಕ್ತಿಕವಾಗಿ ನಿಜಾಮನ ವರ್ತನೆಯಲ್ಲಿಯೇ ಆದ ಬದಲಾವಣೆಯ ವಿರೋಧಿಯಾಗುತ್ತಾನೆ. ತಂದೆಯ ಸಾವಿಗೆ ಕಾರಣನಾದ ಕಾಶೀಮಲಿಯನ್ನು ಕೊಂದು, ಕುಟುಂಬಕ್ಕಾದ ಅನ್ಯಾಯಕ್ಕೆ ಸೇಡು ತೀರಿಸಿಕೊಳ್ಳಲು ಪ್ರಯತ್ನಿಸುತ್ತಾನೆ. ವೈಯಕ್ತಿಕವಾಗಿಯೇ ಹೋರಾಟಕ್ಕಿಳಿದ ತಿಪ್ಪಣ್ಣ ಸ್ವಾತಂತ್ರ್ಯ ಹೋರಾಟಕ್ಕಾಗಿಯೇ ಬದುಕಿನ ಆಸೆ-ಆಕಾಂಕ್ಷೆಗಳನ್ನು ಬದಿಗೊತ್ತಿದ ಶಂಕರಣ್ಣನನ್ನು ಸೇರುತ್ತಾನೆ. ಶಂಕರಣ್ಣ ಹಾಗೂ ಮುಸ್ಲಿಂಕೋಮಿನವರೆ ಆದರೂ ನ್ಯಾಯ ನಿಷ್ಠುರಿಗಳಾದ ನಬೆಮ್ಮ ಮತ್ತು ಆಕೆಯ ಮಗ, ವಿಭಿನ್ನ ರೀತಿಯಲ್ಲಿ ಸ್ವಾತಂತ್ರ್ಯದ ಹಂಬಲಕ್ಕೆ ಪ್ರೇರೇಪಿತರಾದವರು.

"...ನಿಮ್ಮಂಗ ಪ್ರಾಣದ ಹಂಗು ತೊರ್ದು ದೇಶಕ್ಕಾಗಿ ನಾನಾಗ್ಲೀ, ನಮ್ ಮಕ್ಕಾಗ್ಲೀ ಏನೂ ಮಾಡ್ಲಿಲ್ಲ. ಈಗ ಇಷ್ಟಾದ್ರೂ ನಮ್ಮಿಂದ ಆಗ್ತದಲ್ಲ. ಈ ಸುಡುಗಾಡ್ ರಾಜ್ಯದಾಗ ಇರದಕ್ಕಿಂತ ಸಾಯದು ಬೇಸಲ್ಲೇನು? ಆದ್ರ ಈ ಹೋರಾಟದಾಗ ನಿಜಾಮ ಮಾತ್ರ ಹೇಳ ಹೆಸರಿಲ್ಲದಂಗಾಗದು ಖರೆ. ಗೆಲವು ನಮ್ಗೇ. ಬದುಕಿದ್ರೆ ಸ್ವತಂತ್ರ ನೋಡೋಣ, ಹ್ಯಂಗಿರ್ತದ; ಸತ್ರ ದೇಶಕ್ಕಾಗಿ ಸತ್ತ ಅಂತಾರ. ಅಂತಾ ಸಾವು ಯಾರಿಗುಂಟು ಯಾರಿಗಿಲ್ಲ. ಅದು ಪುಣ್ಯದ ಕೆಲಸ. ನಮ್ಮ ಮುಂದಿನವ್‌ರಾದ್ರು ಸ್ವತಂತ್ರ ನೋಡ್ತಾರಲ್ಲ" (ಶಾಂತರಸ; ೧೯೯೭; ಪುಟ : ೪) ಎನ್ನುವ ಹೋರಾಟಗಾರರಿಗೆ ಸಹಾಯಕನಾಗಿದ್ದ ದುರ್ಗಪ್ಪನ ದೇಶ ಪ್ರೇಮ ಗಣನೆಗೆ ಬರುವಂತಹದ್ದು. ತಿಪ್ಪಣ್ಣನಿಗೆ ಸಹಕರಿಸಿದ ಕಾರಣಕ್ಕೆ ಆತನೊಂದಿಗೆ ಉರಿದುಹೋಗುವ ನಬೆಮ್ಮನ ಪಾತ್ರ ಮತೀಯ ಭೇದವನ್ನು ಮೀರಿದ ಸ್ವಾತಂತ್ರ್ಯ ಅಪೇಕ್ಷೆಯನ್ನು, ಮತೀಯ ಒಲವನ್ನೂ ಮೀರಿ ನಿಂತ ನಿಜಾಮನ ಕ್ರೌರ್ಯದ ಆತ್ಯಂತಿಕ ಸ್ಥಿತಿಯನ್ನು ಪ್ರತಿನಿಧಿಸುತ್ತದೆ.

ಸ್ವಾತಂತ್ರ್ಯಕ್ಕಾಗಿ ದೇಶದ ಪ್ರತಿಯೊಬ್ಬರು ಸಮಾನ ಮನಸ್ಕರಾಗಿ ಹೋರಾಡಿದರು ಅಥವಾ ದೇಶಕ್ಕಾಗಿ ಹೋರಾಡಿದವರೆಲ್ಲರಲ್ಲಿಯೂ ನಿಜವಾಗಿ ದೇಶಾಭಿಮಾನ ದೇಶಕ್ಕಾಗಿ ಪ್ರಾಣತ್ಯಾಗದಂತಹ ಉತ್ಕಟ ಅಭಿಮಾನಗಳಿದ್ದವು ಎಂದು ಸಾರ್ವತ್ರಿಕರಿಸಿ ಹೇಳಲಾಗದು. ಸ್ವಾತಂತ್ರ ಹೋರಾಟಗಾರರೆನ್ನುವ ಮೊಕವಾಡ ಪೊತ್ತವರ ಸ್ವಾರ್ಥದಲ್ಲಿ ನಿಜವಾದ ಹೋರಾಟಗಾರರ ಬದುಕಿಗೆ ಉಂಟಾದ ಅನ್ಯಾಯವನನ್ನು 'ನಾಯಿ ಮತ್ತು ಪಿಂಚಣಿ' (ಶಾಂತರಸ), 'ಸ್ವಾತಂತ್ರ್ಯವೀರ' (ಶಾಂತರಸ) ಕತೆಗಳು ತಿಳಿಸುತ್ತವೆ. ನಾಯಿ ಮತ್ತು ಪಿಂಚಣಿ ಕತೆಯ ಸಂಗಪ್ಪನ ಬದುಕು ಎದುರಿಸಿದ ಕಷ್ಟಕಾರ್ಪಣ್ಯಗಳು, ಪ್ರಾಣತ್ಯಾಗ ಎಲ್ಲವೂ ರಂಗಣ್ಣನ ದೇಶದ್ರೋಹಿ ಕೃತ್ಯಕ್ಕೆ ಬಳಕೆಯಾಗುತ್ತವೆ. ಸ್ವಾತಂತ್ರ್ಯಕ್ಕಾಗಿ ನಿಷ್ಠೆಯಿಂದ ಹೋರಾಡಿದ ಸಂಗಪ್ಪ ಅದರಲ್ಲಿಯೇ ಕೊನೆಯುಸಿರೆಳೆಯುತ್ತಾನೆ. ಸಂಗಪ್ಪನ ಸ್ವಾತಂತ್ರ್ಯ ಹೋರಾಟದಂತೆಯೇ ಆತನ ಹೆಂಡತಿ ಈರವ್ವನ ಜೀವನವೂ ಸಾಹಸಮಯ ಗಂಡನ ಸಾವು, ಮೈದುನನ ಸಾವು, ಒಂಟಿ ಬದುಕಿಗೆ ಎದುರಾದ ರಜಾಕಾರ ಮೌಲಾನಾಯ್ಕ ಮತ್ತು ದೇಶದ್ರೋಹಿ ರಂಗಪ್ಪನ ಕಿರುಕುಳ ಎಲ್ಲವನ್ನೂ ದಿಟ್ಟತನದಿಂದ ಎದುರಿಸುತ್ತಾಳೆ. ಸಂಗಪ್ಪನ ಬದುಕಿಗೆ ಬರಬೇಕಾದ ಎಲ್ಲಾ ಸನ್ಮಾನ, ಸ್ಥಾನಮಾನಗಳನ್ನು ರಂಗಣ್ಣ ಕಬಳಿಸುತ್ತಾನೆ. ಆತನ ಹೆಂಡತಿಗೆ ಸರಕಾರದಿಂದ ಪಿಂಚಣಿ ಕೊಡಿಸುವ ನೆಪದಲ್ಲಿ ಆಕೆಯನ್ನು ಬಳಸಿಕೊಳ್ಳ ಬಯಸುವ ರಂಗಣ್ಣನ ಉಪಾಯ ಫಲಕಾರಿಯಾಗುವುದಿಲ್ಲ. ಸ್ವಾಭಿಮಾನದ ಈರವ್ವ ಕೈಲಾದಷ್ಟೂ ಸಮಾಜಸೇವೆಯನ್ನು ಮಾಡುತ್ತ ಮನುಷ್ಯರ ನಂಬಿಕೆಯನ್ನು ಮೀರಿಸುವ ನಾಯಿ ಮಲ್ಲಣ್ಣನೊಂದಿಗೆ ಬದುಕನ್ನು ನಿರ್ವಹಿಸುತ್ತಾಳೆ. ಪ್ರಾಣಿಗಳಿಗಿಂತ ಕೆಳಮಟ್ಟಕ್ಕಿಳಿದಿದ್ದ ರಂಗಣ್ಣ ಈರವ್ವನಿಗೆ ತಿಳಿಯದಂತೆ ಸರಕಾರದಿಂದ ಆಕೆಗೆ ಬರಬೇಕಾಗಿದ್ದ ಪಿಂಚಣಿಯನ್ನು ಕಬಳಿಸುತ್ತಾನೆ.

ಇದೇ ರೀತಿ ಹೋರಾಟಗಾರನ ಬದುಕು ದುರಂತಕ್ಕೀಡಾದುದನ್ನು 'ಸ್ವಾತಂತ್ರ್ಯವೀರ ಕತೆ' ತಿಳಿಸುತ್ತದೆ. ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಅಲ್ಲದೆ ಸ್ವಾತಂತ್ರ್ಯ ನಂತರವೂ ಹೋರಾಟಗಾರರ ಬದುಕನ್ನು ತಮ್ಮ ಸ್ವಾರ್ಥಕ್ಕಾಗಿ ಬಳಸಿಕೊಂಡವರಲ್ಲಿ ಸ್ಥಳೀಯರು ಸೇರಿದ್ದಾರೆ. ರಜಾಕಾರ ಅಲ್ಲೀಸಾಬನು ತೋರುವ ಆಮಿಷಗಳಿಗೆ ಒಳಗಾದ ಸಿದ್ಧಣ್ಣ ಸ್ವಾತಂತ್ರ್ಯ ಹೋರಾಟಗಾರ ಪರಪ್ಪನೊಂದಿಗೆ ೧೯೪೭ ಆಗಸ್ಟ್ ೧೫ರಂದು ಊರಿನ ಅಗಸೆಯ ಮೇಲೆ ತ್ರಿವರ್ಣ ಧ್ವಜವನ್ನು ಹಾರಿಸುವ ಕಾರ್ಯದಿಂದ ತಪ್ಪಿಸಿಕೊಳ್ಳುತ್ತಾನೆ. ಪರಪ್ಪನನ್ನು ರಜಾಕಾರರು ಹಿಡಿದುಕೊಳ್ಳುವ ಸಂದರ್ಭದಲ್ಲಿ ಆತನೊಂದಿಗೆ ಸಿದ್ಧಣ್ಣ ಪರಿಸ್ಥಿತಿಯನ್ನು ಬಹಳ ಉಪಾಯ ದಿಂದ ಗೆಲ್ಲುತ್ತಾನೆ. ಪರಪ್ಪ ಜೈಲು ಸೇರಿದ ಸಂದರ್ಭದಲ್ಲಿ ರಜಾಕಾರರೊಂದಿಗೆ ಒಂದಾಗಿ ಲೂಟಿ, ಮಾನಭಂಗದಂತಹ ದುಷ್ಕೃತ್ಯಗಳಲ್ಲಿ ತೊಡಗುತ್ತಾನೆ. ಕೊನೆಗೆ ಪರಪ್ಪನ ಹೆಂಡತಿ ಚೆನ್ನಿಯನ್ನು ಹಾಳು ಮಾಡುತ್ತಾನೆ. ಹೈದರಾಬಾದ್ ಪ್ರದೇಶಕ್ಕೆ ಸ್ವಾತಂತ್ರ್ಯ ಸಿಕ್ಕ ನಂತರ ಮನೆಗೆ ಬಂದ ಪರಪ್ಪ ಊರಲ್ಲಿ ಸ್ವಾತಂತ್ರ್ಯವೀರ ಎಂಬ ಪಟ್ಟದಲ್ಲಿ ಮೆರೆಯುತ್ತಿದ್ದ ಸಿದ್ಧಣ್ಣನನ್ನು ನೋಡಿ ಆಶ್ಚರ್ಯವಾಗುತ್ತಾನೆ. ಸಮಾಜ ದಲ್ಲಿ ಸ್ವಾತಂತ್ರ್ಯವೀರ ಎನ್ನುವ ಸನ್ಮಾನಗಳಿಲ್ಲದೆ ಜೈಲುವಾಸದಿಂದ ಹೊರಬಂದ ಪರಪ್ಪ ತನ್ನ ಹೆಂಡತಿಗಾದ ಅನ್ಯಾಯವನ್ನು ಕಂಡು ತತ್ತರಿಸುತ್ತಾನೆ. ಸ್ವಾತಂತ್ರ್ಯಕ್ಕಾಗಿ ಹೋರಾಡಿದವರ ಬದುಕಿಗೆ ಉಂಟಾದ ಅನ್ಯಾಯ, ಸ್ವಾರ್ಥಿಗಳಿಗೆ ದೇಶದ್ರೋಹಿಗಳಿಗೆ ಸಿಕ್ಕ ಸನ್ಮಾನ ಸಮಾಜದ ದುರಂತಗಳೇ ಆಗಿವೆ.

ಇಂತಹ ಕೋಮಿನವರೇ ಕ್ರೌರ್ಯಕ್ಕಿಳಿದರು ಎಂದು ಹೇಳಲಾಗದಂತೆ ಸ್ವಾರ್ಥಿಗಳೆನಿಸಿದವರೆಲ್ಲರೂ ಪಾಪಕೃತ್ಯಗಳನ್ನೆಸಗಿದ ಸಂದರ್ಭ ಈ ಪ್ರದೇಶದ ಮುಕ್ತಿ ಹೋರಾಟದಲ್ಲಿ ಕಂಡುಬರುತ್ತದೆ. ಕೇವಲ ಸಾಮಾನ್ಯರೆನಿಸಿದ ದುಡಿಯುವ ವರ್ಗದವರಾಗಿದ್ದ ಮುಸ್ಲಿಂ ಜನಾಂಗವೂ ಸೌಹಾರ್ದಯುತವಾಗಿ ಇತರ ಕೋಮಿನವರೊಂದಿಗೆ ಬದುಕುತ್ತಿದ್ದ ಕಾಲ ಇದೇ ನಿಜಾಮ ಆಳ್ವಿಕೆಯಲ್ಲಿಯೇ ಇತ್ತು. ರಾಜ ಧರ್ಮದ ಬಿಸಿ ತಲೆಯೇರಿ ಅಪರ ದರ್ಪ, ದೌರ್ಜನ್ಯಗಳನ್ನು ಆಹ್ವಾಯಿಸಿಕೊಂಡು ಅದರ ಲಾಭ ಪಡೆಯ ಬಯಸಿದ ಮುಸ್ಲಿಂ ಜನಾಂಗದ ಕೆಲ ಮತಿಹೀನರು, ಅವರಿಂದ ಉಂಟಾದ ಸಾಮಾಜಿಕ ಅನ್ಯಾಯಗಳು ಸ್ವಾತಂತ್ರ್ಯ ನಂತರ ಅದಕ್ಕಾಗಿ ಅನುಭವಿಸಬೇಕಾಗಿ ಬಂದ ಶಿಕ್ಷೆ ಇವೆಲ್ಲವೂಗಳನ್ನು 'ಬಡೆಸಾಬು ಪುರಾಣ' (ಶಾಂತರಸ) ಕತೆಯಲ್ಲಿ ತಿಳಿಯಬಹುದಾಗಿದೆ. ರಜಾಕಾರರ ಹಾವಳಿಯ ಅತ್ಯಂತಿಕ ಸ್ಥಿತಿ ಹಾಗೂ ಸ್ವಾತಂತ್ರ್ಯಸಿಕ್ಕ ಸಂದರ್ಭದಲ್ಲಿ ಉಂಟಾದ ಸಾಮಾಜಿಕ ಬದಲಾವಣೆಗಳೆರಡೂ ಕತೆಯಲ್ಲಿ ಕಂಡು ಬರುತ್ತವೆ. ಪ್ರಭುತ್ವದ ಕೋಮಿನವರು ಎನ್ನುವ ಅಹಂಕಾರ ಹಾಗೂ ತನ್ನ ಶ್ರೀಮಂತಿಕೆ ವ್ಯಾಪಾರಿ ಬುದ್ಧಿಯ ಚಾಣಾಕ್ಷತೆಯಿಂದ ಇಡೀ ಹಳ್ಳಿಯ ಜನಜೀವನವನ್ನು ಬಡೇಸಾಬು ನಿಯಂತ್ರಿಸುತ್ತಾನೆ. ಬುಡ್ಡಮ್ಮನನ್ನು ಪಡೆಯುವಲ್ಲಿ ಊರಿನ ಉಳ್ಳವರನ್ನೆಲ್ಲ ಹಿಂದೆ ಹಾಕಿದ ಬಡೆಸಾಬು ಆ ಊರಿಗೆ ಆಗಾಗ ಹತ್ತಿ ವ್ಯಾಪಾರಕ್ಕೆ ಬರುತ್ತಿದ್ದ ವ್ಯಾಪಾರಿ. ಬುಡ್ಡಮ್ಮನಿಗಾಗಿ ಊರಲ್ಲಿ ನೆಲೆನಿಂತ ವ್ಯಾಪಾರಿ ಇಡೀ ಊರಲ್ಲಿ ಮತೀಯ ಅಂತರವನ್ನೂ ಆಳುವ ವರ್ಗದ ದರ್ಪವನ್ನು ತೋರುತ್ತಾನೆ. ಊರಿನ ಪ್ರತಿಯೊಬ್ಬರ ಅಸಾಹಯಕತೆಯನ್ನು ಅರಿತು ಅವರನ್ನು ತನ್ನ ಹಿಡಿತಕ್ಕೆ ತಂದುಕೊಳ್ಳುತ್ತಾನೆ. ಆರಂಭದಲ್ಲಿ ಊರವರಿಂದ ದೊರೆತ ಸಹಾಯವನ್ನು ಬಳಸಿಕೊಂಡು ಬೆಳೆದ ಬಡೇಸಾಬು ಇಡೀ ಹಳ್ಳಿಯ ಚಲನವಲನವನ್ನು ನಿಯಂತ್ರಿಸುತ್ತಾನೆ. ಈ ಮಧ್ಯೆ ದಸ್ತಗೀರಿ, ಅಬ್ದುಲ್ಲಾ, ಸಲೀಮ, ಖಾಜಾಸಾಬ್, ಕರ್‍ಯ, ಉಪ್ಪಾರ ಜಂಗಲೆಪ್ಪ, ಕಬ್ಬೇರ ನಾರಾಯಣ ಎಲ್ಲರನ್ನು ಬಡೇಸಾಬು ರಜಾಕಾರರನ್ನಾಗಿ ಮಾಡಿ ಅವರೆಲ್ಲರಿಗೆ ಆತ ಸಿಪೆಸಾಲಾರ್ (ಸೇನಾಪತಿ) ಆದ. ಅತ್ಯಾಚಾರ, ದರೋಡೆ, ಹಿಂಸೆ, ಎಲ್ಲದರಿಂದ ಹಳ್ಳಿಯ ಜನತೆಯ ಉಸಿರುಗಟ್ಟಿತು. ಕೊನೆಗೆ ಹೈದರಾಬಾದ್ ಸಂಸ್ಥಾನದ ಸ್ವಾತಂತ್ರ್ಯದ ಸುದ್ದಿ ಇಡೀ ಹಳ್ಳಿಯ ಜನರಿಗೆ ಜೀವದಾನ ಮಾಡಿತು. ಈ ಹಿಂದೆ ತಮ್ಮನ್ನು ಹಿಂಸಿಸಿ, ತಮ್ಮ ಮನೆಯ ಹೆಣ್ಣುಮಕ್ಕಳ ಮೇಲೆ ಅತ್ಯಾಚಾರವೆಸಗಿದ್ದ ಬಡೇಸಾಬುನನ್ನು ಹಳ್ಳಿಯ ಜನ ಹಿಂಸಿಸುತ್ತಾರೆ. ಯಾವ ಧರ್ಮದ ಹೆಸರಿನಲ್ಲಿ ಅವನು ದುರ್ನಡತೆಗಿಳಿದಿದ್ದನೊ ಆ ಜಾತಿಯ ಅಹಂಕಾರವನ್ನು ಇಳಿಸುತ್ತಾರೆ. ಮತೀಯ ಅಹಂಕಾರದಿಂದ ಮೆರೆಯುತ್ತಿದ್ದ ಅವನಿಂದಲೇ ಮಸೀದಿಯನ್ನು ಕೆಡವಿಸಲು ಮುಂದಾಗುತ್ತಾರೆ. ಮನುಷ್ಯ ಸಂಬಂಧಗಳ ನಡುವೆ ಜಾತೀಯತೆ ಅಡ್ಡಗೋಡೆಯಾಗಿದೆ ಎಂದು ಮಸೀದಿಯನ್ನು ಕೆಡವಲು ಜನ ಮುಂದಾಗುತ್ತಾರೆ. ಮನುಷ್ಯನ ದುಷ್ಪ್ರವರ್ತನೆಗೆ ಜಾತಿ ಕಾರಣವಲ್ಲ. ಮನುಷ್ಯನ ದುರ್ಗುಣಗಳಿಗೆ ಯಾವ ಪೆಟ್ಟು ಬೀಳದಿರುವುದು ದುರಂತ.

ಈ ಸಂದರ್ಭದಲ್ಲಿ ಕಂಡುಬಂದ ಮತ್ತೊಂದು ಸಮಸ್ಯೆಯೆಂದರೆ ಮತಾಂತರದ್ದು. ಬಡೇಸಾಬು ಪುರಾಣದ ದಲಿತರ 'ಕರ್‍ಯ' ಮುಂತಾದವರು ರಜಾಕಾರರಾಗುವ ಮೂಲಕ ಒಂದು ರೀತಿಯ ಮತಾಂತರವನ್ನು

ಒಪ್ಪಿಕೊಂಡವರು. ಇವರ ಬಯಕೆ ಕೇವಲ ಗೌಡ ನಂತವರ ಶೋಷಣೆಯನ್ನು ವಿರೋಧಿಸುವುದು, ಒಂದಕ್ಕೆರಡಾದ ಸಾಲದಿಂದ ವಿಮುಕ್ತಿ, ಉಳುಮೆ ಮೇಲಿನ ಸಂಪೂರ್ಣ ಅಧಿಕಾರ ಮುಂತಾದವುಗಳು. ಇಂತಹ ಅಕಾಂಕ್ಷೆಗಳನ್ನು ಹೊತ್ತು ಮತಾಂತರ ಹೊಂದಿದ ಹೊಲೆಯರೆಲ್ಲರನ್ನು 'ಭಾಗವಾನ'ರೆಂದು ಪ್ರತ್ಯೇಕವಾಗಿ ಗುರುತಿಸುವುದು. 'ಹಾಲುಜೇನು' (ಜಯತೀರ್ಥ ರಾಜಪುರೋಹಿತ) ಕಾದಂಬರಿಯಲ್ಲಿ ಕಂಡು ಬರುತ್ತದೆ. ನವಮುಸ್ಲಿಂರು ಪಡೆಯಲಿಚ್ಛಿಸುವ ಸ್ವಾತಂತ್ರ್ಯ ಉನ್ನತ ವರ್ಗದವರ ಕೋಪಕ್ಕೆ ಕಾರಣವಾಗುತ್ತದೆ. ಗೌಡರಿಂದ ಆತನ ಹೊಲ ಕೊಡಿಸುವ ಪೇಷಿಮಾಮರ ಮಾತಿಗೆ ತಲೆಬಾಗಿ ಬಳಗ ಸಮೇತ ನಿಮ್ನ ವರ್ಗದ ಕನಕ ಮತಾಂತರವಾಗುತ್ತಾನೆ. ಅಸ್ಪೃಶ್ಯತೆಯನ್ನು ಮೀರುವ, ತಮಗೆ ನ್ಯಾಯವಾಗಿ ದಕ್ಕಬೇಕಾಗಿದ್ದ ಆಸ್ತಿಯನ್ನು ಹೊಂದುವ ಬಲವಾದ ಆಸೆಗಳು ಇಂತಹ ಕೆಳವರ್ಗವನ್ನು ಮತಾಂತರಕ್ಕೆ ಪ್ರೇರೇಪಿಸುತ್ತವೆ. ಹೀಗೆ ಪ್ರೇರೇಪಿತರಾದವರು ಸಂಪೂರ್ಣ ಮುಸ್ಲಿಂರಾಗದೆ, ಉನ್ನತ ವರ್ಗದವರಿಂದ ಅಸ್ಪೃಶ್ಯತೆಯ ವಿಮೋಚನೆಗೆ ಸಂಪೂರ್ಣ ಮಾನ್ಯತೆ ಸಿಗದೆ ಉಳಿಯುವುದು ಈ ಕಾದಂಬರಿಯಲ್ಲಿ ಕಂಡುಬರುತ್ತದೆ. ಸ್ವತಃ ಮುಸ್ಲಿಂರೆನಿಸಿದ ಶೇಕಣ್ಣ ತನ್ನ ಜಾತಿಯ ದರ್ಪವನ್ನು ಮುಂದಿಟ್ಟುಕೊಂಡು ಸಾಮಾಜಿಕ ನಿಷ್ಠುರವನ್ನು ಕಟ್ಟಿಕೊಳ್ಳುವುದಿಲ್ಲ. ಸಾಮಾಜಿಕ ನಿಷ್ಠುರವನ್ನು ಕಟ್ಟಿಕೊಳ್ಳಲೆಂದು ಹಾಗೂ ಮುಂದೊಂದಿನ ತಮ್ಮ ಸಹಾಯಕ್ಕೆ ಸಿಗುವರೆನ್ನುವ ಕಾರಣಕ್ಕೆ ಕೆಳವರ್ಗದವರಿಗೆ ಮತಾಂತರದ ರುಚಿಯನ್ನು ಹಚ್ಚಿಸುವ ಪೇಷಿಮಾಮನಂತವರು ಮುಸ್ಲಿಂ ಜನಾಂಗದ ಜನಸಾಮಾನ್ಯರಿಗೆ ಉಪಯುಕ್ತವಾದವರಲ್ಲ. ಯಾವುದೇ ರೀತಿಯ ಸಹಾಯವನ್ನು ತೋರಿದಂತವರಲ್ಲ.

ಉನ್ನತ ವರ್ಗದವರೆನಿಸಿದವರಲ್ಲಿ ಈ ರೀತಿಯ ಮತಾಂತರ ಹೊಂದಿದ ನಿದರ್ಶನಗಳು ಸಿಗುವುದು ವಿರಳ. ಆದರೆ ಪರಿಸ್ಥಿತಿಯ ಒತ್ತಡಕ್ಕೆ ಸಿಕ್ಕು ಮತಾಂತರ ಹೊಂದಿದ ಸುಮತಿಯ ಬದುಕನ್ನು 'ಸಾಯಿದಾ ಸುಮತಿಯಾದಳು' (ಜಯತೀರ್ಥ ರಾಜಪುರೋಹಿತ) ಕತೆ ತಿಳಿಸುತ್ತದೆ. ಈ ಕತೆಯಲ್ಲಿ ನಡೆಯುವ ಮತಾಂತರ ಭೌತಿಕವಾದ ಯಾವ ಆಸ್ತಿ ಅಂತಸ್ತುಗಳಿಗಾಗಿ ನಡೆಯುವಂತಹದ್ದಲ್ಲ. ಚಿಕ್ಕವಯಸ್ಸಿನಲ್ಲಿಯೇ ವಿಧವೆಯಾಗಿದ್ದ ಸುಮತಿ ಅಲಿಯ ಕಾಮಕ್ಕೆ ಬಲಿಯಾಗುತ್ತಾಳೆ. ತನ್ನ ಮಗಳು, ಅಳಿಯರ ದುರ್ಮರಣಕ್ಕೆ ಕಾರಣಳಾಗಿ ಉಳಿದ ಮಕ್ಕಳನ್ನು ತೊರೆದು ಅಲಿಯ ಹಿಂದೆ ಹೋಗಬೇಕಾದ ಅನಿವಾರ್ಯತೆಗೆ ಸಿಲುಕುತ್ತಾಳೆ. ಸುಮತಿಯನ್ನು ನಿಖಾ ಮಾಡಿಕೊಳ್ಳುವ ಅಲಿ ಮುಸ್ಲಿಂ ಧರ್ಮದ ಮುಖಂಡನಾಗುತ್ತಾನೆ. ರಜಾಕಾರರ ಹಾವಳಿ, ಪೊಲೀಸ್ ಕಾರ್ಯಾಚರಣೆ ತೀವ್ರವಾಗಿ ಹರಡಿದ್ದ ಸಂದರ್ಭದಲ್ಲಿ ಅಲಿ ಸಾಯಿದಾ ಆಗಿ ಮತಾಂತರಗೊಂಡಿದ್ದ ಸುಮತಿಯನ್ನು ಅನುಮಾನಿಸುತ್ತಾನೆ. ಮಿಲಿಟರಿ ಕಾರ್ಯಾಚರಣೆಯ ನಂತರ ಸಾಯಿದಾಳು ಹಿಂದೂ ಗೃಹಿಣಿ ಎಂಬ ವರದಿ ತಿಳಿದು ಸ್ಥಳಿಕ ಆರ್ಯ ಸಮಾಜದವರು ಅವಳನ್ನು ಆರ್ಯ ಸಮಾಜ ಮಂದಿರಕ್ಕೆ ಕರೆದೊಯ್ಯುತ್ತಾರೆ. ಅಲಿಯ ಬಗ್ಗೆ ಪ್ರೀತಿ ಇಟ್ಟು ಆತನಿಗೆ ನಿಷ್ಠಳಾಗಿದ್ದ ಸಾಯಿದಾ ಮತ್ತು ಹಿಂದೂ ಧರ್ಮಕ್ಕೆ ಮರಳಲು ನಿರಾಕರಿಸುತ್ತಾಳೆ. ಅಲಿಯನ್ನು ಆತನ ಧರ್ಮವನ್ನು ದೂರದೆ ಆತನಿಗಾಗಿ ಕಾಯುತ್ತಾಳೆ. ಇವಳನ್ನು ತೊರೆದು ಅಲಿ ಪಾಕಿಸ್ತಾನ ಸೇರುತ್ತಾನೆ. ಆತನೊಂದಿಗೆ ಆತನ

ಹೆಂಡತಿ ಮಕ್ಕಳು ಪಾಕಿಸ್ತಾನ ಸೇರುತ್ತಾರೆ. ಸಾಯಿದಾ ಬೀದಿಪಾಲಾಗುತ್ತಾಳೆ. ಕಾಯಿಲೆಯಿಂದ ಬಳಲಿ ಧರ್ಮಶಾಲೆಯಲ್ಲಿ ಆಶ್ರಯಪಡೆಯುವ ಸಾಯಿದಾ ಅಲಿಯ ಸಂಪರ್ಕವನ್ನು ನಿರಾಕರಿಸುವುದಿಲ್ಲ. ಕೊನೆಗೊಮ್ಮೆ ಆತನು ಭೇಟಿಯಾಗಲು ಬಂದ ಸಂದರ್ಭದಲ್ಲಿ ಆತನು ದೇಶದ್ರೋಹಿ, ಭಾರತದ ನಾಶಕ್ಕೆ ಕಾದಿರುವ ವಿಧ್ವಂಸಕನೆಂಬುದನ್ನು ಮನಗಂಡ ಸಾಯಿದಾ ಆತನ ಸುಳಿವನ್ನು ಪೊಲೀಸರಿಗೆ ನೀಡಿ ತಾನು ಮಾರಕ ಅಫೀಮನ್ನೇ ಸೇವಿಸಿ ಸಾಯುತ್ತಾಳೆ. ಸಾಯುವ ಹಂತದಲ್ಲಿ ಪರಿವರ್ತಿತವಾದ ಅವಳ ಮನಸ್ಸು ಅವಳಲ್ಲುಂಟಾದ ಜಾಗೃತಿ ಮತ್ತೊಮ್ಮೆ ಆಕೆಯನ್ನು ಸುಮತಿಯನ್ನಾಗಿಸುತ್ತದೆ. ಅಲಿಯನ್ನು ಪ್ರೀತಿಸುವ ಸಾಯಿದಾ, ಆತನ ದೇಶದ್ರೋಹವನ್ನು ವಿರೋಧಿಸುವಾಗ ಸುಮತಿಯಾಗುವುದನ್ನು ಕತೆ ಸಂಕೇತಿಸುತ್ತದೆ.

ಮುಸ್ಲಿಂ ರಾಜ್ಯಕ್ಕಾಗಿ ಹಂಬಲಿಸುವ ಅದಕ್ಕಾಗಿ ಹೋರಾಟಕ್ಕಿಳಿದವರು ಅನೇಕ ಮುಸ್ಲಿಂರು ಅಂತವರಲ್ಲಿ ಅಲಿಯಂತವರು ಮಾತ್ರವೇ ಪಾಕಿಸ್ತಾನದ ಆಶ್ರಯ ಪಡೆಯುತ್ತಾರೆ. ಬಡೇಸಾಬು, ಮುಸ್ಲೀಂರಾಗಿ ಮತಾಂತರ ಹೊಂದಿದ ಭಾಗವನರಾಗಲಿ, ಪಾಕಿಸ್ತಾನ ಸೇರಲಿಲ್ಲವೇಕೆ? ಎಂಬ ಪ್ರಶ್ನೆ ಸಹಜವಾಗಿಯೇ ಕಾಡುತ್ತದೆ. ಇಂತವರ ಹೋರಾಟಕ್ಕೆ ಸಿಗುವ ಬೆಲೆಯಾದರು ಏನು? ಇದಲ್ಲದೆ ಕುತೂಹಲಕಾರಿಯಾದ ಇನ್ನೊಂದು ಅಂಶ ಈ ಮತಾಂತರವನ್ನು ವಿರೋಧಿಸುವ ಆರ್ಯ ಸಮಾಜದಲ್ಲಿ ಕಂಡುಬರುತ್ತವೆ. ಹಿಂದೂ ಗೃಹಿಣಿಯೆಂದು ತಿಳಿದ ಸುಮತಿಗೆ ಆರ್ಯ ಸಮಾಜದ ರಕ್ಷಣೆ ಹಾಗೂ ಹಿಂದೂ ಧರ್ಮಕ್ಕೆ ಮರಳುವ ಪ್ರೇರೇಪಣೆಗಳು ದೊರೆಯುತ್ತವೆ. ಆದರೆ ಈ ಸಂದರ್ಭದಲ್ಲಿ ಮತಾಂತರ ಹೊಂದಿದ ಯಾವ ಕೆಳವರ್ಗದವರನ್ನು ಮುಸ್ಲಿಂ ಧರ್ಮವನ್ನು ಬಿಟ್ಟು ಮೂಲ ಧರ್ಮಕ್ಕೆ ಮರಳುವ ಒತ್ತಾಯವಾಗಲಿ, ಪ್ರೇರೇಪಣೆಯಾಗಲಿ ಆರ್ಯ ಸಮಾಜದ ಸಂಘಟನೆಗಳಿಂದ ಅಥವಾ ಇನ್ನಿತರ ಯಾವುದೇ ಸಂಘಟನೆಗಳಿಂದ ಕಂಡುಬಂದಿಲ್ಲ. ಇಂತಹ ಯಾವ ನಿದರ್ಶನಗಳು ಕಥನ ಸಾಹಿತ್ಯದಲ್ಲಿ ಕಂಡುಬಂದಿಲ್ಲ. ಸಮಾಜದಲ್ಲಿ ಘಟಿಸಿದ್ದಿರಬಹುದೇನೊ ಎಂಬುದು ಆಧಾರಕ್ಕೆ ಸಿಕ್ಕದೆ ಹೋಗಿರುವಂತಹದ್ದು. ಮತಾಂತರ ಕೇವಲ ರಾಜಕೀಯ ಹುನ್ನಾರ. ಇದರ ಬಲೆಗೆ ಸಿಕ್ಕವರೆಲ್ಲರಿಗೂ ಸಮಾನವಾದ ನ್ಯಾಯ ದೊರೆಕಿಲ್ಲ. ಇದು ಕೇವಲ ಹೈದರಾಬಾದ್ ಕರ್ನಾಟಕಕ್ಕೆ ಸಂಬಂಧಿಸಿದಂತೆ ಮಾತ್ರವಲ್ಲ ಭಾರತಕ್ಕೆ ಅನ್ವಯಿಸುವಂತೆ ಕ್ರೈಸ್ತ ಧರ್ಮದ ಮತಾಂತರಕ್ಕೆ ಒಳಗಾದ ಅನೇಕ ಕೆಳವರ್ಗಗಳು ಸಂಪೂರ್ಣ ಕ್ರೈಸ್ತರಾಗದೆ, ಪುನಃ ಮೂಲ ಧರ್ಮಕ್ಕೆ ಹಿಂತಿರುಗದೆ ಉಳಿದಿರುವ ಸಂಗತಿಗಳು ತಿಳಿದುಬರುತ್ತವೆ. ಮತಾಂತರ ಹೊಂದಿ ಮುಸ್ಲಿಂರಾದವರು ಸಂಪೂರ್ಣ ಮುಸ್ಲಿಂರಲ್ಲಿಯೇ ಸ್ವೀಕರಿಸಲ್ಪಡದವರಾಗಿ ಪ್ರತ್ಯೇಕವಾಗಿ ಉಳಿದಿರುವಂತಹದ್ದು ಕಂಡುಬರುತ್ತದೆ.

ಮತಾಂತರದ ಸಮಸ್ಯೆಯಂತೆಯೇ ಕಂಡು ಬಂದ ಇನ್ನೊಂದು ಸಮಸ್ಯೆಯೆಂದರೆ ದೇಶ ವಿಭಜನೆಗೆ ಸಂಬಂಧಿಸಿದ್ದು. ಇಡೀ ದೇಶಕ್ಕೆ ಸಂಬಂಧಿಸಿದಂತೆ ರಾಷ್ಟ್ರೀಯತೆ, ದೇಶ ವಿಭಜನೆಯ ಸಮಸ್ಯೆಗಳನ್ನು ಕುರಿತು ಜಯತೀರ್ಥ ರಾಜಪುರೋಹಿತರ ಕತೆಗಳು ತಿಳಿಸುತ್ತವೆ. 'ಮುಂದೇನು'?, 'ಜಾನ್‌ಷಣ್ಮುಗನ್' ಇತ್ಯಾದಿ ಇವರ ಕತೆಗಳಲ್ಲಿ ದೇಶ ವಿಭಜನೆಗೆ ಸಂಬಂಧಿಸಿದ ಸಮಸ್ಯೆಗಳ ಬಗ್ಗೆ ತಿಳಿದುಬರುತ್ತದೆ.

'ಮುಂದೇನು?' (ರಾಜಪುರೋಹಿತ) ಕತೆಯ ಕಾಲೀಚರಣನ ಕುಟುಂಬ ಭಾರತ ಸ್ವಾತಂತ್ರ್ಯದ ನಂತರ ಸಂಕಷ್ಟಕ್ಕೀಡಾಗುತ್ತದೆ. ಸ್ವಾತಂತ್ರ್ಯನಂತರ ಕಾಲೀಚರಣ ವಾಸವಾಗಿದ್ದ ಬಂಗಾಲ ಪ್ರಾಂತದ ರಾಜಶಾಹಿ ಗ್ರಾಮ ಪೂರ್ವ ಪಾಕಿಸ್ತಾನಕ್ಕೆ ಸೇರುತ್ತದೆ. ನೆಹರು-ಲಿಯಾಕತ್ ಒಪ್ಪಂದದಿಂದ ಅಂತಹ ಯಾವ ದುರ್ಘಟನೆಗಳೂ ಸಂಭವಿಸಲಿಲ್ಲವಾದರೂ ಹಿಂದೂ ಸರಕಾರಿ ನೌಕರರಿಗೆ ಕಿರುಕುಳ ಉಂಟಾಯಿತು. ಕಾಲೀಚರಣ ಮಾರೀಬೇನೆಗೆ ತುತ್ತಾಗಿ ಸತ್ತ ಮಗನನ್ನು ಕಳೆದುಕೊಂಡು ಮಗಳು ಅಳಿಯನೊಂದಿಗೆ ಬದುಕು ಸಾಗಿಸುತ್ತಿದ್ದ. ಕಾಶ್ಮೀರದಲ್ಲಿ ಪಾಕಿಸ್ತಾನಿಗಳ ಹಿಂಸಾಕಾರ್ಯದ ಉಲ್ಬಣದ ಪರಿಣಾಮ ರಾಜಶಾಹಿ ಯಂತಹ ಗ್ರಾಮಗಳಿಗೆ ಪಸರಿಸದೆ ಬಿಡಲಿಲ್ಲ. ಅಳಿಯನನ್ನು ಕಳೆದುಕೊಂಡು ಮಾನಪ್ರಾಣ ರಕ್ಷಣೆಗೆ ಕಾಲೀಚರಣ ಮತ್ತು ಆತನ ಮಗಳು ಆನಂದಿ ಬಹುಪ್ರಮಾಸದಿಂದ ಊರುಬಿಟ್ಟು ಭಾರತದ ನಿರಾಶ್ರಿತ ಶಿಬಿರಕ್ಕೆ ಸೇರುತ್ತಾರೆ. ಇಂತಹ ನಿರಾಶ್ರಿತರಲ್ಲಿ ಒಬ್ಬನಾದ ಭಾನುಪ್ರಕಾಶ ಕಾಲೀಚರಣನ ಮರಣದ ನಂತರ ಆನಂದಿಗೆ ಆಸರೆಯಾಗುತ್ತಾನೆ. ಜನಸಾಮಾನ್ಯರ ಮೇಲೆ ದೇಶ ವಿಭಜನೆಯು ಉಂಟುಮಾಡುವ ಪರಿಣಾಮ ಭೀಕರವಾದದ್ದು. ಇಡೀ ಕುಟುಂಬವನ್ನೇ ಕಳೆದುಕೊಂಡು ಮುಂದೇನು? ಎನ್ನುವ ಚಿಂತನೆಯಲ್ಲಿ ಅಸಾಹಯಕರಾಗುವ ಸ್ತ್ರೀಯರು, ವೃದ್ಧರು, ಮಕ್ಕಳು ತಮ್ಮದಲ್ಲದ ತಪ್ಪಿಗೆ ಬಲಿಯಾದವರು.

ಇದೇ ರೀತಿ ದೇಶ ವಿಭಜನೆಯಿಂದ ವೈಯಕ್ತಿಕವಾಗಿ, ಕೌಟುಂಬಿಕವಾಗಿ ನೋವನ್ನು ಅನುಭವಿಸುವ ನಿರಾಶ್ರಿತನ ಕತೆಯನ್ನು 'ಜಾನ್ ಷಣ್ಮುಗನ್' (ಜಯತೀರ್ಥ ರಾಜಪುರೋಹಿತ) ತಿಳಿಸುತ್ತದೆ. ಬರ್ಮಾದಿಂದ ಹೊರ ಹಾಕಲ್ಪಟ್ಟ ಜಾನ್‌ಷಣ್ಮುಗನ್ ಮೂಲ ನೆಲಕ್ಕೆ ಮರಳಬೇಕಾದ ಸಂದರ್ಭದಲ್ಲಿ ತನ್ನದೆನ್ನುವುದೇನನ್ನು ಉಳಿಸಿಕೊಳ್ಳದಂತಾಗಿರುತ್ತಾನೆ. ಪಿನ್‌ಳ ಪ್ರೀತಿ, ಗಳಿಸಿದ ಆಸ್ತಿ, ಅಂತಸ್ತು ಎಲ್ಲವನ್ನು ಬರ್ಮಾ ಆತನಿಂದ ಕಿತ್ತುಕೊಂಡಿರುತ್ತದೆ. ಹಾಗೆಯೇ ಮೂಲ ವಾಸವಾಗಿದ್ದ ಭಾರತದಲ್ಲಿಯೂ ಇವರಿಗಾಗಿ ಏನೂ ಇರುವುದಿಲ್ಲ. ಬ್ರಿಟೀಷರ ಅನ್ನದ ಋಣಕ್ಕೆ ಮತಾಂತರದ ಕಾರ್ಯವನ್ನು ನಿರ್ವಹಿಸಿದ ತಾತ, ತಾಯ್ನಾಡಿಗಾಗಿ ಹೋರಾಡಿದ ತಂದೆ ಇವರಿಬ್ಬರ ಶ್ರಮವು ಭಾರತದಲ್ಲಾಗಲಿ, ಬರ್ಮಾದಲ್ಲಾಗಲಿ ಜಾನ್‌ಷಣ್ಮುಗನ್‌ನಿಗೆ ಯಾವ ನೆಲೆಯನ್ನು ರೂಪಿಸಿ ಕೊಡುವುದಿಲ್ಲ. ಬರ್ಮಾದಿಂದ ಹೊರಹಾಕಲ್ಪಟ್ಟ ಜಾನ್‌ಷಣ್ಮುಗನ್ನಂತಹ ವಲಸಿಗರಿಗೆ ಭಾರತ ನೆಲೆಯಾಯಿತಾದರೂ ಅವರ ಮೂಲ ತಮಿಳುನಾಡಿನಲ್ಲಿಯೇ ಅವನಿಗೆ ಸ್ಥಾನ ದೊರೆಯುವುದಿಲ್ಲ. ರಾಷ್ಟ್ರ, ರಾಷ್ಟ್ರೀಯತೆಯ ಮನೋಭಾವಗಳಿಗೆ ಭಾರತದಲ್ಲಿಯೂ ಇಂತಹ ಭ್ರಮನಿರಸನಗಳನ್ನು ಎದುರಿಸಿದ ಷಣ್ಮುಗನ್ ದೇಶ ವಿಭಜನೆಯಂತಹ ರಾಜಕೀಯ ಜಾಲಗಳ ಕ್ರೌರ್ಯದ ದಟ್ಟ ಅನುಭವಕ್ಕೆ ನಿದರ್ಶನವಾಗುತ್ತಾನೆ. ಇದೇ ರೀತಿಯಲ್ಲಿ ಭಾರತೀಯ ಮುಸ್ಲಿಂರಿಗೆ ಪಾಕಿಸ್ತಾನದಲ್ಲಿ ಉಂಟಾಗಬಹುದಾದ ಸ್ಥಿತಿಯನ್ನು ರೋಷನ್ ಊಹಿಸುತ್ತಾನೆ. "ರಾಷ್ಟ್ರವನ್ನು ದುರ್ಬಲಗೊಳಿಸಲು ಭಾಷೆ ಹಾಗೂ ಮತಗಳ ಭೇದಗಳನ್ನು ಬಳಸಿಕೊಳ್ಳುವ ಸಾಧ್ಯತೆ ಇದೆಯಾದರೂ ರಾಷ್ಟ್ರೀಯ ಪ್ರಜ್ಞೆ ಇವೆಲ್ಲಕ್ಕೂ ಮೀರಿದುದೆನಿಸುತ್ತದೆ" (ಜಯತೀರ್ಥರಾಜ ಪುರೋಹಿತ; ೧೯೬೯; ಪುಟ ೧೦೩) ಎನ್ನುವ ರೋಷನ್‌ನ ಮಾತು ಸ್ವಾತಂತ್ರ್ಯದ ಪ್ರಜ್ಞೆ, ಭಾಷೆ, ಮತದ ಭೇದವಿಲ್ಲದೆ ಪ್ರತಿಯೊಬ್ಬನನ್ನು ಪ್ರೇರೇಪಿಸಿದ ರೀತಿ ವಿಶಿಷ್ಟವಾಗಿದ್ದುದನ್ನೇ ಸೂಚಿಸುತ್ತದೆ. ಈ ಸಂದರ್ಭದಲ್ಲಿ ತುಂಗಭದ್ರಾ ಅಣೆಕಟ್ಟನ್ನು ಕಟ್ಟುವ ಕಾಮಗಾರಿ ನಿರಾಶ್ರಿತರಿಗೆ

ಸಹಕಾರಿಯಾಯಿತು. ಈ ಪ್ರದೇಶವು ದೇಶ ವಿಭಜನೆಯ ಸಂದರ್ಭದ ವಲಸಿಗರಿಗೆ ನೆರವಾದ ರೀತಿಯನ್ನು ತಿಳಿಸುತ್ತದೆ. ಹೈದರಾಬಾದ್ ಕರ್ನಾಟಕ ಪ್ರದೇಶದ ಸಂವೇದನೆಯೊಂದಿಗೆ ದೇಶ ವಿಭಜನೆಯ ಸಂದರ್ಭದಲ್ಲಿನ ಇಡೀ ದೇಶಕ್ಕೆ ಸಂಬಂಧಿಸಿದಂತೆ ಉಂಟಾದ ಸಮಸ್ಯೆಯೊಂದರ ಬಗೆಗಿನ ಸಂವೇದನೆಯನ್ನು ಈ ಕತೆ ತಿಳಿಸುತ್ತದೆ. ತನ್ನ ಪ್ರಾದೇಶಿಕ ವ್ಯಾಪ್ತಿಯಲ್ಲಿಯೇ ದೇಶಕ್ಕೆ ಸಂಬಂಧಿಸಿದ ವಿಚಾರಗಳಿಗೆ ಸ್ಪಂದಿಸುವ ರೀತಿ ಇಲ್ಲಿನ ಕಥನದ ವಿಶಿಷ್ಟತೆಯನ್ನೇ ತಿಳಿಸುತ್ತದೆ.

ಒಂದು ಆಡಳಿತ ವ್ಯವಸ್ಥೆ ಅಥವಾ ಪ್ರಭುತ್ವ ತನ್ನ ಅಸ್ತಿತ್ವವನ್ನು ಪ್ರದೇಶವೊಂದರ ಜನತೆಯ ಮೇಲೆ ಸ್ಥಾಪಿಸಲು ಪ್ರಯತ್ನಿಸುವುದು ಭಾಷೆ ಮತ್ತು ಜಾತಿಯ ಮುಖೇನ. ಭಾರತಕ್ಕೆ ಅನ್ವಯಿಸುವಂತೆ ಬ್ರಿಟೀಷರ ಆಳ್ವಿಕೆಯು ಇದರಿಂದ ಹೊರತಾಗಿಲ್ಲ. ಇದಕ್ಕೆ ಪ್ರತಿಯಾಗಿ ಸ್ವಾತಂತ್ರ್ಯ ಹೋರಾಟಕ್ಕಿಳಿಯುವವರು ಪ್ರಭುತ್ವದ ಜಾತಿ ಮತ್ತು ಭಾಷೆಯನ್ನು ವಿರೋಧಿಸುವುದು ಸಹಜವಾಗಿ ಕಂಡು ಬರುವಂತಹದ್ದು. ಜಾತಿ ವಿರೋಧವೆಂಬುದು ನೇರವಾಗಿ ಪ್ರಭುತ್ವದೊಂದಿಗೆ ಹೋರಾಟಕ್ಕಿಳಿಯದೆ ಜನಸಾಮಾನ್ಯರ ಮತೀಯ ಸೌಹಾರ್ದತೆಯನ್ನು ಕದಡಿಸುತ್ತದೆ. ಪ್ರಭುತ್ವ ತನ್ನ ಜಾತಿ ಮತ್ತು ಭಾಷೆಯನ್ನು ಎಷ್ಟು ಭದ್ರಪಡಿಸಿಕೊಳ್ಳಲು ಪ್ರಯತ್ನಿಸುತ್ತದೆಯೋ ಅಷ್ಟೇ ಮುಖ್ಯವಾಗಿ ವಿರೋಧಿ ಜನಸಾಮಾನ್ಯರಲ್ಲಿ ಪ್ರಭುತ್ವಕ್ಕೆ ಮಣಿಯದ ಶಕ್ತಿ, ಭದ್ರತೆ ಮತೀಯವಾಗಿ ಮತ್ತು ಭಾಷಿಕವಾಗಿ ಬೇಕಾಗುತ್ತದೆ. ಈ ರೀತಿಯ ಭದ್ರತೆಗಳ ಕೊರತೆಯೇ ಒಂದು ವರ್ಷ ತಡವಾಗಿ ಈ ಪ್ರದೇಶಕ್ಕೆ ಸ್ವಾತಂತ್ರ್ಯ ದೊರಕಿತು. ಪ್ರಭುತ್ವ ಹಾಗೂ ಅದರ ಧರ್ಮದ ಹೆಸರು ಕೇವಲ ನೆಪಾಗಿದ್ದು, ಮನುಷ್ಯನ ದೌರ್ಜನ್ಯಗಳು ಮತ, ಪ್ರಾಂತ್ಯಗಳ ಭೇದವನ್ನು ಮೀರಿರುವಂತಹದ್ದಾಗಿತ್ತು. ಇಲ್ಲಿನ ಕತೆಗಳಲ್ಲಿ ಪ್ರಭುತ್ವವನ್ನು ವಿರೋಧಿಸುವವರು ಹಿಂದೂ-ಮುಸ್ಲಿಂ ಎರಡು ಕೋಮಿನವರಾಗಿದ್ದರು. ಹಾಗೆಯೇ ರಜಾಕಾರರ ಹಾವಳಿಯ ಸಂದರ್ಭದಲ್ಲಿ ದೌರ್ಜನ್ಯಕ್ಕೀಡಾದವರು ಇದೇ ಹಿಂದೂ - ಮುಸ್ಲಿಂ ವರ್ಗಕ್ಕೆ ಸೇರಿದ ಜನಸಾಮಾನ್ಯರು. ಇಂತಹ ಸಂದರ್ಭಗಳು ಮನುಷ್ಯನಲ್ಲಿ ವಿವೇಚನೆಯನ್ನು ಮೂಡಿಸುವ, ಸಾಮಾಜಿಕ ಪ್ರಜ್ಞೆಯನ್ನು ಉಂಟು ಮಾಡುವಂತಹ ಐತಿಹಾಸಿಕ ಘಟನೆಗಳಾಗಬೇಕೆ ಹೊರತು ಹಿಂದೂ-ಮುಸ್ಲಿಂ ಎಂಬ ಭೇದದ ಆರಂಭಕ್ಕೆ ತಳಹದಿಯಾಗಬಾರದು ಹಿಂದೂ-ಮುಸ್ಲಿಂ ಭೇದದ ತಳಹದಿಯಾಗುವಂತಹ ಯಾವ ಘಟನೆಯೂ ಸಮಾಜದಲ್ಲಿ ಪುನರಾವರ್ತನೆಗೊಳ್ಳಬಾರದು. ಹಾಗೊಂದು ವೇಳೆ ಮತೀಯ ಹಿನ್ನೆಲೆಯಲ್ಲಿ ನಡೆಯುವ ದುರ್ಘಟನೆಗಳು ಮನುಷ್ಯ ಬದುಕಿನ ನೈತಿಕ ಅಧಃಪತನಗಳೆ ಆಗಿರುತ್ತವೆ. ಉತ್ತಮ ಆಡಳಿತ ಬರಬೇಕೆಂಬ ಹಂಬಲಿಕೆಯಲ್ಲಿ ಸ್ವಾತಂತ್ರ್ಯ ಹೋರಾಟಗಳು ನಡೆದವು ಎಂದುಕೊಳ್ಳುವುದು ಒಂದು ಆದರ್ಶ. ಇಂತಹ ಹೋರಾಟಗಳ ಬಗೆಗೆ ಭ್ರಮನಿರಸನವಾಗುವಂತಹದ್ದನ್ನು ಜಯತೀರ್ಥ ರಾಜಪುರೋಹಿತರ 'ಯಾರು ನಮ್ಮವರು'? ಕತೆ ತಿಳಿಸುತ್ತದೆ. ಹಿಂದೂಗಳನ್ನು ನಮ್ಮವರೆಂದು, ಸ್ವಾತಂತ್ರ್ಯ ಅಪೇಕ್ಷಿಸುವವರೆಂದು, ಮುಸ್ಲಿಂರನ್ನು ದೇಶದ್ರೋಹಿಗಳು ಕಂಟಕ ಪ್ರಾಯರೆಂದು ಭಾವಿಸಿದ್ದ ರಾಜಣ್ಣ ಭ್ರಮನಿರಸನಕ್ಕೊಳಗಾಗುತ್ತಾನೆ. ರಾಜಣ್ಣನ ಮನೆಗೆ ಸಹಾಯಕನಾದ ಹೊನ್ನೂರ ಸಾಬನಿಗೂ, ಸ್ವತಃ ಬಂಧುಗಳೆನಿಸಿದವರ ಸರಕಾರಿ ನೌಕರಿಯ ಸ್ವಾರ್ಥ ರಾಜಣ್ಣನನ್ನು ಯೋಚನೆಗೀಡು ಮಾಡುತ್ತದೆ. ಯಾರ ರಾಜ್ಯ ಬಂದರೆ, ಯಾವ ಆಡಳಿತ

ಬಂದರೆ ತನಗಾಗುವ ವೈಯಕ್ತಿಕ ಲಾಭವೇನು? ಎಂದು ಆತ್ಮ ವಿಮರ್ಶೆ ಮಾಡಿಕೊಳ್ಳುವ ರಾಜಣ್ಣ ನಂಬಿಯಣ್ಣನ ಪ್ರಶ್ನೆಗೆ ಉತ್ತರಿಸದಾಗುತ್ತಾನೆ. "... ತುರಕ ರಾಜಾ ಇದ್ದು, ನಮ್ಮೂರ ನಬೀಸಾಬನ ಖಂಡದಂಗಡೀ ಏನಾರ ತಪ್ಪಿಸಿದ್ನ? ಏನ್ ಪಿಂಜಾರ ಫಕೀರಸಾಬನ ಅಳ್ಳಿ ಬಡಿಯೋದ ತಪ್ಪಿಸಿದ್ನ? ನಮ್ಮ ರಾಜ್ಯೇವು ಬಂದ್ರೇನ್ ನನ್ ಮಗ ಹೊಲದಾಗ ಮಲಗೋದು ತೆಪ್ಪಬೇಕಾಗೈತೆ, ನನ್ನ ಸೊಸೀಗೆ ಏನ್ ಬುದ್ದಿ ಬಿಡಿಸೋದ ತಪ್ಪೈತೆ?" (ಜಯತೀರ್ಥ ರಾಜಪುರೋಹಿತ; ೧೯೬೭; ಪುಟ : ೧೨) ಎನ್ನುವ ನಂಬಿಯಣ್ಣನ ಪ್ರಶ್ನೆಗಳಿಗೆ ಸ್ವತಂತ್ರ ಭಾರತದಲ್ಲೂ ಉತ್ತರ ಸಿಕ್ಕಿಲ್ಲ. ಸಮಾಜದ ಎಲ್ಲರ ಬದುಕನ್ನು ಉನ್ನತೀಕರಿಸುವ, ಎಲ್ಲರ ಹಿತಾಸಕ್ತಿ ಕಾಪಾಡುವ ರಾಜ್ಯ ಬರಬೇಕೆನ್ನುವ ಸದಾಶಯ ಪ್ರದೇಶಕ್ಕೆ ಸೀಮಿತವಾದ ಸಂವೇದನೆಯಾಗಲಾರದು. ಇದು ಜಾತೀಯತೆಯನ್ನು, ಪ್ರದೇಶವನ್ನು ಮೀರಿ ಮನುಷ್ಯ ಬದುಕಿನ ಮುಖ್ಯ ಅಗತ್ಯವಾಗಿದೆ.

ಜಯತೀರ್ಥ ರಾಜಪುರೋಹಿತರ 'ಹಾಲು - ಜೇನು' ಮತ್ತು 'ಸುಳಿಗಾಳಿ' ಕಾದಂಬರಿಗಳು ನಿಜಾಮ ಆಡಳಿತದ ಅಂತಿಮ ದಿನಗಳ ಬಿಕ್ಕಟ್ಟನ್ನು ಹಾಗೆಯೇ ಸ್ವಾತಂತ್ರ್ಯ ದಿನಗಳ ಆರಂಭವನ್ನು ತೆರೆದಿಡುತ್ತವೆ. ಹಿಂದೂ-ಮುಸ್ಲಿಂ ಸಾಮರಸ್ಯದ ಬದುಕನ್ನು ಸಂಕೇತಿಸುವಂತಿರುವ ಹಾಲು-ಜೇನು ಕಾದಂಬರಿ ವಿವಿಧ ಸಂವೇದನೆಗಳನ್ನು ಒಳಗೊಂಡಿರುವಂತಹದ್ದು. ಪೀರನ ಬದುಕಿಗೆ ಹಾಲು-ಜೇನು ಆಗಿ ಪರಿಣಮಿಸಿದ ಹಂಪಿ ಮತ್ತು ಫಾತಿಮಾ ಸಾಮರಸ್ಯ ಬದುಕಿಗೆ ಸಂಕೇತವಾಗುತ್ತಾರೆ. ಪೀರನು ರೈತನಾದರೂ ಆತನ ಜಾತ್ಯಾತೀತ, ಸೌಹಾರ್ದಯುತ ನಡುವಳಿಕೆ ಪೊಲೀಸ್ ಕಾರ್ಯಾಚರಣೆಯ ಸಂದರ್ಭದಲ್ಲಿ ಆತನ ಸಂಸಾರವನ್ನು ಉಳಿಸುತ್ತದೆ. ಹಿಂದೂ ಜನರ ಬೆಂಬಲದಿಂದ ತಮ್ಮನ ಹೆಂಡತಿ ಜುಲೇಖಾಳ ಮಾನ ರಕ್ಷಣೆಯಾಗುತ್ತದೆ. ಓದು ಕಲಿತು ವಿದ್ಯಾವಂತನಾಗಿದ್ದ ಜಲಾಲನು ಮತಾಂಧನಾಗಿರುತ್ತಾನೆ. ಮತೀಯ ಅಹಂಕಾರಕ್ಕೆ ಬಿದ್ದ ಜಲಾಲನಿಂದ ಸಾಧ್ಯವಾಗುವಂತಹದ್ದೇನು ಉಳಿದಿಲ್ಲ ಎನ್ನುವ ಮಟ್ಟದ ಬಲಹೀನತೆ ಆತನಿಗೆ ಉಂಟಾಗುತ್ತದೆ. ಹಾಲು-ಜೇನು ಕಾದಂಬರಿಯು ಜನಬದುಕಿನ ಮತೀಯ ಸೌಹಾರ್ದತೆ, ಅದರಲ್ಲಿ ಕಂಡು ಬಂದ ಭಿನ್ನಾಭಿಪ್ರಾಯಗಳು, ಕೊನೆಗೆ ಪೊಲೀಸ್ ಆಕ್ಷನ್ ಪರಿಣಾಮವಾಗಿ ಸಂಭವಿಸಿದ ಸಾಮಾಜಿಕ ಬದಲಾವಣೆಗಳನ್ನು ಚಿತ್ರೀಕರಿಸುತ್ತದೆ.

ಬದಲಾದ ಸಾಮಾಜಿಕ ಜೀವನದಲ್ಲಿ ನವಾಬ್ ಮನೆತನಕ್ಕೆ ಉಂಟಾದ ಸ್ಥಿತಿಗತಿ, ಆಡಳಿತಾತ್ಮಕವಾಗಿ ಉಂಟಾದ ಬದಲಾವಣೆಗಳನ್ನು 'ಸುಳಿಗಾಳಿ' (ಜಯತೀರ್ಥ ರಾಜಪುರೋಹಿತ) ಕಾದಂಬರಿ ತಿಳಿಸುತ್ತದೆ. ಹೈದರಾಬಾದ್ ಕರ್ನಾಟಕಕ್ಕೆ ಸಿಕ್ಕ ಸ್ವಾತಂತ್ರ್ಯ ನವಾಬ ಮನೆತನದ ಜಾಗೀರದಾರರಿಗೆ ಹಾಗೆಯೇ ಹಿಂದೂ ಜಾಗೀರದಾರರಿಗೆ ಪೆಟ್ಟು ನೀಡಿತ್ತು. ಆದರೆ ಈ ಸಂದರ್ಭದಲ್ಲಿ ನವಾಬ ಮನೆತನದವರಿಗಿಂತ ಹಿಂದೂ ಮನೆತನದ ಜಾಗೀರದಾರರು ಹೆಚ್ಚು ತಮ್ಮ ಸ್ಥಾನವನ್ನು ಹಾಗೆಯೇ ಆಸ್ತಿ, ಅಂತಸ್ತನ್ನು ರಕ್ಷಿಸಿಕೊಂಡ ಬುದ್ಧಿವಂತರೆನಿಸುತ್ತಾರೆ. ರಾಜಕೀಯದಲ್ಲಿ ಹಿಡಿತವನ್ನು ಕಳೆದುಕೊಂಡ ನವಾಬ ಮನೆತನದವರು ತಮ್ಮ ದುಂದುಗಾರಿಕೆಯ ಮೇಲೆ ಹಾಗೆಯೇ ಅಳಿದುಳಿದ ಸ್ವಪ್ರತಿಷ್ಠೆಯ ಒಣ ಆಡಂಬರದ ಮೇಲೆ ನಿಯಂತ್ರಣ ವನ್ನು ಕಳೆದುಕೊಂಡಿದ್ದರು. ಉನ್ನತ ಜೀವನ ಕ್ರಮ ಕೇವಲ ಪಾರ್ಟಿಗಳನ್ನು ಮಾಡುವುದು, ತಮ್ಮ

ದೈಹಿಕ ಕಾಮನೆಗಳಿಗೆ ಲೌಂಡಿಗಳನ್ನು ಬಳಸಿಕೊಳ್ಳುವುದು, ಬೆಲೆಬಾಳುವ ಮಾದಕ ಪೇಯಗಳನ್ನು ಬಳಸುವುದು ಎನ್ನುವ ನವಾಬರಿಗೆ ಸರಿಯಾಗಿಯೇ ಜಮರುದ್ ಬೇಗಮಳ ಪಾರ್ಟಿ ವ್ಯಾಮೋಹವಿರುತ್ತದೆ. ತನ್ನ ದೇಹ ಸೌಂದರ್ಯದಿಂದ, ಅತಿಥಿ ಸತ್ಕಾರದಿಂದ ಬ್ರಿಟಿಷ್ ಅಧಿಕಾರಿಗಳನ್ನು, ಉನ್ನತ ಹುದ್ದೆಯ ಜಾಗೀರದಾರರ ಮನ ತಣಿಸುವಲ್ಲಿಯೇ ಲೀನವಾಗಿರುತ್ತಾಳೆ. 'ಕರಾಮತ್ ಮಂಜಿಲ್' ಇವರ ಭೋಗ ಜೀವನದಲ್ಲಿ ಕಳೆದುಹೋಗುತ್ತದೆ. ಕೊನೆಗಾಲದಲ್ಲಿ ಜಮರುದ್ ಬೇಗಮ್ ಮತ್ತು ಆಕೆಯ ಮಗಳು ಷಿರಿನ್ ಕಂಡ ಕಂಡ ಗಂಡಸರ ಅಸಹ್ಯ ದೈಹಿಕ ಕಾಮಕ್ಕೆ ಮೈಮಾರಿಕೊಳ್ಳುವ ದಂಧೆಗೆ ಇಳಿಯುತ್ತಾರೆ. ಬೇಗಂ ಮಗ ದಿಲಾವರ್ ಸಣ್ಣ ನೌಕರಿ ಹಿಡಿಯಬೇಕಾಗುತ್ತದೆ. ಪ್ರಜ್ಞಾಹೀನ ಬದುಕೊಂದು ಪಡೆದ ದುರಾವಸ್ಥೆಯನ್ನೇ ನವಾಬ ಮನೆತನದ ದುರ್ಗತಿ ಸೂಚಿಸುತ್ತದೆ. ಹಿಂದೂ ಜಾಗೀರದಾರನಾದ ದೇವೇಂದ್ರರಾಯ ತನಗೆ ಹಣ ಆಭರಣದ ಗಂಟನ್ನು ಕೊಟ್ಟು, ಜೀವ ಭಯದಿಂದ ಓಡಿ ಹೋದ ಸೌದಾಗರ್ ಎಂಬ ವ್ಯಕ್ತಿಯನ್ನು ಹುಡುಕಿ ಆತನಿಗೆ ಆತನ ಸಂಪತ್ತನ್ನು ಹಿಂತಿರುಗಿಸುತ್ತಾನೆ. ಪೊಲೀಸ್ ಆಕ್ಷನ್ ಆಗಿದ್ದ ಆ ಸಂದರ್ಭದಲ್ಲಿ ಯಾರು ಯಾರನ್ನು ಬೇಕಾದರೂ ಲೂಟಿ ಮಾಡುವ, ಮೋಸಗೊಳಿಸ ಬಹುದಾಗಿದ್ದ ಸಂದರ್ಭದಲ್ಲಿ ದೇವೇಂದ್ರರಾಯನ ಪ್ರಾಮಾಣಿಕತೆ ಮೆಚ್ಚುವಂತಹದ್ದೇ ಆಗಿರುತ್ತದೆ. ನವಾಬ ಮನೆತನದವರ ಸಹವಾಸ, ಪ್ರೀತಿ ಸೆಹಗಲ್ಲಳನ್ನು ಬಳಸಿಕೊಳ್ಳಬೇಕೆನ್ನುವ ಇಚ್ಛೆಯ ಸುಳಿಗಾಳಿಯಿಂದ ದೇವೇಂದ್ರರಾಯ ಹೊರಬರುತ್ತಾನೆ. ತನ್ನ ಜೀವನದ ಬುನಾದಿಯನ್ನು ಕಾಯ್ದುಕೊಳ್ಳುವ ದೇವೇಂದ್ರರಾಯ ಹಾಗೂ ಜೀವನದ ಸರ್ವನಾಶದ ಅಂಚನ್ನು ತಲುಪಿದ ನವಾಬ ಮನೆತನದ ದಿಲಾವರ್, ಜಮರುದ್ ಬೇಗಂ, ಷಿರಿನ್, ಮುಂತಾದವರು ಬದಲಾದ ಕಾಲಘಟ್ಟದ ಎರಡು ವಿಭಿನ್ನ ಮುಖಗಳು. ಮಧ್ಯಮವರ್ಗದ ರಾಜಣ್ಣ ಸರಕಾರದ ಉನ್ನತ ಹುದ್ದೆಗೆ ಬರುವುದು ಸ್ಥಿತ್ಯಂತರಗೊಂಡ ರಾಜಕೀಯ, ಆಡಳಿತಾತ್ಮಕ ಬದಲಾವಣೆಗಳ ಹೆಗ್ಗುರುತು. ಅವನತಿಯ ಕಾಲವನ್ನು ಹಾಗೆಯೇ ಬದಲಾವಣೆಯ ಆರಂಭವನ್ನು ಇಲ್ಲಿನ ಪಾತ್ರಗಳು ಮೂರ್ತಗೊಳಿಸುತ್ತವೆ.

ಪ್ರಜಾಪ್ರಭುತ್ವದ ಉದಯ ಹೈದರಾಬಾದ್ ಕರ್ನಾಟಕ ಪ್ರದೇಶದ ಜನಕ್ಕೆ ಧೈರ್ಯವನ್ನು, ಜನಸಾಮಾನ್ಯರ ಬದುಕಿನ ಉನ್ನತೀಕರಣವನ್ನು ತಂದುಕೊಡುತ್ತದೆಂಬ ಯಾವ ನಂಬಿಕೆಯೂ ಜನತೆಗೆ ಬರಲಿಲ್ಲ. ಪ್ರಜಾಪ್ರಭುತ್ವ ಕೇವಲ ರಾಜಕೀಯ ಸಾಧನೆ. ಪ್ರಜಾಪ್ರಭುತ್ವ ಸೃಷ್ಟಿಸಿದ ಅಭದ್ರತೆಯನ್ನು 'ಗೋಹರಜಾನ್ ಮಾಲತಿ ಮತ್ತು ನಾನು' (ಚಂದ್ರಕಾಂತ ಕುಸನೂರು) ಕಾದಂಬರಿಯ ಟಾಂಗಾದ ನರಸಪ್ಪ ತೆರೆದಿಡುತ್ತಾನೆ. "ರಾವ ಸಾಹೇಬ್ರೆ, ಈ ದೇಶಕ್ಕೆ ಪ್ರಜಾಪ್ರಭುತ್ವ ಬಂತು, ದೇಶದೊಳಗೆ ಎಲ್ಲ ಮಂದಿ ಪ್ರಭುಗಳಾದರು. ಯಾರೂ ಪ್ರಜೆಗಳಾಗೇ ಉಳಿಲೇ ಇಲ್ಲ. ಆಳುವವರೇ ಎಲ್ಲರೂ ಆಳಿಸಿಕೊಳ್ಳುವವರೇ ಯಾರಿಲ್ಲ ನೋಡ್ರಿ. ದರಿದ್ರ ಬಿಕನಾಸಿಗೇಡಿ, ಎದಿ ಸೀಳಿದರೂ ಒಂದಕ್ಷರ ಸಿಗಲಾದವರು ರಾಜರಾದರು. ಹಿಂದ್ಕ ರಾಜ್ಯಕ್ಕೊಬ್ಬ ರಾಜನಿರತಿದ್ದ. ಅಂವ ಒಬ್ಬ ಸೂಳೇ ಮಗ ಸುಲಿದರೂ, ಲೂಟಿ ಮಾಡಿದರೂ ಎಷ್ಟು ಸುಲಿತಿದ್ದ? ಎಷ್ಟು ಲೂಟಿ ಮಾಡತಿದ್ದ? "....ಆದ್ರ ಈಗ ಎಲ್ಲರೂ ರಾಜಕೀಯ....ಎಲ್ಲರೂ ಸುಲಿಯುವವರೇ, ಲೂಟಿ ಮಾಡುವವರೇ.... ಈ ದೇಶ ಭಾಳ ಜಲ್ದಿ ನಾಶ ಆಗ್ತಾಯ್ತಿ...." ಎಂದು

ಹೇಳುತ್ತಾನೆ. ಈ ನಿರಾಶ ಭಾವಕ್ಕೆ ಉತ್ತರವೆಂಬಂತೆ ಹಜಾಮರ ಕುಬೇರನ ಪ್ರತಿಕ್ರಿಯೆ ವಿಶಿಷ್ಟವಾಗಿದೆ. "ಇಲ್ಲೋ ನರಸಣ್ಣ, ದೇಶ ಸಾಯಂಗಿಲ್ಲ. ಈ ದೇಶದಾಗ ಬುದ್ಧ, ಬಸವಣ್ಣ, ಕಬೀರ, ರಾಮದಾಸ, ತುಳಸೀದಾಸ, ಪುರಂದರದಾಸ, ಕನಕದಾಸ, ಮೀರಾಬಾಯಿ, ಜನಾಬಾಯಿ, ಮುಕ್ತಾಯಕ್ಕ, ಚೈತನ್ಯ, ಜ್ಞಾನೇಶ್ವರ, ನಾನಕ ದೇವರಂಥವರು ಹುಟ್ಟಿ ಇಷ್ಟೊಂದು ಪುಣ್ಯ ಗಳಿಸಿ ಇಟ್ಟಾರಂದ್ರ, ಈ ದೇಶಭಕ್ತರಂತೆ ಹೇಳಿಕೊಂಡು ಸುಲಿಗಿ ಮಾಡೋ ಪಾಪಿ ಸೂಳೇ ಮಕ್ಕಳು, ತಿಪ್ಪರಲಾಗಾ ಹೊಡೆದ್ರು ದೇಶಕ್ಕೇನೂ ಆಗಂಗಿಲ್ಲ. ಈ ಹಲ್ಕಟ ಮಂದಿಲಿಂದ ದೇಶ ಸಾಯಲಿಕ್ಕೆ ಅದು ಅಷ್ಟೊಂದು ನಿತ್ರಾಣವಾಗಿಲ್ಲೋ ನರಸಣ್ಣ" (ಚಂದ್ರಕಾಂತ ಕುಸನೂರು; ೧೯೮೬; ಪುಟ : ೩೩). ಪ್ರಜಾಪ್ರಭುತ್ವ ಸೃಷ್ಟಿ ಮಾಡಿದ ಹೊಸ ಆತಂಕ, ದೇಶದ ಬಗೆಗಿನ ಅಭಿಮಾನ ಹಾಗೂ ಆಶಾದಾಯಕ ಅಭಿಪ್ರಾಯಗಳನ್ನು ಇದು ತಿಳಿಸುತ್ತದೆ.

ಶೈಕ್ಷಣಿಕ ಚಟುವಟಿಕೆ ಹಾಗೂ ಸ್ವಾತಂತ್ರ್ಯ ಹೋರಾಟ ಎರಡೂ ಒಂದೇ ಎಂಬಂತಾಗಿದ್ದ ಆಗಿನ ಸಂದರ್ಭದಲ್ಲಿ ಅನೇಕ ಸತ್ಯಾಗ್ರಹಗಳಲ್ಲಿ ಪಾಲ್ಗೊಂಡ ಶಿಕ್ಷಕರು, ವಿದ್ಯಾರ್ಥಿಗಳು ಜೈಲುವಾಸವನ್ನು ಅನುಭವಿಸುತ್ತಾರೆ. ಇಂತಹ ಶಿಕ್ಷಕರು ವಿದ್ಯಾರ್ಥಿಗಳು ಶಿಕ್ಷಣ ಸಂಸ್ಥೆಯಿಂದ, ಸಮಾಜದಿಂದ, ಕೊನೆಗೆ ಕೌಟುಂಬಿಕವಾಗಿಯೂ ಅನೇಕ ಸಮಸ್ಯೆಗಳನ್ನು ಎದುರಿಸುವುದನ್ನು ಇಲ್ಲಿನ ಕಥನ ಸಾಹಿತ್ಯದಿಂದ ತಿಳಿಯಬಹುದಾಗಿದೆ. ಪ್ರದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಟಕ್ಕಿಳಿದಿದ್ದ ಗುರುಪಾದ ಎಂಬ ವಿದ್ಯಾರ್ಥಿಯ ಬದುಕಿನ ದಾರುಣ ಸ್ಥಿತಿಯನ್ನು 'ನೀಲಗಂಗಾ ಗುರುಪಾದ ಮತ್ತು ಒಂದು ರೂಪಾಯಿ' (ಶಾಂತರಸ) ಕತೆ ತಿಳಿಸುತ್ತದೆ. ಗುರುಪಾದ 'ವಂದೇ ಮಾತರಂ' ಸತ್ಯಾಗ್ರಹಕ್ಕೆ ಇಳಿದುದ್ದರಿಂದ ಸರಕಾರ ಆತನನ್ನು ದೇಶದ್ರೋಹಿ ಎಂದು ಶಿಕ್ಷಣ ಸಂಸ್ಥೆಯಿಂದ ಹೊರಹಾಕುತ್ತದೆ. ವಿದ್ಯಾರ್ಥಿಗಳ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹ ನೀಡಿದ್ದ ಮಠಗಳು ಪ್ರಭುತ್ವದ ನೆರಳಲ್ಲಿಯೇ ಬದುಕುತ್ತಿದ್ದವು. ವಿದ್ಯಾಭ್ಯಾಸವೇ ಇಲ್ಲದ ಗುರುಪಾದನಿಗೆ ಮಠದ ಆಶ್ರಯ ತಪ್ಪುತ್ತದೆ. ಇನ್ನೊಂದೆಡೆ ಗುರುಪಾದನಿಗೆ ವಿದ್ಯಾಭ್ಯಾಸದ ಆಶ್ರಯ ದೊರಕಿದರೂ ಆತನ ನೋವು, ಅಸಹಾಯಕತೆ, ನೀಲಗಂಗಾಳ ಮರಣದಿಂದ ಉಂಟಾದ ದುಃಖ ಎಲ್ಲವೂ ಆತನ ಬದುಕಿಗೆ ವಿಚಿತ್ರ ರೀತಿಯ ಅಂತ್ಯ ಕೊಡುತ್ತವೆ.

ಉನ್ನತ ಶಿಕ್ಷಣಕ್ಕೆಂದು ಹೋಗುವವರ ಸಂಕಷ್ಟವನ್ನು ಹಾಲು-ಜೇನು ಕಾದಂಬರಿಯು ತಿಳಿಸುತ್ತದೆ. ಈ ರೀತಿ ಉನ್ನತ ಶಿಕ್ಷಣಕ್ಕೆ ಹೋದವರಲ್ಲಿ ಹಿಂದೂ-ಮುಸ್ಲಿಂ ಜನಾಂಗದವರಿಬ್ಬರೂ ಇರುತ್ತಾರೆ. ಸಾಮೂಹಿಕ ಪ್ರಾರ್ಥನೆಯನ್ನು ಹಿಂದೂಗಳು ಮಾಡದಂತೆ ಸರ್ಕಾರದಿಂದ ನಿರ್ಬಂಧವಿದ್ದ ಆ ಸಂದರ್ಭದಲ್ಲಿ ಶೈಕ್ಷಣಿಕವಾಗಿ ಸಂಘಟನೆಗಳು ಈ ಕಾರಣಕ್ಕಾಗಿ ನಡೆಯುತ್ತವೆ. ಹೈದರಾಬಾದ್ ಯುನಿವರ್ಸಿಟಿಗೆ ಸೇರಿದ್ದ ಜಲಾಲ ಮತ್ತು ಖಾದರ್ ಇಬ್ಬರೂ ಮತಾಂಧರಾಗಿದ್ದರು. ತಾವಿದ್ದ ಹಾಸ್ಟೆಲ್‌ನಲ್ಲಿ ಮುಸ್ಲಿಂ ವಿದ್ಯಾರ್ಥಿಗಳ ನಮಾಜಿಗಾಗಿಯೇ ಇದ್ದ "ಕಮರೆ ಮಸಜಿದ" ಎಂಬ ಕೋಣೆಯಲ್ಲಿ ಪ್ರಾರ್ಥನೆ ಸಲ್ಲಿಸುತ್ತಿರುತ್ತಾರೆ. ಈ ತಾರತಮ್ಯವನ್ನು ಸಹಿಸದ ಹಿಂದೂ ವಿದ್ಯಾರ್ಥಿಗಳಾದ ಪುರಾಣಿಕ್ ಚಂಡರಕಿ, ಉಪಾಧ್ಯಾಯ, ಲಕ್ಷ್ಮಣ, ಅಚ್ಯುತರೆಡ್ಡಿ, ಬಸವರಾಜು ಮೊದಲಾದ ವಿದ್ಯಾರ್ಥಿಗಳು ಹಾಸ್ಟೆಲ್‌ಗಳಲ್ಲಿ ಹಿಂದೂ ವಿದ್ಯಾರ್ಥಿಗಳಿಗೂ

ಪ್ರಾರ್ಥನಾ ಕೋಣೆಯೊಂದು ಬೇಕೆನ್ನುವ ಅಭಿಪ್ರಾಯವನ್ನು ಮುಂದಿಡುತ್ತಾರೆ. ಇದು ಈಡೇರಿದಾಗ ಸಾಮೂಹಿಕವಾಗಿ ಭಗವದ್ಗೀತೆಯ ಶ್ಲೋಕವನ್ನು, ವಂದೇ ಮಾತರಂ ಗೀತೆಯನ್ನು ಹಾಡುತ್ತಾ ಪ್ರತಿಭಟನೆ ಮಾಡುತ್ತಾರೆ. ಈ ಪ್ರತಿಭಟನೆಯಿಂದ ಹಿಂದೂ ವಿದ್ಯಾರ್ಥಿಗಳನ್ನು ಕಾಲೇಜು, ಹಾಸ್ಟೆಲ್‌ಗಳಿಂದ ಹೊರಹಾಕುತ್ತಾರೆ. ಇಂತಹ ಸಂಘಟನೆಗಳು ವಿದ್ಯಾರ್ಥಿಗಳ ಮತೀಯ ಅಪೇಕ್ಷೆಗಳಾಗಿ ಮಾತ್ರವೇ ಕಂಡು ಬಂದರೂ, ಸರಕಾರದ ಧೋರಣೆಗಳನ್ನು ವಿರೋಧಿಸುವ ಜಾಗೃತಿಗೆ ತೆರೆದುಕೊಂಡಿದ್ದರ ಸಂಕೇತಗಳಾಗುತ್ತವೆ. ಶೈಕ್ಷಣಿಕ ಸಾಧನೆಗಳಿಗೆ ಈ ರೀತಿಯ ಅಡ್ಡಿಯನ್ನು ಎದುರಿಸುವ ವಿದ್ಯಾರ್ಥಿಗಳು ಕೌಟುಂಬಿಕವಾಗಿಯೂ, ಸಾಮಾಜಿಕವಾಗಿ ಕಷ್ಟಗಳನ್ನು ಅನುಭವಿಸಿರುವ ನಿದರ್ಶನಗಳು ಇವೆ.

ಶಾಲಾ ಶಿಕ್ಷಕನ ಬಂಧನದ ನಂತರ ವಿದ್ಯಾರ್ಥಿಗಳು ಹೋರಾಟಕ್ಕಿಳಿದ ಸಂದರ್ಭವೊಂದು 'ಗೋಹರಜಾನ್ ಮಾಲತಿ ಮತ್ತು ನಾನು' (ಚಂದ್ರಕಾಂತ ಕುಸನೂರು) ಕಾದಂಬರಿಯಲ್ಲಿ ಕಂಡು ಬರುತ್ತದೆ. ಸ್ವಾತಂತ್ರ್ಯ ಹೋರಾಟದ ಚಟುವಟಿಕೆಯಲ್ಲಿ ಪಾಲ್ಗೊಂಡ ರವೀಂದ್ರ ತನ್ನ ಚಿಕ್ಕಪ್ಪನಿಂದ ಶಿಕ್ಷೆಗೆ ಒಳಗಾಗುತ್ತಾನೆ. "ಮಗನಾ ನಿನ್ನ ಎಲಬು ಮುರ್ದ ಹಾಕ್ತೀನಿ. ತಾಯಿ ಗಂಡ, ಭೋಸ್ಡಿ ಮಗನಾ ಓದಲಿಕ್ಕಂತ ಹೋಗಿ ಹಲ್ಕಟಗಿರಿ ಮಾಡತ್ಯಾ? ಬದಮಾಷರ ಜೋಡಿ ಸೇರಿ ಕಾಗದ ಹಂಚತ್ಯಾ? ಆಲಹಜರತ್‌ರ ವಿರುದ್ಧಯಿದ್ದ ಮಂದೀ ಸಂಗಾತ ತಿರಗತ್ಯಾ? ನಮ್ಗ ಅನ್ನಾ ಕೊಡಂವ ನಿಮ್ಮ ನೆಹರು ಅಲ್ಲ. ನಮ್ಮ ಆಲಾಹಜರತ ಕೊಡ್ತಾನ ತಿಳೀತಾ? ಉಪ್ಪಂಡ ಮನೀ ಜಂತಿ ಎಣಿಸ್ತ್ಯಾ? ಉಂಡ ಎಡ್ಯಾಗ ಉಚ್ಚಿ ಹೊಯ್ತ್ಯಾ? ಮನಿವಳ್ಗ ಬಿದ್ದು ಸಾಯಿ" (ಚಂದ್ರಕಾಂತ ಕುಸನೂರ; ೧೯೮೬; ಪುಟ : ೪೪). ನಿಜಾಮನ ಅನ್ನದ ಋಣಕ್ಕಾಗಿ ಆತನನ್ನು ವಿರೋಧಿಸದ ಹಿಂದೂಗಳಲ್ಲಿ ಬಲವಾಗಿದ್ದ ಇನ್ನೊಂದು ಕಾರಣವೆಂದರೆ ಅವರ ಸರಕಾರಿ ನೌಕರಿ. ವಿದ್ಯಾವಂತ ಜನಾಂಗದ ಹೋರಾಟವು ಸಹ ವಿಭಿನ್ನ ರೀತಿಯ ಆಯಾಮಗಳಲ್ಲಿ ಮುಕ್ತಿ ಹೋರಾಟಕ್ಕೆ ಸಿಕ್ಕ ಪ್ರೇರಣೆಯನ್ನೇ ತಿಳಿಸುತ್ತದೆ. ಹಿಂದೂ-ಮುಸ್ಲಿಂ ಭೇದ, ಸ್ವಾತಂತ್ರ್ಯದ ಬಗೆಗಿನ ಪ್ರಜ್ಞೆಯ ಜಾಗೃತಿ, ಇತ್ಯಾದಿ ಪ್ರೇರಣೆಗಳು ಈ ಸಂದರ್ಭದಲ್ಲಿ ವಿದ್ಯಾರ್ಥಿಗಳನ್ನು ಸ್ವತಂತ್ರ ಹೋರಾಟಕ್ಕೆ ಪ್ರೇರೇಪಿಸಿದವು.



ಪ್ರದೇಶದ ಮುಕ್ತಿ ಹೋರಾಟಕ್ಕೆ ಸಂಬಂಧಿಸಿದ ವಿಚಾರಗಳ ಜೊತೆಗೆ ಕಂಡುಬರುವ ಇನ್ನೊಂದು ವಿಷಯವೆಂದರೆ ಕನ್ನಡ ಭಾಷೆಯ ಕಲಿಕೆಗೆ ಸಂಬಂಧಿಸಿದ್ದು. ಈ ಪ್ರದೇಶದಲ್ಲಿನ ಕನ್ನಡ ಭಾಷಾ ಕಲಿಕೆಯ ವಿಚಾರಗಳನ್ನು ಸಹ ಇಲ್ಲಿನ ಕಥನ ಸಾಹಿತ್ಯದಿಂದ ಕಂಡುಕೊಳ್ಳಬಹುದಾಗಿದೆ. ನಾಡು-ನುಡಿಯ ಅಭಿಮಾನವುಳ್ಳ ಸಾಹಿತ್ಯಿಕ ರಚನೆ ಕೇವಲ ಪ್ರದೇಶದ ಅಭಿಮಾನವಲ್ಲ, ಇಡೀ ದೇಶಕ್ಕೆ ಸಲ್ಲಿಸುವ ಗೌರವ. ಇಂತಹ ನಾಡು-ನುಡಿಗೆ ಗೌರವವನ್ನು ಸಾಹಿತ್ಯದ ಮೂಲಕ ಸಲ್ಲಿಸಿದ ಕವಿರಾಜಮಾರ್ಗಕಾರ ಈ ನೆಲದವನೆ ಎನ್ನುವುದು ಹೆಮ್ಮೆಯ ವಿಷಯ. ಕನ್ನಡ ಸಾಹಿತ್ಯದ ಪ್ರಾಚೀನತೆಯನ್ನು ಐತಿಹಾಸಿಕವಾದ ಸಾಹಿತ್ಯ ಸಾಧನೆಯನ್ನು ತಿಳಿಸುವ ಕೃತಿಗಳು ಬಂದ ನೆಲದಲ್ಲಿ ಕನ್ನಡ ಕಲಿಕೆಯೇ ಮರೆಯಾಯಿತೆಂಬುದು ರಾಜಕೀಯ ಸ್ಥಿತ್ಯಂತರಗಳಿಂದ ಉಂಟಾದ ಭೀಕರ ಸ್ಥಿತಿ. ಈ ಪ್ರದೇಶದ ಕನ್ನಡ ಕಲಿಕೆಯ ಮೇಲೆ ಉಂಟಾದ

ಹೇರಿಕೆಗಳು, ಪ್ರಭುತ್ವ ಭಾಷೆಯ ಪ್ರಾಬಲ್ಯ ಇತ್ಯಾದಿ ಸಮಸ್ಯೆಗಳು ವಿಶಿಷ್ಟವಾಗಿವೆ. ಕನ್ನಡ ಭಾಷೆಯ ಕಲಿಕೆ ಹೈದರಾಬಾದ್ ಕರ್ನಾಟಕೇತರ ಪ್ರದೇಶಗಳಲ್ಲಿಯೂ ಅನೇಕ ಸಮಸ್ಯೆ, ಸವಾಲುಗಳನ್ನು ಎದುರಿಸಿರಬಹುದಾದರೂ ಸಮಸ್ಯೆಗಳ ಸ್ವರೂಪ ಆಯಾ ಪ್ರದೇಶಕ್ಕೆ ಸಂಬಂಧಿಸಿದಂತೆ ಭಿನ್ನವಾಗಿವೆ. ಹೈದರಾಬಾದ್ ಕರ್ನಾಟಕ ಪ್ರದೇಶದ ಕನ್ನಡ ಭಾಷಾ ಕಲಿಕೆಯು ಎದುರಿಸಿದ ಸಮಸ್ಯೆಗಳು, ಉರ್ದು ಭಾಷಾ ಕಲಿಕೆಗೆ ಸಿಕ್ಕ ಪ್ರೋತ್ಸಾಹ ಇತ್ಯಾದಿ ವಿಷಯಗಳು ಇಲ್ಲಿನ ಕಥನ ಸಾಹಿತ್ಯದಲ್ಲಿ ಕಂಡು ಬಂದಿವೆ.

ಪ್ರಭುತ್ವದ ಭಾಷೆಯಾದ ಉರ್ದು ಕಲಿಕೆಯೇ ಈ ಪ್ರದೇಶದಲ್ಲಿ ಪ್ರಚಲಿತವಾಗಿದ್ದ ಕಾಲದಲ್ಲಿ ಅದಕ್ಕೆ ಹೊಂದಿಕೊಂಡ ಶೈಕ್ಷಣಿಕ ಚಟುವಟಿಕೆಗಳು ಈ ಭಾಗದಲ್ಲಿದ್ದವು. ಕನ್ನಡ ಕಲಿಕೆಯೇ ಮರೆತುಹೋಗುವ ಮಟ್ಟದಲ್ಲಿ ಉರ್ದು ಕಲಿಕೆ ಈ ಪ್ರದೇಶವನ್ನು ಆವರಿಸಿತ್ತು. ಸಾಂಪ್ರದಾಯವಾದಿ ಮತೀಯ ಶೈಕ್ಷಣಿಕ ಸಂಸ್ಥೆಗಳು ಈ ಪ್ರದೇಶದಲ್ಲಿದ್ದವು. ಆದರೆ ಪ್ರಭುತ್ವದ ವಿರೋಧವನ್ನು ಕಟ್ಟಿಕೊಳ್ಳದಂತೆ ಉಳಿದಿದ್ದವು. ಬ್ರಾಹ್ಮಣ, ವೀರಶೈವ ಶೈಕ್ಷಣಿಕ ಮಠಗಳು ಈ ಪ್ರದೇಶದಲ್ಲಿ ಕಂಡು ಬಂದವು. ಬ್ರಾಹ್ಮಣ ಶೈಕ್ಷಣಿಕ ಸಂಸ್ಥೆಗಳಲ್ಲಿ ಬ್ರಾಹ್ಮಣ ಮಕ್ಕಳಿಗೆ ಮಾತ್ರವೇ ಅವಕಾಶವಿದ್ದಿತು. ಇಲ್ಲಿನ ಮುಖ್ಯ ಉದ್ದೇಶ ತಮ್ಮ ಜಾತಿಯ ಮಕ್ಕಳನ್ನು ಮತೀಯ ಸಂಸ್ಕಾರಗಳಿಂದ ಬೆಳೆಸುವ, ಪ್ರಭುತ್ವದ ಹಿಡಿತದಲ್ಲಿದ್ದ ಶೈಕ್ಷಣಿಕ ಸಂಸ್ಥೆಗಳು ಹೇರುವ ಮತಾಂತರ, ಅವರ ಸುಂತಿ ಮಾಡಿಸುವ, ಮಾಂಸಾಹಾರ ಸೇವನೆಗೆ ಪ್ರೇರೇಪಿಸುವ ಪ್ರಕ್ರಿಯೆಗಳಿಂದ ಕಾಪಾಡಿಕೊಳ್ಳುವುದಾಗಿತ್ತು. ಬ್ರಾಹ್ಮಣ ಶಾಲೆಗಳು ಉರ್ದು ಕಲಿಕೆಯನ್ನು ಪ್ರೇರೇಪಿಸಿದವೆ ವಿನಹ ಕನ್ನಡ ಕಲಿಕೆಯ ಬಗೆಗೆ ಆಸಕ್ತಿ ತಾಳಲಿಲ್ಲ. ವೀರಶೈವ ಮಠಗಳಲ್ಲಿ ಕನ್ನಡ ಕಲಿಕೆಗೆ ಆದ್ಯತೆ ದೊರೆಯಿತಾದರೂ ಸಂಪೂರ್ಣವಾಗಿ ಉರ್ದು ಭಾಷೆಯ ಕಲಿಕೆಯನ್ನು ವಿರೋಧಿಸುವ ಸ್ಥಿತಿ ಅವುಗಳಿಗಿರಲಿಲ್ಲ. ಉರ್ದು ಭಾಷೆ ನಿಜಾಮು ಸರ್ಕಾರದಲ್ಲಿ ಬಾಳುವವರಿಗೆ ಉದ್ಯೋಗದ ಭರವಸೆಯನ್ನು ನೀಡುತ್ತಿತ್ತು. ಈ ಕಾರಣ ಪ್ರಯೋಜನವಿಲ್ಲದಂತಾಗಿದ್ದ ಕನ್ನಡ ಕಲಿಕೆಗಾಗಿ ಪ್ರಭುತ್ವದ ನಿಷ್ಠುರತೆಗೆ ಯಾರೂ ಒಪ್ಪುತ್ತಿರಲಿಲ್ಲ. ಇಲ್ಲಿನ ವೀರಶೈವ ಶೈಕ್ಷಣಿಕ ಸಂಸ್ಥೆಗಳೇ ಅಷ್ಟಿಷ್ಟು ಕನ್ನಡ ಕಲಿಕೆಯನ್ನು ಯಾವ ಫಲಾಪೇಕ್ಷೆಯಿಲ್ಲದೆಯೂ ಪೋಷಿಸಿಕೊಂಡು ಬಂದವೆಂದರೆ ತಪ್ಪಾಗದು.

ಉರ್ದು ಭಾಷೆಯ ಕಲಿಕೆಯನ್ನು ಪೋಷಿಸುವ ಹಿರಿಯರು ಮತ್ತು ಇಡೀ ಸ್ವಾತಂತ್ರ್ಯ ಸಂಗ್ರಾಮವನ್ನು ವಿರೋಧಿಸುವವರ ಸಂವೇದನೆಗಳು ಹೇಗೆ ನವಾಬನ ಸರಕಾರಕ್ಕೆ ಋಣಿಯಾಗಿತ್ತು ಎಂಬುದನ್ನು 'ಗೋಹರಜಾನ್ ಮಾಲತಿ ಮತ್ತು ನಾನು' (ಚಂದ್ರಕಾಂತ ಕುಸನೂರ) ಕಾದಂಬರಿಯಲ್ಲಿ ಕಂಡುಕೊಳ್ಳ ಬಹುದಾಗಿದೆ. "....ಮಗಾ ನಮ್ಮ ಬಾದಶಾ ಅಂದ್ರ ಅಲಾ ಹಜರತ್ ಸಾಹೇಬ್ರು. ಈ ಸೂರ್ಯ ಚಂದ್ರ ಬೆಳಗೋದು ಅವರ ಪುಣ್ಯಾದಲಿಂದ. ಅವರ ರಾಜ್ಯ ಈ ಬ್ರಹ್ಮಾಂಡ ಇರೋತನಕ ಇರ್ತದೆ. ಅಂದ ಮ್ಯಾಲ ನಾವು ಈ ಕೆಂಪು ಮೋತಿ ಇಂಗ್ರೇಜರ ಭಾಷಾದೊಳ್ಗ ಓದಿ ಏನ್ಮಾಡದದ? ಅವರಿದ್ದಾರೂ ಹೋದಾರು. ಆ ಅರಿಷ್ಟ ಬೊಕ್ಕತಲಿ ಮುದಕ ಅವರ ಬೆನ್ನ ಬಿದ್ದಾನ. ದೇಶಕ್ಕೆ ಸ್ವಾತಂತ್ರ್ಯ ಬೇಕಂತ ಕೇಳಲಿಕತ್ಯಾನ. ಮಂದಿ ಇಂಗ್ರೇಜರ ಬೇಕೋ ಸ್ವಾತಂತ್ರ್ಯ ಬೇಕೋ ಅಂತ ಕೇಳಿದ್ರ ಆ ಹುಚ್ಚ ಪ್ಯಾಲೀಗೊಳು

ಸ್ವಾತಂತ್ರ್ಯಬೇಕು ಇಂಗ್ರೇಜೇರು ಬ್ಯಾಡ ಅಂತಾರಂತ. ಆ ಮುದಕ ಇಲ್ಲಿ ಬರಲಿ ತೋರಸ್ತಿನಂತ. ಕಪ್ಪು ಮೋತಿ, ಕರೀ ಮಂಗ್ಯಾನಂಥವು ರಾಜ್ಯ ಮಾಡ್ತವಂತ ಅವು ಎಷ್ಟೇ ಕೆಟ್ಟಿದ್ರೂ ನಮ್ಮ ಕರೀಮೋತಿ ಕಗಡಿಗೋಳಕಿಂತ ಪಚಾರ ಪಟ್ಟ ಶಾಣೇಗ ಅವ. ಅವು ಹೋದವೂ ಅಂದ್ರ ಇವು ದೇಶಕ್ಕೆ ಹರಕೊಂಡು ತಿಂತಾವ. ಆದ್ರ ಆ ಮುದಕನಿಗೆ ಬುದ್ಧಿ ಮಾತು ಹೇಳುವರು ಯಾರು? ಇವೆಲ್ಲ ತಿಳಿದೇ ನಮ್ಮ ಉಸ್ಮಾನ ಅಲೀಖಾಂ ಸಾಹೇಬ್ರು, ನೀವು ಬ್ಯಾಡ, ನೀವು ಬ್ಯಾಡಾ, ನಾ ಖುದ್ ಮುಖತ್ಯಾರ್ ಇರ್ತೀನಿ ಅಂದಾನ. ಆದ್ಕ ಇಂಥ ಬಾದಾಶಾಹನ ಭಾಷಾ ಬಿಟ್ಟು ಸಾತ ಸಮುದ್ರದಾಚೆಯಿಂದ ಬಂದವ್ರ ಭಾಷಾ ಬ್ಯಾಡ ಮಗನೇ" (ಚಂದ್ರಕಾಂತ ಕುಸನೂರು; ೧೯೮೬; ಪುಟ : ೩೦). ಅನ್ನದ ಋಣಕ್ಕಾಗಿ ಬಾಳುವ ಚಿಕ್ಕಪ್ಪಂದಿರ ಮಾತಿಗೆ ಬೆಲೆಕೊಟ್ಟು ರವೀಂದ್ರ ಉಸ್ಮಾನಿಯಾ ಸೈಡ್ ಎಂದರೆ ಉರ್ದು ಭಾಷೆಯನ್ನೇ ಕಲಿಯುತ್ತಾನೆ. ಈ ರೀತಿ ಉರ್ದು ಕಲಿಕೆಯು ಪ್ರಭುತ್ವದ ಬಗೆಗಿನ ಗೌರವಕ್ಕೆ ಎನ್ನುವುದಷ್ಟೆ ಅಲ್ಲದೆ ಅದು ಬದುಕಿನ ಮುಖ್ಯ ಧ್ಯೇಯವಾದ ಉದ್ಯೋಗದ ಭರವಸೆಯನ್ನು ನೀಡುವಂತಹದ್ದಾಗಿತ್ತು. ಇಂತಹ ಉರ್ದು ಕಲಿಕೆಯೂ ಎಲ್ಲಾ ವರ್ಗದವರಿಗೆ ಸುಲಭವಾಗಿ ದಕ್ಕುವಂತಹದ್ದಾಗಿರಲಿಲ್ಲ. ಸ್ಥಿತಿವಂತರಾದ ಉನ್ನತ ವರ್ಗದವರು ಉರ್ದು ಭಾಷೆಯ ಕಲಿಕೆಯಲ್ಲಿ ಆಸಕ್ತಿವಹಿಸಿದರು. ಈ ಸಂದರ್ಭದಲ್ಲಿ ಉರ್ದು ಒಂದು ಜನಾಂಗದ ಭಾಷೆಯಾಗಿ ಮಾತ್ರವೇ ಸೀಮಿತಗೊಂಡಿರಲಿಲ್ಲ.

ಹಿಂದೂ - ಮುಸ್ಲಿಂ ಭೇದವಿಲ್ಲದ ಉರ್ದು ಶಿಕ್ಷಣ ಈ ಸಂದರ್ಭದಲ್ಲಿ ಎಲ್ಲರ ಬೇಡಿಕೆಯಾಗಿತ್ತು. ಜಾತಿಭೇದವನ್ನು, ತಾರತಮ್ಯತೆಯನ್ನು ವಿರೋಧಿಸುವ ಶೈಕ್ಷಣಿಕ ಸಂಸ್ಥೆಗಳಲ್ಲಿನ ವಿದ್ಯಾರ್ಥಿಗಳು ಕನ್ನಡ ಕಲಿಕೆಗಾಗಿ ಹೋರಾಟಕ್ಕಿಳಿದಿರುವ ಮಾಹಿತಿಗಳು ಕಥನಸಾಹಿತ್ಯದಲ್ಲಿ ಕಂಡು ಬರುವುದಿಲ್ಲ. ಅಷ್ಟೋ ಇಷ್ಟೋ ಜೈಮಿನಿ ಭಾರತ ಓದುವವರೆಗೆ ಕನ್ನಡ ಕಲಿಕೆಯು ಉಳಿದುಹೋಗುವ, ಹಾಗೆ ಓದಿಕೊಂಡವ ರಿಂದಲೂ ಅಂತಹ ದೊಡ್ಡ ಸಾಧನೆಯೂ ಸಾಧ್ಯವಾಗದೆ ಇರುವುದು ಇಲ್ಲಿನ ಕತೆಗಳಲ್ಲಿ ಕಂಡುಬರುತ್ತದೆ. ಸಾಮಾಜಿಕವಾಗಿ ಈ ಸಂದರ್ಭದಲ್ಲಿ ಕನ್ನಡ ಕಲಿಕೆಗೆ ಸಂಬಂಧಿಸಿದಂತೆ ಹೋರಾಟಗಳು ನಡೆದಿರಬಹು ದಾದರೂ ಕಥನ ಸಾಹಿತ್ಯದಲ್ಲಿ ಈ ಬಗ್ಗೆ ಹೆಚ್ಚಿನ ಮಾಹಿತಿಗಳು ಸಿಗುವುದಿಲ್ಲ. ಸ್ವಾತಂತ್ರನಂತರದ ಸಂದರ್ಭದಲ್ಲಿಯೂ ಕನ್ನಡ ಭಾಷೆಗೆ ಹೆಚ್ಚಿನ ಆದ್ಯತೆ ದೊರೆಯದೆ ಇದ್ದುದನ್ನು ಕಥನ ಸಾಹಿತ್ಯದಲ್ಲಿ ತಿಳಿದುಕೊಳ್ಳಬಹುದಾಗಿದೆ. ಸ್ವತಂತ್ರ ಭಾರತದಲ್ಲಿ ಒಂದಾದ ಹೈದರಾಬಾದ್ ಕರ್ನಾಟಕದ ಆಡಳಿತವು ಬ್ರಿಟಿಷರ ಆಡಳಿತವನ್ನೇ ರೂಢಿಸಿಕೊಂಡಿದ್ದ ಭಾರತದ ಉಳಿದ ಪ್ರದೇಶಗಳ ಆಡಳಿತ ಪದ್ಧತಿಗೆ ಹೊಂದಿ ಕೊಳ್ಳುವ ಪರಿಸ್ಥಿತಿ ಕಂಡುಬಂದಿತು. ಉರ್ದು ಭಾಷೆಯನ್ನೇ ನಂಬಿಕೊಂಡಿದ್ದವರ ಸ್ಥಿತಿ ಈ ಸಂದರ್ಭದಲ್ಲಿ ಅತಂತ್ರವಾಯಿತು. ಉರ್ದುವಿನ ನಂತರದ ಸ್ಥಾನವನ್ನು ಇಂಗ್ಲೀಷ್ ಭಾಷೆ ಪಡೆಯಿತೇ ಹೊರತು ಕನ್ನಡ ಪಡೆಯಲಿಲ್ಲ. ಆಡಳಿತಾತ್ಮಕವಾಗಿ ಅಗತ್ಯವಾಗಿ ಬೇಕಾಗಿದ್ದ ಇಂಗ್ಲಿಷ್ ಭಾಷೆಯ ಕಲಿಕೆ ಇದರಿಂದ ಈ ಭಾಗದಲ್ಲಿ ಪ್ರಚೋದನೆ ಪಡೆಯಿತು. 'ಗೋಹರಜಾನ್ ಮಾಲತಿ ಮತ್ತು ನಾನು' (ಚಂದ್ರಕಾಂತ ಕುಸನೂರು) ಕಾದಂಬರಿಯಲ್ಲಿ ಈ ವಿಷಯದ ಬಗೆಗೆ ಸ್ಪಷ್ಟವಾದ ಮಾಹಿತಿ ದೆರೆಯುತ್ತದೆ. ರವೀಂದ್ರ ಶಿಕ್ಷಣ

ಇಲಾಖೆಯಲ್ಲಿ ಗುಮಾಸ್ತನಾಗಿ ಕೆಲಸಕ್ಕೆ ಸೇರಿದ ಮೊದಲ ಹಿಂದೂ ಧರ್ಮೀಯನಾಗಿರುತ್ತಾನೆ. ಆರಂಭದಲ್ಲಿ ಕಛೇರಿಯಲ್ಲಿ ಮುಸ್ಲಿಂ ಕೆಲಸಗಾರರ ಮಧ್ಯೆ ಅನೇಕ ಮುಜುಗರದ ಪರಿಸ್ಥಿತಿಗಳನ್ನು ಎದುರಿಸಬೇಕಾಗುತ್ತದೆ. ಸ್ವಾತಂತ್ರ್ಯನಂತರದ ದಿನಗಳಲ್ಲಿ ಅವನಿಗೆ ಇಂಗ್ಲಿಷ್ ಬರುವ ಕಾರಣ ಕಛೇರಿಯಲ್ಲಿ ಮುಸ್ಲಿಂರಿಗಿಂತ ಈತನ ಸ್ಥಾನ ಹೆಚ್ಚು ಭದ್ರಗೊಳ್ಳುತ್ತದೆ ಈತನ ಇಬ್ಬರೂ ಚಿಕ್ಕಪ್ಪಂದಿರಾದ ವಿಠೋಬರಾಯ, ಮುರಳೀಧರ ರಾಯ ನಿಜಾಮ ಸರ್ಕಾರದಲ್ಲಿ ಒಬ್ಬರು 'ಬೇಲೀಫ್' ಆಗಿ ಇನ್ನೊಬ್ಬರು 'ಕಾಪಿಯಿಸ್ಟ್' ಹುದ್ದೆಯಲ್ಲಿ ರುತ್ತಾರೆ. ಇಂಗ್ಲೀಷ್ ಬರದ ಕಾರಣ ಇವರಿಗೂ ನೌಕರಿಯ ಅಭದ್ರತೆಯ ಸಮಸ್ಯೆ ಕಾಡುತ್ತದೆ.

ಕನ್ನಡ ಭಾಷೆಯ ಕಲಿಕೆಯು ಈ ಭಾಗದಲ್ಲಿ ಸಂಪೂರ್ಣವಾಗಿ ಆಡಳಿತದಿಂದ ನಿಯಂತ್ರಿಸಲ್ಪಟ್ಟಿತ್ತು. ಈ ನಿಯಂತ್ರಣದ ಬಗೆಗೆ ಜನಸಾಮಾನ್ಯರಿಂದಾಗಲಿ, ವಿದ್ಯಾವಂತರಿಂದಾಗಲಿ ಯಾವುದೇ ರೀತಿಯ ವಿರೋಧ ಕಂಡುಬಂದಂತೆ ಕಾಣುವುದಿಲ್ಲ. ಆದರೆ ಕನ್ನಡ ಕಲಿಸಬೇಕೆನ್ನುವವರು ಕಲಿಯಬೇಕೆಂಬ ಅಭಿಪ್ರಾಯ ಉಳ್ಳವರು ಇಬ್ಬರೂ ಸಮಸ್ಯೆಗಳನ್ನು ಎದುರಿಸಲಾರರು ಎಂದು ಹೇಳಲಾಗದು. ಉರ್ದುವಿನ ಹೊರತು ಇಂಗ್ಲಿಷ್ ಕಲಿಕೆಗೂ ಹೆಚ್ಚಿನ ಪ್ರೋತ್ಸಾಹ ಈ ಭಾಗದಲ್ಲಿ ಕಂಡುಬಂದಿಲ್ಲ, ಏಕೀಕರಣ ಸಂದರ್ಭ, ಅನಂತರ ಕನ್ನಡ ಕಲಿಕೆಯ ಬಗ್ಗೆ ಮೂಡಿದ ಜಾಗೃತಿ ಎದುರಿಸಿದ ಸಮಸ್ಯೆಗಳು ಕಥನ ಸಾಹಿತ್ಯದಲ್ಲಿ ಅಷ್ಟಾಗಿ ಕಂಡುಬರುವುದಿಲ್ಲ. ಇದರಿಂದ ಇಲ್ಲಿನ ಕನ್ನಡಿಗರಿಗೆ ಕನ್ನಡ ಭಾಷೆಯ ಬಗೆಗೆ ಅಭಿಮಾನವೇ ಇಲ್ಲವೆಂಬ ನಿರ್ಣಯಕ್ಕೆ ಬರಲಾಗದು. ಸ್ವಾತಂತ್ರ್ಯನಂತರದ ದಿನಗಳಲ್ಲಿ ಈ ಭಾಗದಲ್ಲಿ ಕನ್ನಡ ಸಾಹಿತ್ಯ ಕಾಣಿಸಿಕೊಂಡದ್ದು ಯಾವ ಪಲಾಫೇಕ್ಷೆಯಿಲ್ಲದೆ, ಸರಕಾರಿ ನೌಕರಿಯ ಅಪೇಕ್ಷೆಯಿಲ್ಲದೆ ಕನ್ನಡ ಕಲಿತವರ ಭಾಷಿಕ ಅಭಿಮಾನವನ್ನೇ ಸೂಚಿಸುತ್ತದೆ. ತೀವ್ರವಾದ ರಜಾಕಾರರ ಹಾವಳಿ ಸ್ಥಳೀಯ ಜನರ ಸ್ವಾರ್ಥ, ಸ್ವತಂತ್ರ್ಯ ಹೋರಾಟಗಾರರಿಗಾದ ಅನ್ಯಾಯ ಇತ್ಯಾದಿ ಸಂವೇದನೆಗಳನ್ನು ಪ್ರಾದೇಶಿಕವಾದ ವಿವರಗಳೊಂದಿಗೆ ತೆರೆದಿಡುವ ಶಾಂತರಸರ ಕಥನ ರೀತಿ ವಿಶಿಷ್ಟವಾಗಿದೆ. ನಿಜಾಮ ಮನೆತನಗಳಿಗುಂಟಾದ ಅವನತಿ, ಬದಲಾದ ಹೈದರಾಬಾದ್ ಕರ್ನಾಟಕದ ಸ್ಥಿತಿ, ಪ್ರಜಾಪ್ರಭುತ್ವದ ಬಗೆಗಿನ ಆತಂಕ, ರಾಷ್ಟ್ರೀಯತೆ ದೇಶ ವಿಭಜನೆ ಇತ್ಯಾದಿ ವಿಷಯಗಳನ್ನುಕುರಿತ ಸಂವೇದನೆಗಳನ್ನು ತಿಳಿಸುವ ಜಯತೀರ್ಥರಾದ ಪುರೋಹಿತರ ಕಥನ ರೀತಿಯೂ ಭಿನ್ನವಾದದ್ದು. ಇಡಿಯಾಗಿ ಅಲ್ಲದಿದ್ದರೂ ಬಿಡಿಯಾಗಿ ದೇಶ ಭಾಷೆಯ ವಿಚಾರಗಳನ್ನು ಕುರಿತು ಚರ್ಚಿಸುವ ಚಂದ್ರಕಾತ ಕುಸನೂರರ ನಿರೂಪಣೆಯ ರೀತಿಯೂ ವಿಶಿಷ್ಟವಾಗಿದೆ. ಇಲ್ಲಿನ ಕಥನವು ಹೈದರಾಬಾದ್ ಕರ್ನಾಟಕದ ಮುಕ್ತಿ ಹೋರಾಟದೊಂದಿಗೆ ರಾಷ್ಟ್ರದ, ದೇಶವನ್ನು ಕುರಿತ ಸಂವೇದನೆಗಳ ಅಭಿವ್ಯಕ್ತಿಯನ್ನು ತನ್ನದಾಗಿಸಿಕೊಂಡಿದೆ. ಚಾರಿತ್ರಿಕವಾದ ಘಟನೆಗೆ ಸ್ಮರಣೆರೂಪದ ಸಾಹಿತ್ಯಿಕ ಅಭಿವ್ಯಕ್ತಿ ಕಂಡುಬಂದಿದೆ ಎಂದುಕೊಳ್ಳಬಹುದಾದರೂ ಇದು ವಿಪ್ಲವ ಕಾಲದಲ್ಲಿಯೇ ಕನ್ನಡ ಸಾಹಿತ್ಯ ಈ ಪ್ರದೇಶ ದಲ್ಲಿ ಇದ್ದಿದ್ದರೆ ಆ ಬರವಣಿಗೆಯಲ್ಲಿ ಕಾಣಬಹುದಾಗಿದ್ದ ತೀವ್ರತೆಯನ್ನೇ ಸೂಚಿಸುತ್ತದೆ. ಶಾಂತರಸ, ಜಯತೀರ್ಥರಾಜ ಪುರೋಹಿತ, ಚಂದ್ರಕಾಂತ ಕುಸನೂರ, ಇನ್ನೂ ಅನೇಕ ಕಥನಕಾರರು ಪ್ರಗತಿಶೀಲ

ಸಾಹಿತ್ಯಿಕ ಸಂದರ್ಭದಲ್ಲಿ ಕಂಡು ಬಂದಿರುವಂತವರು. "ನವೋದಯದ ಆರಂಭಕಾಲದ ಬಸವಪ್ಪಶಾಸ್ತ್ರಿ, ಎಸ್.ಜಿ. ಶಾಸ್ತ್ರಿ, ಗುಲ್ವಾಡಿ ವೆಂಕಟರಾವ್, ಗಳಗನಾಥ ಮುಂತಾದವರು ಕನ್ನಡಕ್ಕೆ ಭಾಷಾಂತರಿಸಿದ ಇಂಗ್ಲೀಷ್, ಬಂಗಾಳಿ, ಮರಾಠಿ ಕೃತಿಗಳು ರಾಷ್ಟ್ರೀಯ ಸಾಹಿತ್ಯವೆನಿಸಿಕೊಂಡರೂ, ಭಾಷೆಯೊಂದನ್ನುಳಿದು ಅವು ಉಪರಾಷ್ಟ್ರೀಯ ಸಾಹಿತ್ಯ ಕೃತಿಗಳೆಂದು ಹೇಳಲಾಗುವುದಿಲ್ಲ. ಯಾಕೆಂದರೆ ಅವುಗಳಲ್ಲಿ ಕರ್ನಾಟಕದ ಪ್ರಾದೇಶಿಕ ವೈವಿಧ್ಯತೆ ಇಲ್ಲ. ಆದರೆ ನವೋದಯ ಗರಿಗಟ್ಟಿಕೊಂಡ ಕಾಲಕ್ಕೆ ಈ ಪರಿಸ್ಥಿತಿ ಬದಲಾಯಿತು. ಪಾಶ್ಚಾತ್ಯ ನವೋದಯ ಮತ್ತು ಆ ಸಂಪರ್ಕದಿಂದುಂಟಾದ ಭಾರತೀಯ ನವೋದಯ - ರಾಷ್ಟ್ರೀಯತೆಗಳ ಚೌಕಟ್ಟಿನಲ್ಲಿ ತನ್ನದೇ ಆದ ದೇಶೀ ಸೊಗಡು-ಸೊಗಸುಗಳನ್ನು ಈ ಕಾಲದ ಸಾಹಿತ್ಯಾಭಿವ್ಯಕ್ತಿಯಲ್ಲಿ ಕಾಣಬಹುದು" (ಚಂದ್ರಶೇಖರ್.ಎಸ್; ೧೯೯೯; ಪುಟ : ೨೨). ರಾಷ್ಟ್ರೀಯತೆ, ನಾಡು-ನುಡಿಯ ವಿಷಯಗಳನ್ನು ಕುರಿತಾಗಿ ನವೋದಯ ಸಾಹಿತ್ಯದಲ್ಲಿ ಸಿಕ್ಕ ಅಭಿವ್ಯಕ್ತಿಯಂತೆಯೇ ಪ್ರಗತಿಶೀಲ ಸಾಹಿತ್ಯದ ಹೈದರಾಬಾದ್ ಕರ್ನಾಟಕದ ಸಾಹಿತ್ಯದಲ್ಲಿ ನಾಡು-ನುಡಿಯ ಅಭಿವ್ಯಕ್ತಿ ಕಂಡು ಬರುತ್ತದೆ. ಉಪರಾಷ್ಟ್ರೀಯ ಸಾಹಿತ್ಯ ಕೃತಿಗಳೆಂದು ಹೈದರಾಬಾದ್ ಕರ್ನಾಟಕದ ಪ್ರಗತಿಶೀಲ ಸಂದರ್ಭದ ಕಥನ ಸಾಹಿತ್ಯವನ್ನು ಒಪ್ಪುವುದರಲ್ಲಿ ಗಟ್ಟಿತನವಿದೆ. ಈ ಪ್ರದೇಶದ ಪ್ರಗತಿಶೀಲ ಸಾಹಿತಿಗಳು ವಾಸ್ತವ ಪರಿಸ್ಥಿತಿಯೊಂದಿಗೆ ಗತಕಾಲದ ತಲ್ಲಣಗಳನ್ನು ಕಥನ ಸಾಹಿತ್ಯದಲ್ಲಿ ಅಭಿವ್ಯಕ್ತಿಸಿದ್ದಾರೆ. ಅಭಿವ್ಯಕ್ತಿಯಲ್ಲಿ ಒಬ್ಬರಿಂದ ಒಬ್ಬರಿಗೆ ಅಂತರವಿದೆಯಾದರೂ ಪ್ರಗತಿಶೀಲ ಸಂದರ್ಭದಲ್ಲಿ ವಿಶಿಷ್ಟತೆಯನ್ನು ಕಾಯ್ದುಕೊಂಡಿದ್ದಾರೆ. ನಿಜಾಮ ಪ್ರದೇಶದ ಪ್ರಗತಿಶೀಲ ಸಾಹಿತ್ಯಕ್ಕೂ, ನಿಜಾಮ ಪ್ರದೇಶದ ಹೊರಗಿನ ಪ್ರಗತಿಶೀಲ ಸಾಹಿತ್ಯಕ್ಕೂ ಈ ಕಾರಣಕ್ಕೆ ವ್ಯತ್ಯಾಸವಿದೆ. ಪ್ರಗತಿಶೀಲ ಸಾಹಿತ್ಯದ ಮುಖ್ಯ ಧೋರಣೆಗಳಾಗಿದ್ದ ಆರ್ಥಿಕ ಅಸಮಾನತೆಯ ವಿರೋಧ, ಮನುಷ್ಯ ಬದುಕಿನ ನೋವು ಅಸಹಾಯಕತೆ, ದುಡಿಯುವ ವರ್ಗದ ಸಂಕಷ್ಟಗಳು ಇತ್ಯಾದಿ ಚಿತ್ರಣಗಳು ಕಥನ ಸಾಹಿತ್ಯದಲ್ಲಿ ಕಂಡು ಬಂದವು. ಸಾಹಿತ್ಯಿಕವಾಗಿ ಕಂಡುಬಂದ ಮುಖ್ಯಧೋರಣೆಗಳೊಂದಿಗೆ ಹೈದರಾಬಾದ್ ಕರ್ನಾಟಕ ಬರಹಗಾರರು ತಮ್ಮ ನೆಲದ ಬದುಕನ್ನು ತೆರೆದಿಟ್ಟಿರುವುದು ಅಭಿಮಾನದ ಸಂಕೇತವಾಗಿದೆ.

ನವವಸಾಹತುಶಾಹಿ ಸಂದರ್ಭದ ಪ್ರಾದೇಶಿಕ ಅನುಭವಗಳನ್ನು ಕುಂ. ವೀರಭದ್ರಪ್ಪನವರ 'ಅರಮನೆ' ಕಾದಂಬರಿ ತಿಳಿಸುತ್ತದೆ. ಬಳ್ಳಾರಿ ಸುತ್ತಮುತ್ತಲಿನ ಸಣ್ಣ ಪುಟ್ಟ ಪಾಳೆಗಾರರು, ಪ್ರಾಂತೀಯ ಅರಸರು, ಬ್ರಿಟಿಷ್ ಅಧಿಕಾರಿಯಾಗಿದ್ದ ಮನ್ರೋ ಸಾಹೇಬನ ಹಿಡಿತದ ಗೊಂಬೆಗಳಾಗಿದ್ದರು. ಬ್ರಿಟಿಷ್ ಆಳ್ವಿಕೆಯ ಸಂದರ್ಭ ಈ ಪ್ರದೇಶದಲ್ಲಿ ಅನೇಕ ರೀತಿಯ ಸಾಮಾಜಿಕ ಬದಲಾವಣೆಗಳು ಕಂಡುಬಂದವು. ಸಾರಿಗೆ ವ್ಯವಸ್ಥೆ, ಶೈಕ್ಷಣಿಕ ವ್ಯವಸ್ಥೆಗಳು ವಸಾಹತುಶಾಹಿಗಳ ಜನಾಕರ್ಷಣೆಯ ಹುನ್ನಾರಗಳಾಗಿಯೇ ಕಂಡಬಂದವು. ಥಾಮಸ್ ಮನ್ರೋನ ಆಳ್ವಿಕೆ ಜನಪ್ರೀತಿಯನ್ನು ಗಳಿಸಿತು, ಅದರೊಂದಿಗೆ ಆಳದ ತನ್ನ ಆಡಳಿತದ ದುರುದ್ದೇಶಗಳನ್ನು ಈಡೇರಿಸಿಕೊಳ್ಳುವಲ್ಲಿ ವಿಫಲವಾಯಿತು. ಪ್ರಭುತ್ವವನ್ನು ವಿರೋಧಿಸಿದ ಜನರು ಬ್ರಿಟಿಷ್

ಆಳ್ವಿಕೆಯನ್ನು ವಿರೋಧಿಸುತ್ತಾರೆ. ರಾಜರುಗಳ ಸ್ಥಾನದಲ್ಲಿ ಬ್ರಿಟಿಷ್ ಅಧಿಕಾರಿಗಳು ಆಡಳಿತ ನಿರ್ವಹಣೆಗೆ ಬಂದಾಗ ಅವರನ್ನು ವಿರೋಧಿಸುವ ಜನ ಹೊಸ ಪ್ರಜ್ಞೆಗೆ ಜಾಗೃತರಾದದ್ದು ತಿಳಿದುಬರುತ್ತದೆ. ವಸಹಾತುಶಾಹಿ ಸಂದರ್ಭದ ಪ್ರಾದೇಶಿಕ ಅನುಭವಗಳನ್ನು ತಿಳಿಸುವ ಕುಂ. ವೀರಭದ್ರಪ್ಪನವರ ಕಾದಂಬರಿಯು ಗತಕಾಲದ ವಿಷಯಕ್ಕೆ ತನ್ನದೇ ಆದ ವಾಸ್ತವಿಕ ನಿರೂಪಣೆಯನ್ನು ನೀಡಿದೆ. ಪ್ರಾದೇಶಿಕವಾಗಿ ವಸಾಹತುಶಾಹಿಗಳಿಂದುಂಟಾದ ಪರಿಣಾಮಗಳನ್ನು ತಿಳಿಸುವುದು ಆ ಸಂದರ್ಭಕ್ಕೆ ಸಂಬಂಧಿಸಿದಂತೆ ಬೇರೆ ಬೇರೆ ಪ್ರದೇಶಗಳ ಅನುಭವಗಳಲ್ಲಿ ಇದು ಗಣನೆಗೊಳಗಾಗುವಂತಹದ್ದಾಗಿದೆ. ಪ್ರದೇಶದ ವ್ಯಾಪ್ತಿಯಲ್ಲಿಯೇ ಇದ್ದು ದೇಶದ ಬಗೆಗಿನ ಅಭಿಮಾನವನ್ನು ಅಭಿವ್ಯಕ್ತಿಸುವ ರೀತಿ ವಿಶಿಷ್ಟವಾಗಿದೆ. "…. ಆ ನಿರಂಕುಶರಿಗೇನು ಗೊತ್ತು ಯಿಂಡಿಯಾ ಅಂದರೇನೆಂಬುದು? ಯಿಂಡಿಯಾದೊಳಗೆ ಮನುಕುಲವು ನಿಸರ್ಗದೊಂದಿಗೆ ಸಾಯುಜ್ಯ ಹೊಂದಲು ಸದಾ ಹಾತೊರೆಯುತ್ತಿದೆಯೆಂಬುದು. ಯಿಂಡಿಯಾ ಅಂದರ ಜೀವ ಜಗತ್ತು, ಸಸ್ಯಜಗತ್ತು ಮತ್ತು ಅಲವುಕಿಕ ಜಗತ್ತುಗಳ ತ್ರಿವೇಣಿ ಸಂಗಮ ಯಂಬುದು; ಭೂತಕಾಲದಿಂದ ಬೇರು ಪಡಿಸಿದಲ್ಲಿ ಯಿಂಡಿಯಾಕ್ಕೆ ಅಸ್ತಿತ್ವ ಯಂಬುದೇ ಯಿರುವುದಿಲ್ಲಯಂಬುದು. ಯೀ ಪ್ರಕಾರವಾಗಿ ಥಾಮಸು ಮನ್ರೋ ತನ್ನ ಮೇಲಾಧಿಕಾರಿಗಳಿಗೆ ವನದಟ್ಟು ಮಾಡಿಕೊಡುವಲ್ಲಿ ಸದಾ ತಿಪ್ಪರಲಾಗ ಹಾಕುತ್ತಿದ್ದನು" (ಕುಂ. ವೀರಭದ್ರಪ್ಪ; ೨೦೦೫; ಪುಟ : ೪೫೬).

ಅನ್ಯಆಕ್ರಮಣದಲ್ಲಿ ಪ್ರಾದೇಶಿಕ ಅಭಿಮಾನದ ಜೊತೆಗೆ ದೇಶದ ಬಗೆಗಿನ ಅಭಿಮಾನವು ಕಂಡುಬರುತ್ತಿರುವುದನ್ನು ಇಲ್ಲಿನ ಕಥನ ತಿಳಿಸುತ್ತದೆ. ನಿಜಾಂ ಆಳ್ವಿಕೆಗೆ ಒಳಗಾಗದ ಬಳ್ಳಾರಿ ಪ್ರಾಂತ್ಯದಲ್ಲಿ ಬ್ರಿಟಿಷ್ ಆಡಳಿತದ ಹೇರಿಕೆಗಳು ಕಂಡುಬಂದ ರೀತಿಯನ್ನು ತಿಳಿಸುವಲ್ಲಿ ಪ್ರಾದೇಶಿಕ ಭಿನ್ನತೆಗಳಿವೆ. ಆದರೆ ದೇಶದ ಅಭಿಮಾನಕ್ಕೆ ಸಂಬಂಧಿಸಿದ ಸಂವೇದನೆಯು ಎರಡೂ ಪ್ರದೇಶಗಳಲ್ಲಿ ಏಕರೂಪತೆಯನ್ನು ಪಡೆದಿದೆ.

ಕೇವಲ ಆದರ್ಶದ ನೆಲೆಯಲ್ಲಿ ಭಾವೋದ್ವೇಗಕ್ಕೆ ಒಳಗಾಗಿ ನಾಡು-ನುಡಿಯ ಬಗೆಗೆ ಹೊಗಳುವ ಸಾಹಿತ್ಯಕ್ಕಿಂತ ಈ ಪ್ರದೇಶದ ಸಾಹಿತ್ಯದಲ್ಲಿನ ನಾಡು-ನುಡಿಯ ಅಭಿವ್ಯಕ್ತಿ ವಿಶಿಷ್ಟವಾಗಿದೆ. ಸ್ವಾತಂತ್ರ್ಯ ಸಿಕ್ಕಿತೆಂಬ ನಿರುಂಬಳ ಇಲ್ಲಿನ ಕಥನ ಸಾಹಿತ್ಯದಲ್ಲಿ ಕಾಣುವುದಿಲ್ಲ. ಏಕೆಂದರೆ ಸ್ವಾತಂತ್ರ್ಯ ಹೋರಾಟದ ನಂತರ ಸ್ವಾತಂತ್ರ್ಯ ಹೋರಾಟಗಾರರಿಗೆ ರಾಜ್ಯ ಸಿಗದೆ ದೇಶದ್ರೋಹಿಗಳಿಗೆ, ಅವಕಾಶವಾದಿಗಳ ಕೈಗೆ ಅಧಿಕಾರ ಸಿಕ್ಕಿತು. ಇನ್ನೂ ನಿಜಾಮ ಸರಕಾರವನ್ನು ಬಯಸಿದ್ದ ಕೆಲ ಮತಾಂಧರಿಂದಲೂ ಪ್ರದೇಶದ ರಾಜಕೀಯವು ವಿರೋಧವನ್ನು ಎದುರಿಸಿದೆ ಉಳಿದಿದೆ ಎಂದು ಹೇಳಲಾಗದು. ಇಂತಹ ವಾತಾವರಣದಲ್ಲಿ ಅದು ಸಮರ್ಥರಲ್ಲದವರ ಕೈಯಲ್ಲಿ ಸಿಕ್ಕಿ ಪ್ರಜಾಪ್ರಭುತ್ವದಿಂದ ಈ ಪ್ರದೇಶ ಯಾವ ಅಭಿವೃದ್ಧಿಯನ್ನು ಕಾಣದೆ ಉಳಿದಿರುವುದು ವಾಸ್ತವಿಕ ಸತ್ಯ. ಸ್ವಾತಂತ್ರ್ಯ ನಂತರವೂ ಈ ಪ್ರದೇಶದ ತಲ್ಲಣಗಳಿಗೆ ಸ್ಪಂದಿಸಿದ ಇಲ್ಲಿನ ಸಾಹಿತ್ಯ ಏಕೀಕರಣಕ್ಕೆ ಸಂಬಂಧಿಸಿದಂತೆ ಮೌನವಹಿಸಿದೆ. ನಾಡು-ನುಡಿಗೆ ಸಂಬಂಧಿಸಿದಂತೆ ಈ

ಪ್ರದೇಶದ ಕಥನ ಸಾಹಿತ್ಯದಲ್ಲಿ ಅಭಿವ್ಯಕ್ತಗೊಂಡಿರುವ ವಿಚಾರಗಳು ಭಾರತದ ಸ್ವಾತಂತ್ರ್ಯ ಹೋರಾಟದ ವಿಭಿನ್ನ ಆಯಾಮಗಳಲ್ಲಿ ಸೇರ್ಪಡೆಯಾಗುವಂತಹದ್ದು. ಭಾರತ ಸ್ವಾತಂತ್ರ್ಯ ಹೋರಾಟಕ್ಕಿರುವ ಸಾರ್ವತ್ರಿಕ ಮನ್ನಣೆ ಈ ಪ್ರಾದೇಶಿಕ ಹೋರಾಟಕ್ಕಿದೆ. ಸ್ವಾತಂತ್ರ್ಯ ಹೋರಾಟವೆಂದಾಗ ಭಾರತ ಸ್ವಾತಂತ್ರ್ಯ ಹೋರಾಟವೆಂದೆ ತಿಳಿಯುವಲ್ಲಿ ಇಂತಹ ಪ್ರಾದೇಶಿಕ ಹೋರಾಟಗಳು ಕಡೆಗಣಿತವಾಗದಿರಲೆಂಬುದೆ ಇಲ್ಲಿನ ಮುಖ್ಯ ಆಶಯವಾಗಿದೆ.

•••

## ಅಧ್ಯಾಯ ನಾಲ್ಕು

# ಕಥನ ಸಾಹಿತ್ಯ ಮತ್ತು ಪ್ರಾದೇಶಿಕ ಸಮುದಾಯಗಳ ಸಂವೇದನೆ

ಸಮುದಾಯಗಳು ತಮ್ಮದೇ ಆದ ರೀತಿ-ನೀತಿಗಳಿಂದಾಗಿ ವಿಶಿಷ್ಟತೆಯನ್ನು ಪಡೆದುಕೊಂಡಿರುತ್ತವೆ. ಪ್ರಾದೇಶಿಕ ಸಮುದಾಯಗಳು ಎನ್ನುವ ಸಂದರ್ಭದಲ್ಲಿ ನಿರ್ದಿಷ್ಟ ಪ್ರದೇಶದ ಹಿನ್ನೆಲೆಯಲ್ಲಿ ಸಮುದಾಯಗಳ ವಿಶಿಷ್ಟತೆಯನ್ನು ಗುರುತಿಸಬೇಕಾಗುತ್ತದೆ. ಒಂದು ಪ್ರದೇಶದಲ್ಲಿ ಕಂಡುಬರುವ ಸಮುದಾಯಗಳು ಅನ್ಯಪ್ರದೇಶದಲ್ಲಿ ಕಂಡುಬರದೆ ಇರಬಹುದು. ಹಾಗೊಂದು ವೇಳೆ ಕಂಡು ಬಂದಾಗ್ಯೂ ಪರಿಸರಕ್ಕನುಗುಣ ವಾಗಿ ಭಿನ್ನತೆಯನ್ನು ಹೊಂದಿರುವ ಸಾಧ್ಯತೆಗಳು ಇರುತ್ತವೆ. ಒಂದು ನಿರ್ದಿಷ್ಟ ಪ್ರದೇಶದ ಒಳಗೆ ಸಮುದಾಯಗಳು ಭಿನ್ನವಾಗಿರುವ ಸಾಧ್ಯತೆಗಳು ಇವೆ. ಸಮುದಾಯಗಳು ನಿರ್ದಿಷ್ಟ ಪ್ರದೇಶ, ಅವುಗಳದ್ದೇ ಆದ ರೀತಿ-ನೀತಿಗಳ ಹಿನ್ನೆಲೆಯಲ್ಲಿ ವಿಶಿಷ್ಟತೆಯನ್ನು ಪಡೆಯುತ್ತವೆ. ಇಂತಹ ವಿಶಿಷ್ಟತೆಗಳು ಅದರ ಸಂವೇದನೆಯ ಅಭಿವ್ಯಕ್ತಿಗೆ ಕಾರಣವಾಗುವಂತಹದ್ದು. ಸಮುದಾಯದ ಸಂವೇದನೆಯೊಂದು ಅದು ಅನ್ಯಸಮುದಾಯದೊಂದಿಗೆ ಹೊಂದಿರುವ ಅಂತರದಿಂದಾಗಿಯೇ ರೂಪುಗೊಳ್ಳುತ್ತದೆ. ಇದರಾಚೆಗೆ ಮನುಷ್ಯ ಬದುಕಿನ ಸಮಾನ ಸಂವೇದನೆಗಳು ಎಲ್ಲಾ ಸಮುದಾಯಗಳಿಗೂ ಅನ್ವಯಿಸುವಂತವುಗಳು. ಸಮುದಾಯಗಳ ನೋವು, ನಷ್ಟ, ಅಂತ್ಯ ಎಂಬ ನಕಾರಾತ್ಮಕ ಅಂಶಗಳನ್ನು ಮಾತ್ರ ಇಲ್ಲಿ ಸಂವೇದನೆಯೆಂದು ಪರಿಗಣಿಸ ಲಾಗಿಲ್ಲ. ಸಮುದಾಯಗಳ ಅಂತಃಶಕ್ತಿ, ಪ್ರಜ್ಞೆಯ ಜಾಗೃತಿ, ಹಬ್ಬದ ಸಂಭ್ರಮ ಇತ್ಯಾದಿ ಅಂಶಗಳನ್ನೂ ಸಂವೇದನೆಗಳೆಂದು ತಿಳಿಯಲಾಗಿದೆ.

ಸಮುದಾಯಗಳ ಸಂವೇದನೆಯನ್ನು ಕಥನ ಸಾಹಿತ್ಯದಲ್ಲಿ ತರುವ ಮುಖ್ಯ ತುರ್ತು ಅವುಗಳ ಪ್ರತಿಷ್ಠೆಯ, ಅಸ್ಮಿತತೆಯ ಬಿಂಬಿಸುವಿಕೆ ಮಾತ್ರವೇ ಆಗಿಲ್ಲ. ಈ ಪ್ರದೇಶದ ಸಮುದಾಯಗಳನ್ನು ಅನ್ಯ ಪ್ರದೇಶದ ಸಮುದಾಯಗಳೊಂದಿಗೆ ಸರಿ ಮಿಗಿಲಾಗಿ ಗುರುತಿಸುವುದು ಹಾಗೂ ಪ್ರಾದೇಶಿಕವಾಗಿ ಈಗಾಗಲೇ ಪರಿಗಣಿತವಾಗಿದ್ದ ಪ್ರಮುಖವೆನ್ನುವ ಸಮುದಾಯಗಳಿಂದ ಹೊರಗುಳಿಸಲಾಗಿದ್ದ ಸಮುದಾಯಗಳನ್ನು ಮುನ್ನೆಲೆಗೆ ತರುವುದು ಇಲ್ಲಿ ಮುಖ್ಯವಾಗಿದೆ. ನಿರ್ದಿಷ್ಟ ಸಮುದಾಯದ, ಬದುಕಿನ ವರ್ಣನೆ ಅದರ ಸಂವೇದನೆಗಳ ಅಭಿವ್ಯಕ್ತಿಯಲ್ಲಿಯೇ ನಿಂತು ಹೋಗುವ ಸಾಹಿತ್ಯದ ಮಿತಿಯನ್ನು ಮೀರುವ

ಹಿನ್ನೆಲೆಯಲ್ಲಿಯೇ ಕನ್ನಡದಲ್ಲಿ ಸಾಹಿತ್ಯ ಚಳುವಳಿಗಳು ಕಂಡು ಬಂದವು. ಪ್ರಗತಿಶೀಲ, ನವ್ಯ, ನವ್ಯೋತ್ತರ ದಲಿತ ಬಂಡಾಯ, ಸ್ತ್ರೀವಾದ ಇತ್ಯಾದಿಗಳು ವ್ಯಕ್ತಿಗತವಾಗಿ, ಸಾಮಾಜಿಕವಾಗಿ ಕಡೆಗಣಿತವಾದ ಬದುಕಿನ ಯಾವುದೋ ಒಂದು ಭಾಗವನ್ನು ಅನಾವರಣಗೊಳಿಸುತ್ತವೆ. ಪಂಥ ಪರಿಕಲ್ಪನೆ ಇಲ್ಲಿ ಮುಖ್ಯ ವಿಷಯವಲ್ಲ. ಕಾರಣ ದಲಿತ ಬಂಡಾಯದಲ್ಲಿ ಸ್ತ್ರೀವಾದ, ಸ್ತ್ರೀವಾದದಲ್ಲಿ ದಲಿತ-ಬಂಡಾಯದ ಮನೋಧರ್ಮಗಳು ಕಂಡುಬರುವ ಸಾಧ್ಯತೆಗಳಿವೆ. ಸಮುದಾಯಗಳ ಸಂವೇದನೆ ಎಂದಾಗ ಎದುರಾಗುವ ಸಮಸ್ಯೆಯೆಂದರೆ ಸ್ತ್ರೀಕೇಂದ್ರಿತವೊ ಅಥವಾ ಪುರುಷಕೇಂದ್ರಿತವೊ ಎನ್ನುವುದು. ಸಂವೇದನೆಯು ಈ ರೀತಿ ಸ್ತ್ರೀ-ಪುರುಷ ಎಂಬ ಲಿಂಗ ತಾರತಮ್ಯಕ್ಕೆ ಒಳಗಾಗಿಲ್ಲವೆಂಬುದು ಇಲ್ಲಿ ಸ್ಪಷ್ಟ ವಿಚಾರ. ಆದರೆ ಕೆಲ ಸಮುದಾಯಗಳನ್ನು ಸ್ತ್ರೀ-ಕೇಂದ್ರಿತ ನೆಲೆಯಲ್ಲಿ ಆಂಶಿಕವಾಗಿ ಅಥವಾ ಸಮಗ್ರವಾಗಿ ಗ್ರಹಿಸಬೇಕಾದ ಅನಿವಾರ್ಯತೆಗಳು ಕಂಡುಬರುತ್ತವೆ. ಸ್ತ್ರೀ-ಕೇಂದ್ರಿತವಾದ ಸಂವೇದನೆಯು ಇಡೀ ಸಮುದಾಯದ ಸಂವೇದನೆಯ ವಿಶಾಲ ವ್ಯಾಪ್ತಿಯನ್ನು ಪಡೆಯುತ್ತದೆ. ತನ್ನ ಬದುಕಿನಿಂದ, ಅನ್ಯ ಸಮುದಾಯಗಳಿಂದ ಪಡೆಯುವ ಅನುಭವಗಳು ಸ್ತ್ರೀ-ಸಂವೇದನೆಯನ್ನು ರೂಪಿಸುತ್ತವೆ.

'ಹೆಣ್ಣು' ಆಗಿರುವ ಕಾರಣಕ್ಕೆ ಪ್ರದೇಶ, ಸಮುದಾಯಗಳ ಮಿತಿಗಳನ್ನು ಮೀರಿ ಕಂಡುಬರುವ ಸಮಾನ ಸಂವೇದನೆಗಳನ್ನು ಪ್ರಾದೇಶಿಕ ಹಿನ್ನೆಲೆಯಲ್ಲಿ ಇಲ್ಲಿನ ಕಥನ ಸಾಹಿತ್ಯ ಕಟ್ಟಿಕೊಡುತ್ತದೆ. ಸಮುದಾಯಗಳ ನಡುವಿನ ಅಂತರ, ಅವುಗಳಲ್ಲಿನ ಶ್ರೇಷ್ಠ ಎಂಬುದೊಂದರಿಂದ ಹೊರಗೊಳಿಸಲಾದ ಸಮುದಾಯಗಳ ಹಾಗೂ ಸಮುದಾಯವೊಂದರಲ್ಲಿಯೇ ಕಡೆಗಣಿತವಾದ ವ್ಯಕ್ತಿ ಮತ್ತು ಕೆಲ ವಿಶಿಷ್ಟತೆಗಳನ್ನು ಇಲ್ಲಿನ ಕಥನ ಸಾಹಿತ್ಯ ತಿಳಿಸುತ್ತದೆ. ಅನ್ಯ ಸಮುದಾಯಗಳಿಂದಾದ ಶೋಷಣೆಯನ್ನು ಒಪ್ಪಿಕೊಂಡ, ವಿರೋಧಿಸುವ, ತಮ್ಮಲ್ಲಿಯೇ ಇರುವ ನ್ಯೂನತೆಗಳಲ್ಲಿ ನರಳಿ ನಶಿಸಿದ ಯಾವೆಲ್ಲ ಅಭಿವ್ಯಕ್ತಿಗಳು ಹೈದರಾಬಾದ್ ಕರ್ನಾಟಕದ ಕಥನಕಾರರ ಕಥೆಗಳಲ್ಲಿ ಗ್ರಹಿತವಾಗಿದೆಯೋ ಅವುಗಳೆಲ್ಲವನ್ನು ಅಧ್ಯಾಯ ಒಳಗೊಂಡಿದೆ.

ಸಮುದಾಯಗಳ ಸಂವೇದನೆಯನ್ನು ಭಾವನಾತ್ಮಕವಾಗಿ ವರ್ಣಿಸುವುದು ಇಲ್ಲಿನ ಮುಖ್ಯ ಉದ್ದೇಶವಲ್ಲ. ಕೇವಲ 'ವಿಶಿಷ್ಟತೆ'ಗಳು ಎನ್ನುವ ಹೆಸರಿನಲ್ಲಿ ಸಮುದಾಯಗಳ ಒಳಗಿನ ಶೋಷಣೆಯುಕ್ತ ಆಚರಣೆ, ನಂಬಿಕೆ, ಸಂಪ್ರದಾಯಗಳನ್ನು ಪರಿಭಾವಿಸಲಾಗಿಲ್ಲ. ಹಾಗೊಂದು ವೇಳೆ ವಿಶಿಷ್ಟ ಎನ್ನುವ ಸಂಗತಿ, ಆಚರಣೆಗಳು ಎದುರಿಸುತ್ತಿರುವ ಸಮಸ್ಯೆಗಳನ್ನು ಮುಖ್ಯವೆಂದೇ ಇಲ್ಲಿ ಪರಿಗಣಿಸಲಾಗಿದೆ. ಸಮುದಾಯಗಳ ಅಸಹಾಯಕತೆ, ಅಸ್ತಿತ್ವ ಹೀನತೆ, ಬದುಕಿನ ಅಂತಃಸತ್ವ ಹೀಗೆ ಯಾವೆಲ್ಲ ಸಂವೇದನೆಗಳು ಕಥನ ಸಾಹಿತ್ಯದಿಂದ ಹೊರಹೊಮ್ಮುತ್ತವೆಯೋ ಅವುಗಳನ್ನು ಪ್ರಾದೇಶಿಕವಾಗಿ ಗ್ರಹಿಸುವುದು, ಅರ್ಥೈಸುವುದು ಮುಖ್ಯವಾಗಿದೆ.

ಶಾಂತರಸ, ಜಯತೀರ್ಥ ರಾಜಪುರೋಹಿತ, ಜಂಬಣ್ಣ ಅಮರಚಿಂತ, ಚೆನ್ನಣ್ಣವಾಲೀಕಾರ, ಗೀತಾ ನಾಗಭೂಷಣ, ಬಿ.ಟಿ. ಲಲಿತಾನಾಯಕ್, ಅಮರೇಶ ನುಗಡೋಣಿ, ಕುಂ. ವೀರಭದ್ರಪ್ಪ ಮುಂತಾದ

ಕತೆಗಾರರ ಕಥನ ಹಂದರದಲ್ಲಿ ಕಂಡುಬರುವ ಸಮುದಾಯಗಳ ಸಂವೇದನೆಯು ವಾಸ್ತವಿಕತೆಯ ಪುನರ್‌ಸೃಷ್ಟಿಯೇ ಆಗಿದೆ. ವಾಸ್ತವಿಕತೆಯ ಮುಖ್ಯ ಪ್ರೇರಣೆಯಲ್ಲಿ ಕಂಡು ಬಂದ ಇಲ್ಲಿನ ಕಥನ ಸಾಹಿತ್ಯ ಕಾಲಘಟ್ಟಕ್ಕನುಗುಣವಾಗಿ ಆಯಾ ಸಮುದಾಯಗಳ ಸಂವೇದನೆಯನ್ನು ಅಭಿವ್ಯಕ್ತಿಸಿದೆ.

## ಮೇಲ್ವರ್ಗದ ಸಮುದಾಯಗಳ ಸಂವೇದನೆ

ಬ್ರಿಟೀಷ್ ಆಳ್ವಿಕೆಯಿಂದ ಸ್ವಾತಂತ್ರ್ಯ ಪಡೆದ ಪ್ರದೇಶಗಳು ಭ್ರಮನಿರಸನವನ್ನು ಅನುಭವಿಸಿದಂತೆ ಈ ಪ್ರದೇಶ ಜನತೆಯೂ ಭ್ರಮನಿರಸನವನ್ನು ಅನುಭವಿಸಿತು. ಪ್ರಭುತ್ವದ ಹಿಡಿತದಿಂದ ಸ್ವಾತಂತ್ರ್ಯ ಗೊಂಡವೆಂಬ ಭಾವನೆ ಇಲ್ಲಿನ ಜನಸಾಮಾನ್ಯರಿಗೆ ಭ್ರಮೆಯಾಗಿದ್ದು ಮೇಲ್ವರ್ಗದ ಆಳ್ವಿಕೆ ತೀವ್ರಗೊಂಡಿದ್ದರ ಅನುಭವದಿಂದ. ನಿಜಾಂ ಆಳ್ವಿಕೆಯ ಕಾಲದಿಂದಲೂ ಮೇಲ್ವರ್ಗವು ತಮ್ಮ ಗೌಡಿಕೆಗೆ, ಕುಲಕರ್ಣಿತನಕ್ಕೆ ಧಕ್ಕೆಯಾಗದಂತೆ ಕಾಯ್ದುಕೊಂಡಿತ್ತು. ರಾಜಕೀಯ, ಆರ್ಥಿಕ ಹಾಗೂ ಮತೀಯ ಹಿನ್ನೆಲೆಯ ಯಜಮಾನ ಸ್ಥಿತಿಯನ್ನು ಸ್ಥಾಪಿಸಿಕೊಂಡಿದ್ದವರೇ ಮೇಲ್ವರ್ಗದವರು. ಈ ಯಜಮಾನ ಅಥವಾ ಶ್ರೇಷ್ಠತೆಯ ಸ್ಥಿತಿಯು ಕೇವಲ ವೈಯಕ್ತಿಕ ಬದುಕಿಗೆ ಅನ್ವಯಿಸದೆ ಅನ್ಯಸಮುದಾಯದ ಮೇಲಿನ ಹೇರಿಕೆಯಾಗಿ ಕಂಡುಬಂದಿತು. ಈ ರೀತಿ ಹೇರುವ, ಹೇರಿಕೆಯನ್ನು ಒಪ್ಪಿದ ಸಮುದಾಯಗಳೇ ಸಮಾಜದಲ್ಲಿ ಮೇಲ್ವರ್ಗ ಹಾಗೂ ಕೆಳವರ್ಗವೆಂದು ರೂಪಿತವಾದವು. ಮೇಲ್ವರ್ಗದ ಬದುಕಿನ ರೀತಿ, ಆಚರಣೆಗಳು, ಇತ್ಯಾದಿ ವಿಚಾರಗಳಿಗೆ ಸಂಬಂಧಿಸಿದಂತೆ ಅಭಿವ್ಯಕ್ತಗೊಂಡ ಸಂವೇದನೆಗಳು ಇಲ್ಲಿನ ಕಥನ ಸಾಹಿತ್ಯದಲ್ಲಿ ಕಂಡುಬರುತ್ತವೆ.

ಮುಸ್ಲಿಂ ಪ್ರಭುತ್ವದ ಅಡಿಯಲ್ಲಿ ಉರ್ದು ಕಲಿತು ತಮ್ಮ ಬದುಕನ್ನು ಸರಕಾರಿ ಸೇವೆಯಲ್ಲಿ ಭದ್ರಪಡಿಸಿಕೊಂಡವರಲ್ಲಿ ಬಹುಪಾಲು ಜನ ಬ್ರಾಹ್ಮಣ ಸಮುದಾಯದವರೇ ಆಗಿದ್ದರು. 'ಗೋಹರಜಾನ್ ಮಾಲತಿ ಮತ್ತು ನಾನು' (ಚಂದ್ರಕಾಂತ ಕುಸನೂರ) ಕಾದಂಬರಿಯು ಕಾಲಕ್ಕೆ ತಕ್ಕಂತೆ ಬ್ರಾಹ್ಮಣ ಸಮುದಾಯ ಉರ್ದು ಕಲಿಕೆಯಿಂದ ಇಂಗ್ಲೀಷ್ ಕಲಿಕೆಗೆ ಹೊರಳಿದ್ದುದನ್ನು ತಿಳಿಸುತ್ತದೆ. ಹಾಲುಜೇನು (ಜಯತೀರ್ಥ ರಾಜಪುರೋಹಿತ) ಕಾದಂಬರಿಯು ಬದಲಾದ ರಾಜಕೀಯ ವಿದ್ಯಮಾನಗಳಲ್ಲಿ ತಮ್ಮ ಜಾಗೀರದಾರ್ ಪದವಿಯನ್ನು, ಮನೆತನದ ಶ್ರೀಮಂತಿಕೆಯನ್ನು ಉಳಿಸಿಕೊಳ್ಳುವಲ್ಲಿ ಯಶಸ್ವಿಯಾದವರು ಬ್ರಾಹ್ಮಣ ಸಮುದಾಯದವರೆಂಬುದನ್ನು ತಿಳಿಸುತ್ತದೆ. 'ಕೆರೂರು ನಾಮಾ' (ಚಂದ್ರಕಾಂತ ಕುಸನೂರ) ಕಾದಂಬರಿಯಲ್ಲಿ ಬ್ರಾಹ್ಮಣ ಸಮುದಾಯದ ಸಂಪ್ರದಾಯಗಳು ಕಂಡುಬರುತ್ತವೆ. ಬಾಲವಿಧವೆಯಾದ ತುಳಸಕ್ಕ ಬ್ರಾಹ್ಮಣ ಸಮಾಜದ ಕಟ್ಟಳೆಗಳನ್ನು ಮೀರಿ ಸಕೇಶಿಯಾಗಿಯೇ ಉಳಿಯುತ್ತಾಳೆ. ಆಕೆ 'ಪುರೋಹಿತರು ಹೇಳುವ ಮಂತ್ರದಿಂದ ಪ್ರಪಂಚ ನಡೆಯುವುದಿಲ್ಲ, ಮನುಷ್ಯ ತಾನು ರೂಪಿಸಿಕೊಂಡ ತಂತ್ರದಿಂದ ಪ್ರಪಂಚ ನಡೆಯುತ್ತದೆ' ಎನ್ನುವ ತಿಳುವಳಿಕೆ ಹೊಂದಿರುತ್ತಾಳೆ. ಗಂಡನಿಂದ ದೊರಕಿದ ಆಸ್ತಿಯಲ್ಲಿ ಉನ್ನತ ಸ್ಥಿತಿಯಲ್ಲಿಯೇ ಬದುಕುತ್ತಿದ್ದ ತುಳಸಕ್ಕ ಸಂಗೀತ ಕಲಿಯುವುದರ ಕಡೆ ಆಸಕ್ತಿ ತೋರುತ್ತಾಳೆ. ಊರಿನ ಎಲ್ಲಾ ಸಮುದಾಯದವರಿಂದಲೂ ಆಡಿಕೊಳ್ಳುವ ವಿಷಯವಾಗಿರುವ ತುಳಸಕ್ಕನ ಜೀವನ ಆಕೆಯ ಜಾತಿಯವನೇ ಆದ ರಾಮಾಚಾರಿ ಎಂಬುವವನ ಬಲತ್ಕಾರಕ್ಕೆ ಗುರಿಯಾಗುತ್ತದೆ.

ಆತ್ಮಹತ್ಯೆಯಲ್ಲಿ ಜೀವನದ ಅಂತ್ಯವನ್ನು ಕಂಡ ತುಳಸಕ್ಕನ ಪ್ರಗತಿಪರ ಆಲೋಚನೆಗಳು ಆಕೆಯೊಂದಿಗೆ ಕೊನೆಯಾಗುತ್ತವೆ. 'ಯಾತನಾ ಶಿಬಿರ' (ಚಂದ್ರಕಾಂತ ಕುಸನೂರ) ಕಾದಂಬರಿಯಲ್ಲಿ ಕಂಡುಬರುವ ದೀಕ್ಷಿತ ಮನೆತನದ ವರ್ಣನೆ ಅವರ ಉನ್ನತ ಸ್ಥಿತಿಯನ್ನೇ ತಿಳಿಸುತ್ತದೆ. ಕೃಷ್ಣಾ ದೀಕ್ಷಿತನ ಮದುವೆ ಸಂಭ್ರಮವನ್ನು ವರ್ಣಿಸುವ ಪ್ರಸಂಗ ಆ ಸಮುದಾಯದ ಸಾಂಪ್ರದಾಯಿಕ ಆಚರಣೆಗಳನ್ನು ವರ್ಣಿಸುತ್ತದೆ. "ಒಂದು ದಿನ ಮುಂಚಿತವೇ ಹನುಮಪ್ಪನ ಗುಡಿಯಲ್ಲಿ ಸೀಮಂತ ಪೂಜೆ, ವರಪೂಜೆ, ಎದುರುಗೊಳ್ಳುವುದು ನಡೆಯಿತು. ಒಂದು ದೊಡ್ಡ ಪರಾತಿನಲ್ಲಿ ಕೃಷ್ಣ ದೀಕ್ಷಿತನ ಪಾದಗಳನ್ನಿರಿಸಿ ಅತ್ತೆ ತೊಳೆಯುತ್ತಿದ್ದಳು.... ಎರಡೂ ಪಕ್ಷದ ಪುರೋಹಿತರು ಮಂತ್ರಗಳನ್ನು ಅನ್ನುತ್ತಿದ್ದರು. ವಾಂಗ್ನಿಶ್ಚಯ ಸಕ್ಕರೆ ಹಂಚುವುದು, ಎರಡು ಮೂರು ಪೈಸೆಗಳ ದಕ್ಷಿಣೆಗಾಗಿ ಬ್ರಾಹ್ಮಣರು ಕೈಯೊಡ್ಡಿ ನಿಲ್ಲುವುದು. ಮದುವೆಯ ವಯಸ್ಸಿನ ಹುಡುಗ-ಹುಡುಗಿಯರು ಕದ್ದು ಕದ್ದು ಪರಸ್ಪರ ನೋಡಿಕೊಳ್ಳುವುದು. ಎಲ್ಲವೂ ಕಾರ್ಯಕ್ರಮಕ್ಕೆ ಕಳೆ ತಂದುಕೊಟ್ಟಿದ್ದವು.

ಮರುದಿನ ಜೋಯಿಸರ ಕುದುರೆಯ ಮೇಲೆ ಬಾಸಿಂಗ ಕಟ್ಟಿಕೊಂಡು ಕೃಷ್ಣಾದೀಕ್ಷಿತನ ಸವಾರಿ.... ಕೈಯಲ್ಲಿ ಕಲ್ಬರ್ಡ್ ಮುತ್ತಿನಿಂದ ಹೆಣೆದಿದ್ದ ತೆಂಗಿತ್ತು. ಅದನ್ನು ಒಂದು ಕುಪ್ಪಸ ಖಣದಲ್ಲಿ ಸುತ್ತಲಾಗಿತ್ತು. ತುಂಬ ಕಾಳಜಿಯಿಂದ ದೀಕ್ಷಿತ ಅದನ್ನು ಹಿಡಿದುಕೊಂಡಿದ್ದ. ತಲೆಬಾಗಿಲದಲ್ಲಿ ಆರತಿ ಮಾಡಿ, ಕಣಕದ ಉಂಡೆಯನ್ನು ಇಳಿಸಿ ಒಗೆಯಲಾಯಿತು. ಹಂದರ, ಅಂತರಪಟ, ಅಕ್ಷತಾರೋಪಣ, ಲಾಜಾಹೋಮ, ಸಪ್ತಪದಿ" (ಚಂದ್ರಕಾಂತ ಕುಸನೂರು; ೧೯೭೭; ಪುಟ : ೮, ೯). ಹೀಗೆ ಈ ಸಮುದಾಯದ ವಿವಾಹ ಕಾರ್ಯಗಳನ್ನು ಕಾದಂಬರಿಯಲ್ಲಿ ಸೆರೆಹಿಡಿಯಲಾಗಿದೆ . ವಿವಾಹ ಕಾರ್ಯಕ್ಕೆ ಸಂಬಂಧಿಸಿದಂತೆ ಪ್ರದೇಶದ ಒಳಗೆ ಬ್ರಾಹ್ಮಣ ಸಮುದಾಯಗಳಲ್ಲಿ ಬೇರೆ ಬೇರೆ ಆಚರಣೆಗಳಿರುವ ಸಾಧ್ಯತೆಗಳಿವೆ. ಪ್ರಾದೇಶಿಕವಾಗಿ ಈ ಸಮುದಾಯದ ಆಚರಣೆಗಳು ಆಯಾ ಸಮುದಾಯಗಳ ವಿಶಿಷ್ಟತೆಗಳೆಂದು ಗುರುತಿಸಲಾಗುತ್ತದೆ. ಕೆಲ ದೀಕ್ಷಿತ ಕುಟುಂಬಗಳ ಸ್ಥಿತಿವಂತ ಆಚರಣೆಗಳಿಗೂ, ದಕ್ಷಿಣೆಗಾಗಿ ಕೈಚಾಚುವ ಬ್ರಾಹ್ಮಣರಿಗೂ ಇಲ್ಲಿ ವ್ಯತ್ಯಾಸವಿದೆ. 'ಗೋದಾನ' (ಶಾಂತರಸ) ಕತೆಯ ಶಾಸ್ತ್ರಿ ಬ್ರಾಹ್ಮಣಿಕೆಯೊಂದಿಗೆ ಬೆಳೆದು ಬಂದ ಪೌರೋಹಿತ್ಯವನ್ನು ಬಂಡವಾಳವಾಗಿಸಿಕೊಂಡಿರುವವನು, ತಮ್ಮ ಬದುಕಿನ ಅವಶ್ಯಕತೆಗಳ ಈಡೇರಿಕೆಯಲ್ಲಿ ಮೈಮರೆತ ಇವರ ವರ್ತನೆ ಸ್ವಾರ್ಥದ ಪರಮಾವಧಿಯಂತೆ ಕಂಡುಬರುತ್ತದೆ. ಅನ್ಯಜೀವನದ ಹಿತಚಿಂತನೆಯ ಪರಿವೇ ಇಲ್ಲದ ಮಧ್ಯಮವರ್ಗದ ಬ್ರಾಹ್ಮಣ ಸಮುದಾಯದ ಹೊಟ್ಟೆ ಹೊರೆಯುವ ಪರಿಗೆ ಇಲ್ಲಿ ಯಾವ ಶಾಸ್ತ್ರದ ಅಂಜಿಕೆಗಳೇ ಇಲ್ಲವೆಂಬುದು ತಿಳಿದುಬರುತ್ತದೆ. ಊರಿನ ಗೌಡ ಮುಂತಾದವರ ಪಂಚಾಯಿತಿ ತೀರ್ಮಾನಗಳಲ್ಲಿ ಕುಲಕರ್ಣಿ, ದೇಸಾಯಿಗಳ ಪಾತ್ರವು ಪ್ರಮುಖವಾಗಿರುವಂತಹದ್ದು. ತೋರಿಕೆಯ ಮಡಿವಂತಿಕೆಯು ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆಯನ್ನು ಜಾರಿಯಲ್ಲಿ ಉಳಿಸಿಕೊಳ್ಳುವ ಹುನ್ನಾರದಂತೆ ಕಂಡುಬರುತ್ತದೆ. ಮೇಲ್ವರ್ಗದ ಪುರುಷ ವ್ಯವಸ್ಥೆಯ ಪಂಚಾಯಿತಿ ತೀರ್ಮಾನಗಳು ಕೆಳವರ್ಗದ ಸ್ತ್ರೀಯರ ಜೀವನವನ್ನು ಹಾಳು ಮಾಡಿರುವುದು ಬೆಳ್ಳ (ಚೆನ್ನಣ್ಣ ವಾಲೀಕಾರ), 'ಕಾಗೆ ಮುಟ್ಟಿತು' (ಗೀತಾ ನಾಗಭೂಷಣ) ಮುಂತಾದ ಕಾದಂಬರಿಗಳಲ್ಲಿ ಕಂಡುಬರುತ್ತದೆ.

‘ಗೌರಮ್ಮನ ಹಾಲು’ (ಜಯತೀರ್ಥ ರಾಜಪುರೋಹಿತ) ಕತೆಯಲ್ಲಿ ಟೆನೆನ್ಸಿ ಕಾಯ್ದೆಯ ಕಾರಣ ಗಳಿಸಿದ ಆಸ್ತಿಯನ್ನು ಗೌರಮ್ಮನ ಮಗನಿಗೆ ಬಿಟ್ಟುಕೊಡಬೇಕಾಗುವುದೇನೊ ಎಂಬ ಆತಂಕದಲ್ಲಿ ನಾಗನಗೌಡ ಅಮಾನವೀಯವಾಗಿ ವರ್ತಿಸುತ್ತಾನೆ. ಆತನ ವರ್ತನೆಯಿಂದ ನೊಂದ ಊರಿನ ಹಿರೀಕರು ಗೌರಮ್ಮನ ಎದೆ ಹಾಲೇ ಆತನಿಗೆ ಬದುಕನ್ನು ನೀಡಿದ್ದೆಂಬ ಸತ್ಯವನ್ನು ತಿಳಿಯುವಂತೆ ಮಾಡುತ್ತಾರೆ. ಬದುಕನ್ನು ಕೊಟ್ಟವರಿಗೆ ಬದುಕಿಲ್ಲದಂತೆ ಮಾಡ ಹೊರಟ ಅವನ ಕ್ರೌರ್ಯಕ್ಕೆ ಅವನೇ ನಾಚುತ್ತಾನೆ. ಮೇಲ್ವರ್ಗದ ಪ್ರಧಾನ ನೆಲೆಯಿಂದಲೇ ಹೊರಡುವ ಇಲ್ಲಿನ ಅನೇಕ ಕತೆಗಳಲ್ಲಿ ಅವರ ಶ್ರೀಮಂತಿಕೆಯ ದರ್ಪವನ್ನು ತಿಳಿಸುವ ವರ್ತನೆಗಳೇ ತುಂಬಿವೆ. ಆರ್ಥಿಕ ಸ್ಥಿತಿಯಲ್ಲಿ ದುರ್ಬಲವಾಗಿರುವವರ ಬದುಕಿನ ವಿವರಗಳು ಇಲ್ಲಿ ಅಷ್ಟಾಗಿ ತಿಳಿದುಬರುವುದಿಲ್ಲ. ‘ರಾಚಿ’ (ಭಾಲಚಂದ್ರ ಜಯಶೆಟ್ಟಿ) ಕತೆಯು ಮೇಲ್ವರ್ಗದ ಅಮಾನವೀಯ ಸಂಪ್ರದಾಯವನ್ನು ತಿಳಿಕೊಡುವ ಹಿನ್ನೆಲೆಯಲ್ಲಿ ಮೂಡಿಬಂದಿರುವಂತಹದ್ದು. “ಮೈಸೂರು, ಮಂಡ್ಯ, ತುಮಕೂರು ಮುಂತಾದ ಕಡೆಯ ಅನೇಕ ಹಳ್ಳಿಗಳಲ್ಲಿ ದಲಿತ ವರ್ಗಕ್ಕೆ ಸೇರಿದ ಕೆಲವರನ್ನು ಒಂದು ವಿಶೇಷ ಸಂದರ್ಭದಲ್ಲಿ, ವಿಶೇಷ ದಿನಗಳ ಮಟ್ಟಿಗೆ ಬ್ರಾಹ್ಮಣರನ್ನಾಗಿ ಮಾಡುವ ಸಂಪ್ರದಾಯವಿದೆ. ‘ರಾಚಿ’ ಕಥೆಗೆ ಈ ಸಂಪ್ರದಾಯವೇ ನನಗೆ ಪ್ರೇರಕವಾಗಿದ್ದರೂ ಅದರ ಮೂಲವಸ್ತು ಮೌಲಿಕವಾಗಿ ನನ್ನದು” (ಭಾಲಚಂದ್ರ ಜಯಶೆಟ್ಟಿ; ೧೯೯೩; ಪುಟ : viii) ಎನ್ನುವ ಲೇಖಕರ ಮಾತು ಗಮನಿಸುವಂತಹದ್ದಾಗಿದೆ.

ಈ ಪ್ರದೇಶದ್ದಲ್ಲದ ಬ್ರಾಹ್ಮಣ ಸಮುದಾಯದ ಆಚರಣೆಯೊಂದನ್ನು ಕತೆಯ ವಸ್ತುವನ್ನಾಗಿಸಿ ಕೊಂಡರೂ ಅಭಿವ್ಯಕ್ತಿ ಶೈಲಿ ಇಲ್ಲಿನ ಬದುಕನ್ನೇ ಕೇಂದ್ರೀಕರಿಸಿದೆ. ಒಂದು ವಿಶಿಷ್ಟ ಸಂದರ್ಭದಲ್ಲಿ ಕೆಲದಿನಗಳವರೆಗೆ ಬ್ರಾಹ್ಮಣರಂತಿರುವ ವ್ರತಕ್ಕೆ ಬದ್ಧರಾಗಬೇಕಾದ ಕೆಳವರ್ಗದವರ ಇಕ್ಕಟ್ಟಿನ ಪರಿಸ್ಥಿತಿಯನ್ನು ಕತೆ ತಿಳಿಸುತ್ತದೆ. ಆದರೆ ಎಲ್ಲ ಶರತ್ತುಗಳನ್ನು ಮೀರಬೇಕೆಂದವರನ್ನು ಗೌಡ ಕುತಂತ್ರದಿಂದ ವ್ರತಭಂಗ ವಾಗುವಂತೆ ಮಾಡುತ್ತಿದ್ದ. ಈ ವ್ರತವನ್ನು ತಪ್ಪದೇ ಪಾಲಿಸಿದ ಮಾದನನ್ನು ಕೊಲ್ಲಿಸುವುದು ಮೇಲ್ವರ್ಗದ ಬ್ರಾಹ್ಮಣಿಕೆಯನ್ನು ತಮಗೆ ಮಾತ್ರವೇ ಉಳಿಸಿಕೊಳ್ಳಬಯಸುವ ಅದನ್ನು ಬೇರೆಯವರು ಸಾಧಿಸಲಾರರು ಎಂಬುದನ್ನು ಸಾಬೀತು ಮಾಡುವ ಗೌಡನ ಕ್ರೌರ್ಯ ವಿಕೃತವಾಗಿದೆ. ಕೆಳವರ್ಗದ ಸಾಮರ್ಥ್ಯವನ್ನು ತಳ್ಳಿಹಾಕುವ, ಕೊಲ್ಲುವ ಎಲ್ಲಾ ಜಾಣ್ಮೆಯನ್ನು ಪ್ರದರ್ಶಿಸುವ ಗೌಡ ಪರಂಪರೆಯ ಪ್ರತಿಷ್ಠೆಗಳನ್ನು ಉಳಿಸಿಕೊಳ್ಳಬೇಕೆಂಬ ಹಂಬಲಿಕೆಯನ್ನು ಹೊಂದಿದ್ದಾನೆ. ಆ ಕಾರಣಕ್ಕೆ ಯಾವ ಹೇಯ ಕೃತ್ಯವನ್ನು ಎಸಗಲು ಹಿಂತಿಗೆಯದ ಗೌಡನ ಬ್ರಾಹ್ಮಣಿಕೆಯನ್ನು ಕತೆ ಪ್ರಶ್ನಿಸುತ್ತದೆ.

‘ತುಂಗಾ’ (ಭಾಲಚಂದ್ರ ಜಯಶೆಟ್ಟಿ) ಕತೆ ಬ್ರಾಹ್ಮಣ ಸಮಾಜದಲ್ಲಿನ ವೈಧವ್ಯದ ಆಚರಣೆಯ ಬಗ್ಗೆ ತಿಳಿಸುತ್ತದೆ. ವೈಧವ್ಯದ ಕಾರಣ ಕೇಶಮುಂಡನ ಮಾಡಿಕೊಳ್ಳಲು ಒಪ್ಪದ ತುಂಗಾ ಆತ್ಮಹತ್ಯೆ ಮಾಡಿಕೊಳ್ಳಲಿಚ್ಛಿಸುತ್ತಾಳೆ. ಬಾಲ್ಯವಿವಾಹ, ವೈಧವ್ಯಗಳೆರಡನ್ನು ಎದುರಿಸುವ ತುಂಗಾ ಆತ್ಮಹತ್ಯೆಯಿಂದ ಪಾರಾಗಿ ವೀರಶೈವ ಮಠದಲ್ಲಿ ಆಶ್ರಯ ಪಡೆಯುತ್ತಾಳೆ. ಆಗಾಗ ಮಠಕ್ಕೆ ಬಂದು ಹೋಗುತ್ತಿದ್ದ

ಶ್ರೀಕಾಂತ ತುಂಗಾಳನ್ನು ಮೆಚ್ಚಿ ವಿವಾಹವಾಗುತ್ತಾನೆ. ವಿಧವಾ ವಿವಾಹ ಅಂತರ್‌ಜಾತಿಯವಾದರೂ ಒಂದು ಬಗೆಯ ಹೊಸ ಬದುಕನ್ನು ತುಂಗಾ ಕಂಡುಕೊಳ್ಳುತ್ತಾಳೆ. ತನ್ನ ಅಸಹಾಯಕ ಪರಿಸ್ಥಿತಿಯನ್ನು ಮೀರಿ ಒಪ್ಪಿ ಜೀವನ ನಡೆಸಲು ಮುಂದಾಗುವುದು ಸಾಹಸದ ಹೆಜ್ಜೆಯೇ ಆಗಿದೆ.

'ನೀರು ತಂದವರು' (ಅಮರೇಶ ನುಗಡೋಣಿ) ಕತೆಯಲ್ಲಿ ಕೆಳವರ್ಗದವರಿಗೆ ನೀರು ಸಿಗದಂತೆ ಮಾಡುವ ಬ್ರಾಹ್ಮಣ ಮುಂತಾದ ಮೇಲ್‌ವರ್ಗದ ಸಮುದಾಯಗಳ ವಿರುದ್ಧ ಕೆಳವರ್ಗದವರ ಪ್ರತಿಭಟನೆ ಉಗ್ರವಾಗಿಯೇ ಕಂಡುಬರುತ್ತದೆ. ಆದರೆ ಇದರ ಸ್ವರೂಪ ಮಾನವೀಯತೆಯಿಂದ ಕೂಡಿರುತ್ತದೆ. ನೀರಿಲ್ಲದೆ ಕಂಗಾಲಾಗಿದ್ದ ಮೇಲ್ವರ್ಗದವರ ಮನೆಮನೆಗೆ ನೀರೊಯ್ದುಕೊಡುವ ಮೂಲಕ ಮೊದಲು ತಮ್ಮೊಂದಿಗೆ ಅಮಾನವೀಯವಾಗಿ ವರ್ತಿಸಿದವರಿಗೆ ಮಾನವೀಯತೆಯನ್ನು ಬೋಧಿಸುತ್ತಾರೆ.

ಬ್ರಾಹ್ಮಣ ಸಮುದಾಯದಲ್ಲಿರುವ ಮತೀಯ ಅಂಧಾನುಕರಣೆಯನ್ನು, ಪರಿಷ್ಕೃತಗೊಳ್ಳಬೇಕಾದ ಸಮುದಾಯದ ಗೊಡ್ಡು ಆಚಾರವಿಚಾರಗಳು, ಹೊಸತನದ ಬದುಕಿಗೆ ತಕ್ಕಂತೆ ರೂಪಿಸಿಕೊಳ್ಳಬೇಕಾದ ಶೋಷಣಾರಹಿತ ಜೀವನವನ್ನು ಬಿಂಬಿಸುವ ಕತೆಗಳು ಬೆರಳೆಣಿಕೆಯಷ್ಟು ಕಂಡುಬಂದಿವೆ. ಪ್ರಗತಿಪರ ಚಿಂತನೆಯ ಹಿಂದೂ ಸಂಪ್ರದಾಯದ ಆಮೂಲಾಗ್ರ ಬದಲಾವಣೆಯನ್ನು ಆಗ್ರಹಿಸುವ ಇಂದಿರಾ, ಇಂದಿರಾಬಾಯಿ ಯಂತಹ ಕಾದಂಬರಿಗಳು ಇಲ್ಲಿ ಕಂಡುಬರದೆ ಇರುವುದು ಪ್ರಾದೇಶಿಕ ವಿಶಿಷ್ಟತೆಯೇ ಆಗಿದೆ. ಬದಲಾವಣೆಯನ್ನು ಒಪ್ಪದ ಮೂಲಭೂತವಾದಿಗಳಾದ ಈ ಸಮುದಾಯವನ್ನು ವಿರೋಧಿಸುತ್ತಲೇ ರೂಪಿತಗೊಂಡ ವಿಭಿನ್ನ ಸಮುದಾಯಗಳ ಸಂವೇದನೆಯು ಇಲ್ಲಿನ ಕಥನಕ್ಕೆ ದಕ್ಕುವಂತಾಯಿತು.

ಮಠಗಳಲ್ಲಿ ಕನ್ನಡ ಕಲಿಕೆಗೆ ಅವಕಾಶಕೊಟ್ಟ ವೀರಶೈವ ಧರ್ಮೀಯರ ಸೇವೆ ಕತೆಗಳಿಂದ ತಿಳಿದುಬರುತ್ತದೆ. ಅಯ್ಯನವರ ಶಾಲೆಗಳಲ್ಲಿ ಶಿಕ್ಷಣವು ಜಾತಿಭೇದವನ್ನು ಮೀರಿದ ಕಾಯಕವಾಗಿತ್ತು. ಈ ಹಿನ್ನೆಲೆಯಲ್ಲಿ ಆಡಳಿತ ವರ್ಗದೊಂದಿಗೆ ನಿಷ್ಠುರವಾಗದಂತೆ ಉಳಿದುಕೊಂಡಿದ್ದ ಇವರ ಸೇವೆ ಶ್ಲಾಘನೀಯವಾದದ್ದು. ಹೊತ್ತಿಗೆ ತೆಗೆದು ಮುಹೂರ್ತ ಹೇಳುವ, ಅನ್ಯವರ್ಗದಿಂದ ಗೌರವವನ್ನು ಪಡೆಯುವ ಇವರಲ್ಲಿ ಮಧ್ಯಮವರ್ಗದವರು, ಸ್ಥಿತಿವಂತರು ಕಂಡು ಬರುತ್ತಾರೆ. ಜಂಗಮರ ಮಠದ ಗುರುಗಳಿಗೆ ಸಂಬಂಧಿಸಿದ ಅನೇಕ ಸಂಗತಿಗಳು ಇಲ್ಲಿನ ಕಥನದಲ್ಲಿ ಕಂಡುಬರುತ್ತವೆ. 'ನೀಲಗಂಗಾ ಗುರುಪಾದ ಮತ್ತು ಒಂದು ರೂಪಾಯಿ' (ಶಾಂತರಸ) ಕತೆಯಲ್ಲಿ ಹಿರೇಮಠದಲ್ಲಿ ಓದುವ ವಿದ್ಯಾರ್ಥಿಗಳಿಗೆ ನೆಲೆ ಸಿಕ್ಕಿದ್ದು ತಿಳಿದುಬರುತ್ತದೆ. ಕಂತಿ ಭಿಕ್ಷೆ ಎತ್ತಿಸಿ ವಿದ್ಯಾರ್ಥಿಗಳಿಗೆ ಊಟದ ವ್ಯವಸ್ಥೆ ಮಾಡಿಸುತ್ತಿದ್ದ ಸ್ವಾಮಿಗಳು ಕೆಲವೇಳೆ ಮಠದಲ್ಲಿ ಅಡುಗೆ ಮಾಡಿಸುವ ವ್ಯವಸ್ಥೆ ಮಾಡಿದ್ದರು. ಜಾತಿಭೇದವಿಲ್ಲದೆ ವಿದ್ಯಾರ್ಥಿಗಳು ಇಲ್ಲಿ ಆಶ್ರಯವನ್ನು ಪಡೆದಿದ್ದರು. ಇಂತಹ ಮಠಗಳು ಇಸ್ಲಾಂ ಆಡಳಿತದ ಕೆಂಗಣ್ಣನ್ನು ಎದುರಿಸಿ ನಿಲ್ಲುವ ಧೈರ್ಯವನ್ನು ಪಡೆದಿರಲಿಲ್ಲ.

'ಸಂಬಂಧಗಳು' (ಶಾಂತರಸ) ಕತೆಯಲ್ಲಿ ವಿರೂಪಾಕ್ಷಸ್ವಾಮಿ ಲಗ್ನವಾಗುವ ವಿಚಾರ ಕೇಂದ್ರ ವಿಷಯವಾಗುತ್ತದೆ. ಜೀರ್ರ ಹುಡುಗಿ ಮಾದೇವಿಯನ್ನು ಮದುವೆ ಮಾಡಿಕೊಳ್ಳಬಯಸಿದ ಮಠದ

ವಿರೂಪಾಕ್ಷಸ್ವಾಮಿಯ ನಿಲುವು ಊರಿನ ಗೌಡ ಮುಂತಾದ ಪ್ರಮುಖರಿಂದ ವಿರೋಧವನ್ನು ಎದುರಿಸುತ್ತದೆ. ಇರಪಮ್ಮನಂತಹ ಹಾದರದ, ಸುದ್ದಿಗಾರ್ತಿಯ ಬಾಯಿಗೆ ಸಿಕ್ಕ ಈ ವಿಷಯ ಊರಿನಲ್ಲಿ ಹಬ್ಬಿನಿಲ್ಲುವುದು ತಡವಾಗುವುದಿಲ್ಲ. ವಿರುಪಾಕ್ಷಸ್ವಾಮಿಯ ಮನಪರಿವರ್ತನೆಗೆ ಏನೇನೋ ಉಪಾಯ ಮಾಡುವ ಊರಗೌಡರ ಹಾಗೂ ಇನ್ನಿತರರ ಪ್ರಯತ್ನಗಳು ಫಲಿಸುವುದಿಲ್ಲ. ಸಮಾಜ ಸುಧಾರಕರು, ವಿಚಾರವಾದಿಗಳೂ ಆಗಿದ್ದ ಸ್ವಾಮಿಗಳಿಂದ ಹೇಗಾದರೂ ಮಾದೇವಿಯನ್ನು ದೂರಮಾಡಬಯಸಿದ ಸಂಬಂಧಿಗಳು ಆಕೆಯ ಮೇಲೆ ಬಲತ್ಕಾರದಂತಹ ಹೇಯಕೃತ್ಯ ಎಸಗುತ್ತಾರೆ. ಇದರಿಂದಲೂ ವಿಚಲಿತರಾಗದ ಸ್ವಾಮಿಗಳು ಮಾದೇವಿಯನ್ನು ವಿವಾಹವಾಗುತ್ತಾರೆ. ಬರೀ ಅನೈತಿಕ ಸಂಬಂಧಗಳಲ್ಲಿಯೇ ಮುಳುಗಿದ್ದ ಗೌಡನಂತವರಿಗೆ ವಿರುಪಾಕ್ಷ ಸ್ವಾಮಿಯ ನಿಲವು ಅನೈತಿಕದಂತೆಯೇ ಕಂಡುಬರುವುದು ದುರಂತ.

ಶ್ರೀಮಂತಿಕೆಯ ದರ್ಪದಲ್ಲಿ ಊರ ಗೌಡಿಕೆಯನ್ನು ಹೊತ್ತವರು ಈ ಸಮುದಾಯದಲ್ಲಿ ಕಂಡು ಬರುತ್ತಾರೆ. 'ಕಾಗೆ ಮುಟ್ಟಿತು' (ಗೀತಾ ನಾಗಭೂಷಣ) ಕಾದಂಬರಿಯ ಉಗ್ರಪ್ಪಗೌಡ, 'ಸಣ್ಣಗೌಡಸಾನಿ' (ಶಾಂತರಸ) ಕಾದಂಬರಿಯ ಸೂಗನಗೌಡ, 'ಹೊತ್ತು ಮೂಡುವ ಸಮಯ' ಕತೆಯ ದೊಡ್ಡನಗೌಡ (ಅಮರೇಶ ನುಗಡೋಣಿ). ಹೀಗೆ ಇಲ್ಲಿನ ಕಥನ ಸಾಹಿತ್ಯದ ಅನೇಕ ಕಡೆಗಳಲ್ಲಿ ಈ ಸಮುದಾಯದ ಸ್ಥಿತಿವಂತರ ದರ್ಪಯುತ ಬದುಕು ಕಂಡುಬರುತ್ತದೆ. ಈ ಸಮುದಾಯದ ಫ್ಯೂಡಲ್‌ಗಳು ಶೋಷಣೆಯ ನೆಲೆಯಿಂದಲೇ ಕೂಡಿದ್ದುದು ಇಲ್ಲಿನ ಅನೇಕ ಕತೆ, ಕಾದಂಬರಿಗಳಿಂದ ತಿಳಿದು ಬರುತ್ತದೆ. ಮಠದಯ್ಯನವರ, ಇಲ್ಲವೆ ಸ್ವಾಮಿಗಳ ನೆರವಿನಲ್ಲಿ ಈ ಗೌಡರ ಮನೆತನಗಳು ಉಳಿದುಕೊಂಡಿರುವುದು ಕೆಲಕಡೆ ಕಂಡುಬರುತ್ತದೆ. ತಮ್ಮ ದರ್ಪದ ಅರ್ಥಹೀನ ಬದುಕಿನಲ್ಲಿ ಗೌಡನಂತವರು ಗಳಿಸಿದ ಸಂಪತ್ತಿಗಿಂತ ಕಳೆದುಕೊಂಡ ನೆಮ್ಮದಿಯೇ ಹೆಚ್ಚೆಂಬುದನ್ನು ಇಲ್ಲಿನ ಬಹುಪಾಲು ಕಥನ ಧ್ವನಿಸುತ್ತದೆ. ಕೆಳವರ್ಗದವರೊಂದಿಗೆ, ಜನಸಾಮಾನ್ಯರೊಂದಿಗೆ ಫ್ಯೂಡಲ್ ವ್ಯವಸ್ಥೆಯ ಬೆರೆಯುವಿಕೆ ತುಂಬ ವಿರಳವಾಗಿ ಕಂಡುಬರುತ್ತದೆ. ಆದರೆ ಕೆಲವೇಳೆ ಎಲ್ಲರೊಂದಿಗೆ ಕೂಡಿ ಸಂಭ್ರಮಿಸುವುದನ್ನು 'ಸುಂಕಬುತ್ತಿ'ಯಂತಹ ಕೃಷಿ ಸಂಬಂಧಿ ಆಚರಣೆಗಳಲ್ಲಿ ಕಾಣಲಾಗುತ್ತದೆ. ಗೌಡನ ಹೊಲದ ಬೆಳೆಯನ್ನು ರಾಶಿ ಮಾಡಿ ಪೂಜೆ ಮಾಡುವ, ಸುಂಕಬುತ್ತಿ ಉಣ್ಣುವುದು ಪ್ರಾದೇಶಿಕವಾದ ವಿಶಿಷ್ಟತೆಯನ್ನೇ ತಿಳಿಸುತ್ತದೆ. ಸುಂಕಬುತ್ತಿ ತಯಾರು ಮಾಡುವವರು ಒಂದೊಂದು ರೀತಿಯ ಅಡಿಗೆ ಮಾಡುವಲ್ಲಿ ಇಡೀ ಹಳ್ಳಿಯಲ್ಲಿಯೇ ಪ್ರಸಿದ್ಧರಾಗಿರುವಂತವರೆಂದು 'ಹೊತ್ತು ಮೂಡುವ ಸಮಯ' (ಅಮರೇಶ ನುಗಡೋಣಿ) ಕತೆ ತಿಳಿಸುತ್ತದೆ. "ಬನ್ನಪ್ಪ, ಬಗಯ್ಯ ಕೂಡಿ ಗೋದಿ ಹುಗ್ಗಿ ಮಾಡಿದರೆ ಅದು ಏಳೂರು ಹೆಸರಾಗಬೇಕು. ಜೀರ ಲಿಂಗಣ್ಣ ಸಾರು ಮಾಡಿದರೆ ಮುಗಿತು ಏಸೋ ಮಂದಿ ಬರೀ ಸಾರು ಕುಡಿದು ಹೊಟ್ಟೆ ತುಂಬಿಸಿಕೊಂಡು ಹೋದ ಕಥೆಗಳಿವೆ. ರಡ್ಡೇರ ನಾಗಮ್ಮ, ಕೆಳಮನಿ ಸೂಗಮ್ಮ ಬದನೆಕಾಯಿ ಪಲ್ಯ ಮಾಡಲೆಂದೇ ಹುಟ್ಟಿದವರೆಂದು ಪ್ರತೀತಿಯಾಗಿ ಹೋಗಿದೆ" (ಅಮರೇಶ ನುಗಡೋಣಿ; ೧೯೯೧; ಪುಟ : ೩೬). ಪ್ರಾದೇಶಿಕ ವಿಶಿಷ್ಟ ಆಚರಣೆಯನ್ನು, ಗೌಡನ ಮನೆಯ ಸುಂಕಬುತ್ತಿ ಸಾಮಾನ್ಯರಿಂದ ತಯಾರಾಗುವುದಿಲ್ಲವೆಂಬ ಹೊಗಳಿಕೆ ಯನ್ನು ಇದು ತಿಳಿಸುತ್ತದೆ. ಆದರೆ ಪ್ರಾದೇಶಿಕವಾಗಿ, ವಿಶಿಷ್ಟ ಸಮುದಾಯಕ್ಕೆ ಸಂಬಂಧಿಸಿದ ಆಹಾರ

ಪದ್ಧತಿಯೂ ಇಲ್ಲಿ ಕಂಡುಬರುತ್ತದೆ. ಮೇಲ್ವರ್ಗದವರಲ್ಲಿ ಕಂಡುಬರುವ ಈ ಆಹಾರ ಪದ್ಧತಿಯು ಭಿನ್ನತೆಯುನ್ನು ವೈವಿಧ್ಯತೆಯನ್ನು ಪಡೆದಿರುವ ಸಾಧ್ಯತೆಯಿನೆಯಾದರೂ ಪ್ರಾದೇಶಿಕವಾಗಿ ಸಮುದಾಯದ ವೈಶಿಷ್ಟ್ಯವನ್ನು ಪ್ರತಿನಿಧಿಸುತ್ತದೆ. ಈ ಸುಂಕಬುತ್ತಿ ಇತರೆ ಕೆಳವರ್ಗದ ಆಹಾರ ಕ್ರಮದಿಂದ ಭಿನ್ನತೆಯನ್ನು ಪಡೆದಿರುತ್ತದೆ ಎಂಬುದನ್ನು ತಿಳಿಸುತ್ತದೆ. ಮೇಲ್ವರ್ಗದಲ್ಲಿಯೇ ಇರುವ ಆರ್ಥಿಕ ಸ್ಥಿತಿವಂತರಲ್ಲದವರು ಹಾಗೂ ಕೆಳವರ್ಗದವರು ಇಂತಹ ಕೂಡಿ ಉಣ್ಣುವ ಸಂದರ್ಭದಲ್ಲಿ ಗೌಡನ ಮನೆಯವರೊಂದಿಗೆ ಒಂದಾಗುತ್ತಾರೆ. ಆದರೆ ಇಂತಹ ಕೃಷಿಸಂಬಂಧಿ ಆಚರಣೆಗಳು ಕಾಲಘಟ್ಟದ ನಡಿಗೆಯಲ್ಲಿ ಮರೆಯಾಗುತ್ತಿವೆ. ಕೂಡಿ ಅಡಿಗೆ ಮಾಡುವ, ಕೂಡಿ ಉಣ್ಣುವ ಅವಕಾಶಗಳನ್ನು ಕಳೆದುಕೊಳ್ಳುತ್ತಿರುವ ಪ್ರಸ್ತುತ ಮನುಷ್ಯ ಬದುಕು ಸೀಮಿತಿಗೊಳ್ಳುತ್ತಿರುವುದನ್ನು ಇದು ತಿಳಿಸುತ್ತದೆ. ದೊಡ್ಡ ದೊಡ್ಡ ಖಣದಲ್ಲಿ, ಹಂತಿಗುಂಡಿಯಲ್ಲಿ ಗೌಡನ ದೌರ್ಜನ್ಯಕ್ಕೆ ಬಲಿಯಾಗಿ ಪ್ರಾಣ ಕೊಟ್ಟವರ ಕರಾಳ ಬದುಕಿನ ಚಿತ್ರಣವೂ ಇದೆ.

ಕೃಷಿಸಂಬಂಧಿ ಆಚರಣೆಗಳಲ್ಲಿ 'ಕೂರಿಗೆ ಪೂಜೆ'ಯೂ ಮುಖ್ಯವಾದದ್ದು. 'ಒಂದು ಹೆಣ್ಣಿನ ಒಳಜಗತ್ತು' (ಚೆನ್ನಣ್ಣ ವಾಲೀಕಾರ) ಕಾದಂಬರಿಯಲ್ಲಿ ಈ ಆಚರಣೆಗೆ ಸಂಬಂಧಿಸಿದ ವಿಧಿ-ವಿಧಾನಗಳು ತಿಳಿದುಬರುತ್ತವೆ. 'ಅಂಗಳದ ಕಟ್ಟೆಯ ಮೇಲೆ ಜೋಡು ಕೂರಿಗೆಗಳನ್ನು ಇಟ್ಟರು. ಸಂಗಣ್ಣಗೌಡ ಜಳಕ ಮಾಡಿ ಧೋತರುಟ್ಟು, ಬರೀ ಮೈಯಿಂದ ಬಂದನು. ಮಡಿ ನೀರಿನಿಂದ ಕೂರಿಗೆಗಳನ್ನು ತೊಳೆದನು. ಚಂದ್ರ, ಕುಂಕುಮ, ಅರಿಷಿಣ, ವಿಭೂತಿ ಹಚ್ಚಿ ಎರಡು ರೇಶ್ಮೆಯ ಸೀರೆಗಳನ್ನು ಉಡಿಸಿದನು. ಕೂರಿಗೆಯ ಮುಂದೆ ಹೋಳಿಗೆ, ಹುಗ್ಗಿ, ಕಡುಬು, ಉಂಡಿ, ಹಿಂಡಿಪಲ್ಲೆ, ಅನ್ನ-ಬಾನ, ಬಾಜಿ, ಭರ್ತದ ಎರಡು ಅಗಲು ತಂದಿಟ್ಟರು. ಲೋಭಾನ ಹಾಕಿ, ಊದಿನಕಡ್ಡಿ ಹಚ್ಚಿ ಕರ್ಪೂರ ಹಚ್ಚಿ ಟೆಂಗು ಒಡೆಯುತ್ತಿದ್ದಾಗ ಹಲಗೆ ಬಾಜಿ ಡೊಳ್ಳಿನವರು ಬಾರಿಸುವುದು, ಬಡಿಯುವುದು ನಡೆಸಿದರು. ಮುತ್ತೈದೆಯರು ಕಲ್ಯಾಣಮ್ಮ ಗೌಡತಿಯ ಜೊತೆಗೆ ಬಂದು ಹಿಡಿಗೋಧಿ, ಅಕ್ಕಿ, ಉತ್ತತ್ತಿ, ಅಡಿಕೆ, ಎಲೆ ತೆಗೆದುಕೊಂಡು ಕೂರಿಗೆ ಪೂಜೆಗಾಗಿ ಕಟ್ಟಿದ್ದ ಸೀರೆಯ ಸೆರಗಿನೊಳಗೆ ಕಟ್ಟಿ ಮಂಗಳಾರತಿ ಎತ್ತಿದರು. ಕೂರಿಗೆ ಪೂಜೆ ಆದ ಮೇಲೆ ಅಂಗಳದಲ್ಲಿ ನೆರೆದ ಜನರಿಗೆ ಕೂಡಲು ಹೇಳಿ ಸೇದಲು ಬೀಡಿ ಕೊಟ್ಟರು. ಮೊದಲು ಒಂದೊತ್ತು ಇದ್ದ ಸಂಗಣ್ಣಗೌಡ ಮತ್ತು ಕಲ್ಯಾಣಮ್ಮ ಗೌಡತಿ ಮನೆಯೊಳಗೆ ಹೋಗಿ ಜಗಲಿ ಮುಂದೆ ಕುಳಿತು ಒಂದೊತ್ತು ಬಿಟ್ಟರು" (ಚೆನ್ನಣ್ಣ ವಾಲೀಕಾರ; ೨೦೦೨; ಪುಟ ೧೭, ೧೮).

ಮೇಲ್ವರ್ಗದ ಸ್ಥಿತಿವಂತರ ಅಂತಸ್ತನ್ನೇ ಕುರಿತು ತಿಳಿಸುವ ಇಂತಹ ಆಚರಣೆಗಳು ಪ್ರಾದೇಶಿಕವಾಗಿ ಕಂಡುಬರುವ ಕೆಲವು ಸಾಂಪ್ರದಾಯಿಕ ಆಚರಣೆಗಳನ್ನು ತಿಳಿಸುತ್ತವೆ. ಇಂತಹ ಆಚರಣೆಯ ಸಾಧ್ಯಸಾಧ್ಯತೆಯ ಬಗೆಗೆ ಕೆಳಸಮುದಾಯದ ಹಾಗೂ ಆರ್ಥಿಕವಾಗಿ ಹಿಂದುಳಿದ ಕೆಲ ಮೇಲ್ವರ್ಗದವರ ಸಂವೇದನೆ ಇಲ್ಲಿ ಗೌಣವಾಗುತ್ತದೆ. ಕೃಷಿ ಸಂಬಂಧಿಯಾದ ಈ ಆಚರಣೆ ಪ್ರಾದೇಶಿಕವಾದ ಪ್ರಾತಿನಿಧ್ಯವನ್ನು ಪಡೆಯುತ್ತದೆ. ಆದರೆ ಪ್ರದೇಶದ ಒಳಗೆ ಕೆಲ ಬದಲಾವಣೆಗಳನ್ನು ಹೊಂದಿರುವ ಸಾಧ್ಯತೆಗಳಿವೆ.

ಮೇಲ್ವರ್ಗದ ಸಮುದಾಯದಲ್ಲಿ ಆಚರಿಸುವ 'ಯುಗಾದಿ ಹಬ್ಬದ' ಆಚರಣೆಯನ್ನು ವಿಮರ್ಶಿಸುವ 'ರತ್ನಾ ಎಂಬ ಹುಡುಗಿಯೂ ಉಗಾದಿ ಎಂಬ ಆಟವೂ (ಕುಂ. ವೀರಭದ್ರಪ್ಪ) ಕತೆಯು ಆರ್ಥಿಕವಾಗಿ

ಜರ್ಜರಿತವಾಗಿದ್ದ ಮೇಲ್ವರ್ಗದ ಕುಟುಂಬಗಳ ಸ್ಥಿತಿಯನ್ನೇ ತಿಳಿಸುತ್ತದೆ. ಶುಭಕಾರ್ಯ, ಹಬ್ಬ ಆಚರಣೆಯ ಕಾರ್ಯಗಳಲ್ಲಿ ಪಾಲ್ಗೊಂಡ ಜಂಗಮರು ಮೊದಲು ಊಟ ಮಾಡಿದ ನಂತರವೇ ಮನೆಯ ಇತರರು ಊಟ ಮಾಡಬೇಕೆಂಬುದು ಸಂಪ್ರದಾಯ. ಈ ಸಾಂಪ್ರದಾಯಿಕ ಪದ್ಧತಿಯನ್ನೇ ಬಂಡವಾಳ ಮಾಡಿಕೊಂಡ ಜಂಗಮರ ಬದುಕನ್ನು ಕತೆ ಹೀಯಾಳಿಸುತ್ತದೆ. ಹಬ್ಬದೂಟದ ಬಹುದಿನದ ಕನಸನ್ನು ಈಡೇರಿಸಿಕೊಳ್ಳಲು ಬಯಸಿದ ರತ್ನ ಮತ್ತಾಕೆಯ ಅಣ್ಣನ ಕನಸು ಇಲ್ಲಿ ನನಸಾಗುವುದಿಲ್ಲ. ಜಂಗಮನೇ ಮಾಡಿದಡುಗೆಯಲ್ಲಿ ಮುಕ್ಕಾಲು ಭಾಗ ತಿನ್ನುವುದನ್ನು ಕಂಡು ಮಕ್ಕಳು ನಿರಾಶೆ ಹೊಂದುತ್ತಾರೆ. ಜಂಗಮನ ಬಗೆಗಿನ ಸಿಟ್ಟನ್ನು ರತ್ನಾ ಉಗಾದಿ ಆಟ ಆಡುವ ಸಂದರ್ಭದಲ್ಲಿ ಜಂಗಮನ ಪಾತ್ರವಹಿಸಿದ್ದ ತನ್ನಣ್ಣನನ್ನು ಪೊರಕೆಯಿಂದ ಹೊಡೆಯುತ್ತಾಳೆ. ಪುಕ್ಕಟೆಯಾಗಿ ತಿನ್ನುವ ಜಂಗಮರಿಗೆ ನಾಚಿಕೆಯಿಲ್ಲವೆಂದು ಹೀಯಾಳಿಸುತ್ತಾಳೆ. ಸಮುದಾಯವೊಂದರ ಆರ್ಥಿಕ ಪರಿಸ್ಥಿತಿ ಸಾಂಪ್ರದಾಯಿಕ ಆಚರಣೆಗಳ ಬಗೆಗೆ ತೋರುವ ವಿರೋಧವೂ ಮುಖ್ಯವಾಗಿದೆ.

ಮೇಲ್ವರ್ಗದ ಹಬ್ಬ-ಆಚರಣೆಗಳು ಈ ಭಾಗದ ಕಥನದಲ್ಲಿ ಬಹುಪಾಲು ಸ್ಥಿತಿವಂತರ ಬದುಕಿನ ರೀತಿಗೆ ಅನುಗುಣವಾಗಿ ವರ್ಣಿತವಾಗಿರುವುದು ಕಂಡುಬರುತ್ತದೆ. 'ಒಂದು ಹೆಣ್ಣಿನ ಒಳಜಗತ್ತು' (ಚೆನ್ನಣ್ಣ ವಾಲೀಕಾರ). ಕಾದಂಬರಿಯಲ್ಲಿ ದಸರಾ ಹಬ್ಬದ ಆಚರಣೆಯ ವಿವರಗಳು ಕಂಡು ಬರುತ್ತವೆ. "ಹೀಗೆ ಬಾಜಿಯೊಂದಿಗೆ ಸಂಗಣ್ಣಗೌಡ ಊರ ಹೊರಗಿರುವ ಬನ್ನಿ ಗಿಡಕ್ಕೆ ಬಂದನು. ಅಲ್ಲಿ ಪೂಜೆ ಮಾಡಲು ಆಯ್ಯಗೋಳ ಶಂಕ್ರಯ್ಯ ಸ್ವಾಮಿಗೆ ಕರೆಸಿದ್ದರು. ಯಾವುದೇ ಕೆಲಸಕ್ಕೂ ಸ್ವಾಮಿ ಇದೇ ಪದ ಹಾಡುತ್ತಿದ್ದನು... ಹಾಡು ಹಾಡುತ್ತ ಶಂಕ್ರಯ್ಯಸ್ವಾಮಿ ಬನ್ನಿಗಿಡಕ್ಕೆ ಚಂದ್ರ ಕುಂಕುಮ, ಭಂಡಾರ, ವಿಭೂತಿ ಹಚ್ಚಿದನು. ಕಾಯಿ ಒಡೆದು ಕರ್ಪೂರ ಬೆಳಗಿದನು. ಪೂಜೆ ಆದ ಕೂಡಲೇ ಸಂಗಣ್ಣಗೌಡ ಐದು ಬನ್ನಿ ತಪ್ಪಲು ಹರಿದ ಕೂಡಲೇ ಉಳಿದವರು ಹರಿಯತೊಡಗಿದರು... ಹಣಮಂದೇವರಿಗೆ ಶಂಕರಲಿಂಗ ದೇವರಿಗೆ ಬನ್ನಿಯಿಟ್ಟು ಸಣ ಮಾಡಿ ಊರಲ್ಲಿ ತಮಗೆ ಬೇಕಾದ ಬಂಧುಬಾಂಧವರಿಗೆ ಸ್ನೇಹಿತರಿಗೆ ಈ ಬನ್ನಿಯನ್ನು ಬಂಗಾರವೆಂದು ಕೊಡುತ್ತ, ಪ್ರೀತಿ ಪ್ರೇಮ ಹಂಚಿಕೊಳ್ಳುತ್ತಾ, ಊರು ತುಂಬ ತಿರುಗಾಡಿದರು" (ಚೆನ್ನಣ್ಣ ವಾಲೀಕಾರ; ೨೦೦೨; ಪುಟ : ೪೫-೪೬). ಗೌಡನಂತಹ ಸ್ಥಿತಿವಂತ ಮೇಲ್ವರ್ಗದವರಿಂದಲೇ ಪ್ರಾರಂಭವಾಗುವ ಮಧ್ಯಮ, ಕೆಳವರ್ಗದವರಿಂದ ವಿಶಿಷ್ಟವಾಗಿ ನಿಲ್ಲುವ ಈ ಹಬ್ಬ ಪ್ರಾದೇಶಿಕ ವಿಶಿಷ್ಟತೆಯನ್ನು ಹೊಂದಿದೆ. ಬನ್ನಿ ಮುಡಿಯುವ, ಬಂಗಾರವೆಂದು ಅದನ್ನು ಹಂಚುವ ಕಾರ್ಯ ಎಲ್ಲಾ ಪ್ರದೇಶಗಳಲ್ಲಿಯೂ ಒಂದೇ ರೀತಿಯಾಗಿಲ್ಲ. ಬನ್ನಿ ಮುಡಿಯುವಂತಹ ಸಂದರ್ಭದಲ್ಲಿ ಮೇಲ್ವರ್ಗದವರು ವಯಸ್ಸಿನಿಂದ ಎಷ್ಟೇ ಚಿಕ್ಕವರಿದ್ದಾಗ್ಯೂ ಕೆಳವರ್ಗದವರು ವಯಸ್ಸಿನಲ್ಲಿ ಎಷ್ಟೇ ಹಿರಿಯರಾಗಿದ್ದರೂ ಬನ್ನಿಕೊಟ್ಟು ಅವರ ಕಾಲಿಗೆ ನಮಸ್ಕರಿಸುವುದು ಶ್ರೇಣೀಕೃತ ವ್ಯವಸ್ಥೆಯ ಬದಲಾಗದ ವ್ಯವಸ್ಥೆಯನ್ನೆ ತಿಳಿಸುತ್ತದೆ. ದೀಪಾವಳಿ ಹಬ್ಬದ ಆಚರಣೆಯೂ ಈ ಪ್ರದೇಶದಲ್ಲಿ ವಿಶಿಷ್ಟವಾಗಿ ಕಂಡು ಬರುವುದನ್ನು 'ಒಂದು ಹೆಣ್ಣಿನ ಒಳಜಗತ್ತು' (ಚೆನ್ನಣ್ಣ ವಾಲೀಕಾರ) ಕಾದಂಬರಿ ತಿಳಿಸುತ್ತದೆ. "ಒಂದು ವಾರ ಊರಲ್ಲಿ ಎಲ್ಲರ ಮನೆಗಳ ದೀಪಗಳು ಜಗಜಗಿಸುತ್ತಿದ್ದವು. ಹುಡುಗರು ಮಾತಾಪ ಕಡ್ಡಿ, ಚುರಚುರ ಬತ್ತಿ,

ಅಟಂಬಾಂಬ ಹಚ್ಚುತ್ತ ಬಂಧೂಕ ಹೊಡೆಯುತ್ತ ತೋಟ್ಟು ಹೊಡೆಯುತ್ತಾ ಊರಿಗೊರೆ ಗದರಿಸುತ್ತಿದ್ದರು. ದನಕರುಗಳ ಪೀಡಾ ಪೋಗಲೆಂದು ಮುಂಜಾನೆ ದನದ ಕೊಟರಿಯ ಬಾಗಲಿಗೆ ಪುಂಡಿ ಇಲ್ಲದೆ ತೊಗರಿಕಟ್ಟಿಗೆ ಹಾಕಿ ಉರಿಹಚ್ಚಿ "ನನ್ನ ಪೀಡಾ ನನ್ನ ಎತ್ತಿನ ಪೀಡಾ ಹೊಳಿ ಆಚ್ಯಾಕೊ?..... ಎಂದು ಒಂದೊಂದು ದನಕರುಗಳ ಹೆಸರು ಹೇಳಿ ದಾಟಿಸಿದರು. ಅಕ್ಕ, ತಂಗಿಯರು, ಅಣ್ಣ ತಮ್ಮಂದಿರಿಗೆ, ಮಕ್ಕಳು ಕಾಕ ತಂದೆಯರಿಗೆ ಕೂಡಿಸಿ ಕಳಸ ಹಚ್ಚಿ ಬೆಳಗಿ ಹಣೆಗೆ ಕುಂಕುಮ ಹಚ್ಚಿದರು. ಮಧ್ಯಾಹ್ನದೊಳಗಾಗಿ ಹೋಳಿಗೆ, ಹುಗ್ಗಿ, ಅನ್ನ, ಅಂಬರದ ಅಡಿಗೆ ಆದ ಕೂಡಲೇ ಊರ ದೇವರಿಗೆ ನೈವೇದ್ಯಕೊಟ್ಟು ಜಗಲಿ ದೇವರ ಪೂಜೆ ಮಾಡಿ ಊರ ಜನ ಊಟ ಮಾಡಿದರು. ಒಕ್ಕಲಿಗರು ಹುಲಿಕಟ್ಟ ಆಟ ಆಡುತ್ತ ಕುಳಿತುಕೊಂಡರು.

ಸಾಯಂಕಾಲವಾಗುತ್ತಿದ್ದಂತೆ ಹೆಣ್ಣುಮಕ್ಕಳು ಕುತ್ತೆ ತೆಂಬಿಗೆ ತೆಗೆದುಕೊಂಡು ಅದರಲ್ಲಿ ಜೇಕಿನಿಂದ ಮಾಡಿದ ಸರ ಇಟ್ಟು ಗಂಗಾಳದಲ್ಲಿ ಕುತ್ತೆ ತೆಂಬಿಗೆ ಕೂಡಿಸಿ ಕಳಸ ಹಚ್ಚಿಕೊಂಡು ಪದ ಹಾಡುತ್ತ ಶಂಕರಲಿಂಗನ ಬಾವಿ ಕಡೆಗೆ ಹೊರಟರು.

ಆ ಕುಂಬಿ ಜರದಾವ ಈ ಕುಂಬಿ ಜರದಾವ
ಮ್ಯಾಳಿಗಿ ಕುಂಬಿ ಜರದಾವ ಕೋಲ
ಮ್ಯಾಳಿಗಿ ಕುಂಬಿ ಜರದಾವ ಗೌರಮ್ಮ
ಮಕ್ಕಳಿಲ್ಲಂತ ಸರದಾಳ ಕೋಲ

...ಬಾವಿಗೆ ಹೋಗಿ ಎಲ್ಲರೂ ನೀರು ಎಳೆದು ಮುಖ ತೊಳೆದುಕೊಂಡರು. ಬಾವಿ ಕಲ್ಲು ತೊಳೆದು ಚಂದ್ರ ಕುಂಕುಮ ಹಚ್ಚಿ ಪೂಜೆ ಮಾಡಿದರು. ಪೂಜೆ ಆದ ಕೂಡಲೆ ಮತ್ತೆ ಪದ ಹಾಡುತ್ತ ಸಾಲಾಗಿ ಹೊರಟರು. ಊರ ಹೊರಗಿರುವ ಹಣಮಂದೇವರಿಗೆ ಅಲ್ಲಿಂದ ಬಂದು ನಮಸ್ಕರಿಸಿ ತಮ್ಮತಮ್ಮ ಮನೆಗೆ ಹೋದರು. ....ಹೆಣ್ಣು ಮಕ್ಕಳು 'ಕೋಲಂಬಗುಳ್ಳಿ'[೨] ಆಡಿ ಬಂದ ಮೇಲೆ ಊರಿನವರ ದುಕಾನಗಳ ಪೂಜೆ ನಡೆಯಿತು" (ಚೆನ್ನಣ್ಣ ವಾಲೀಕಾರ; ೨೦೦೨; ಪುಟ : ೪೯).

ಪ್ರಾದೇಶಿಕವಾಗಿ, ಸಮುದಾಯದ ಹಿನ್ನೆಲೆಯಲ್ಲಿ ವಿಶಿಷ್ಟವೆಂದು ಗುರುತಿಸಲಾಗುವ ಇಂತಹ ಹಬ್ಬ-ಆಚರಣೆಗಳನ್ನು ಕಾದಂಬರಿಕಾರರು ತಮ್ಮ ಕಥನದ ಸಂದರ್ಭದ ಪ್ರಾದೇಶಿಕತೆಯನ್ನೇ ಆಧರಿಸಿ ಬರೆದಿದ್ದಾರೆಂದು ಹೇಳಲಾಗದು. ಅರವತ್ತರ ದಶಕದಲ್ಲಿ ಬರವಣಿಗೆಯನ್ನು ಕಂಡ ಈ ನೆಲದಲ್ಲಿ ಈ ಹಿಂದೆ ಘಟಿಸಿದ ಘಟನೆಗಳ ಪ್ರಭಾವವೂ ಇರುವ ಸಾಧ್ಯತೆಗಳಿವೆ. ದಸರಾ, ದೀಪಾವಳಿ ಹಬ್ಬಗಳ ಆಚರಣೆಯ ವಿಧಿವಿಧಾನಗಳು ಕಾಲಘಟ್ಟಕ್ಕನುಗುಣವಾಗಿ ಅನೇಕ ಬದಲಾವಣೆಗಳನ್ನು ಕಾಣುತ್ತವೆ. ಲೇಖಕರ ಬರವಣಿಗೆಯ ಸಂದರ್ಭಕ್ಕಾಗಲೇ ಈ ಪ್ರದೇಶದಲ್ಲಿನ ಆಚರಣೆಗಳಲ್ಲಿ ಬದಲಾವಣೆಗಳು ಕಂಡು ಬಂದಿರುವ ಸಾಧ್ಯತೆಗಳು ಇರುತ್ತವೆ. ಪ್ರಾದೇಶಿಕವಾಗಿ ವಿಶಿಷ್ಟ ಹಬ್ಬಾಚರಣೆಯ ಸೊಗಸನ್ನು ಕಾದಂಬರಿಯಲ್ಲಿ ಒಪ್ಪಿಕೊಳ್ಳುವುದು ಉಚಿತವೇ ವಿನಹ ಇವುಗಳ ಯಥಾವತ್ತಾದ ಮುಂದುವರಿಕೆಯು ಇಂದಿಗೂ ಈ ಪ್ರದೇಶದಲ್ಲಿ ಕಂಡುಬರುತ್ತದೆ ಎಂದು ಹೇಳಲಾಗದು. ಪ್ರದೇಶದಲ್ಲಿ ಕಂಡು ಬಂದ ಅನುಭವಗಳನ್ನು ಕಥನ ಹಂದರದಲ್ಲಿ ತೆರೆದಿಡುವ ಲೇಖಕರ ಮುಖ್ಯ ಕಾಳಜಿ ಈ ನೆಲದ ವೈಶಿಷ್ಟ್ಯವನ್ನು ಅನ್ಯಪ್ರದೇಶದ

ಆಚರಣೆಗಳೊಂದಿಗೆ ಸರಿಸಮವಾಗಿ ಬಿಂಬಿಸುವುದೇ ಆಗಿದೆ. ಆದರೆ ಈ ರೀತಿ ಬಿಂಬಿಸಲು ಊಹಾಪೋಹ, ಹುಸಿ ವರ್ಣನೆಗಳೇ ಇಲ್ಲಿ ತುಂಬಿವೆ ಎಂದು ನಿರ್ಧರಿಸುವಂತಿಲ್ಲ. ಸಾಹಿತ್ಯ ಬರವಣಿಗೆಯ ಆರಂಭಘಟ್ಟದಲ್ಲಿ ತನ್ನ ಪ್ರದೇಶದ ಮಣ್ಣಿನ ವಾಸನೆಯನ್ನು ಅನಾಯಸವಾಗಿ ಕಥನದಲ್ಲಿ ತಂದದ್ದು ಕಥನಕಾರರಲ್ಲಿದ್ದ ಪ್ರಾದೇಶಿಕ ಅನನ್ಯತೆ, ಅಭಿಮಾನವನ್ನೇ ಸೂಚಿಸುತ್ತದೆ.

ಕುವೆಂಪು, ಕಾರಂತರು ಮಲೆನಾಡ ಸಂದರ್ಭದಲ್ಲಿ ಕಟ್ಟಿಕೊಡುವ ಪ್ರಾದೇಶಿಕ ಆಚರಣೆ, ನಂಬಿಕೆಗಳು ಅವರ ಬರವಣಿಗೆ ಸಂದರ್ಭ ಹಾಗೂ ಹಿಂದಿನ ಕಾಲಘಟ್ಟಕ್ಕೆ ಅನ್ವಯಿಸುವಂತಹುಗಳಾಗಿವೆ. ಪ್ರಸ್ತುತ ವಿದ್ಯಾಮಾನಗಳು ಹಾಗೂ ಈ ಹಿಂದಿನ ಬದುಕಿನ ಬಗೆಗಿನ ಜ್ಞಾನ ಸಾಹಿತಿಗಳಿಗೆ ಅಗತ್ಯವಾಗಿದೆ. ಇಂತಹ ಭೂತ ವರ್ತಮಾನದ ಎಚ್ಚರಿಕೆಯಲ್ಲಿ ಸಾಹಿತ್ಯಿಕ ಬರಹ ಪಕ್ವತೆಯನ್ನು ಪಡೆಯುತ್ತದೆ.

ಓದು - ಬರಹ ಹೊಸ ಸಾಮಾಜಿಕ ಪರಿಸ್ಥಿತಿಯಲ್ಲಿ ಈ ಸಮುದಾಯಗಳ ಸಂವೇದನೆ ಭಿನ್ನತೆಯನ್ನು ಪಡೆದಿದೆ. 'ನೀರು ತಂದವರು' (ಅಮರೇಶ ನುಗಡೋಣಿ) ಕತೆಯ ಸಿದ್ಧಪ್ಪ ಮೇಲ್ವರ್ಗದವನಾದರೂ ದಲಿತರ ಬದುಕಲ್ಲಿ ಜಾಗೃತಿ ಮೂಡಿಸಲು ಪ್ರಯತ್ನಿಸುತ್ತಾನೆ. ಜಾತ್ಯಾತೀತನಾಗಿ ಬಾಳುವ ಆತನ ನಿಲುವು, ಕೆಳವರ್ಗದವರಲ್ಲೇ ಇರುವ ಕೆಲ ತಪ್ಪು ತಿಳುವಳಿಕೆಗಳನ್ನು ಕಳೆಯಲು ಪ್ರಯತ್ನಿಸುತ್ತಾನೆ. ಒಂದೊಮ್ಮೆ ದಲಿತರಿಗೆ ಅರ್ಥವಾಗದ ಈತನ ಸಂವೇದನೆಗಳು ಅಪಾರ್ಥಕ್ಕೀಡಾಗುತ್ತವೆ. ಅದಾಗ್ಯೂ ನೀರು ಕಸಿದುಕೊಂಡ ಮೇಲ್ವರ್ಗದವರಿಗೆ ದೊಣ್ಣೆಕೋಲು ಹಿಡಿದು ನಿಲ್ಲಬೇಕಾಗಿದ್ದ ಕೆಳವರ್ಗದವರು ನೀರು ತುಂಬಿ ಕೊಡುವ ಸೌಜನ್ಯ ಅವರ ಆಳದಲ್ಲಿ ಜಾಗೃತವಾದ ಪ್ರಜ್ಞೆಯನ್ನು ಸೂಚಿಸುತ್ತದೆ. ಮೇಲ್ವವರ್ಗದ ಅಹಂ ತೊರೆದಾಗಲೆ ಬದುಕಿನ ಸತ್ಯ, ಮಾನವೀಯತೆ, ಅಂತಃಕರಣಗಳು ತಿಳಿದುಬರುತ್ತವೆ ಎಂಬುದಕ್ಕೆ ಸಿದ್ಧಪ್ಪನ ವ್ಯಕ್ತಿತ್ವ ಮಾದರಿಯಾಗಿದೆ.

'ಸವಾರಿ' (ಅಮರೇಶ ನುಗಡೋಣಿ) ಕತೆಯಲ್ಲಿ ಫ್ಯೂಡಲ್‌ಗಳು ಬದಲಾದ ಸಾಮಾಜಿಕ ವ್ಯವಸ್ಥೆ ಯಲ್ಲಿ ರಾಜಕಾರಣಿಗಳಾಗಿ ಬೆಳೆಯಲು ಹಂಬಲಿಸುತ್ತಿರುವುದು ಕಂಡುಬರುತ್ತದೆ. ಮಲ್ಲಪ್ಪಗೌಡನ ದೌರ್ಜನ್ಯದಲ್ಲಿ ನಲುಗಿದ್ದ ಊರು ಆತನ ಮನೆತನಕ್ಕೆ ಗೌರವ ಸೂಚಿಸುತ್ತಿರಲಿಲ್ಲ. ಇದು ಮಲ್ಲಪ್ಪಗೌಡನ ಮಗ ಶಿವಪ್ಪಗೌಡನ ರಾಜಕೀಯ ಬೆಳವಣಿಗೆಗೆ ಅಡ್ಡಿಯಾಗಿತ್ತು. ವಿದೇಶಿ ಕಂಪನಿಗೆ ತನ್ನೂರಿನ ಮುನ್ನೂರು ಎಕರೆ ಜಮೀನು ಕೊಡಿಸಿ ಒಂದಕ್ಕೆ ಹತ್ತರಷ್ಟು ಲಾಭ ಮಾಡಿಕೊಳ್ಳುವ ವಿಚಾರ ಮಾಡಿದ್ದ ಶಿವಪ್ಪನ ಲೆಕ್ಕಾಚಾರಗಳೆಲ್ಲ ತಲೆಕೆಳಗಾಗಿದ್ದವು. ವಿದೇಶಿ ಕಂಪನಿಗೆ ಒಂದಕ್ಕೆ ಹತ್ತು ಪಟ್ಟು ಲಾಭದಲ್ಲಿ ಹೊಲ ಮಾರುವ ಹುನ್ನಾರ ನಡೆಸಿದ್ದ ಶಿವಪ್ಪಗೌಡನ ವಿಚಾರ ವಿದ್ಯಾವಂತ ಸಿದ್ಧಪ್ಪನಿಂದ ಹಾಗೂ ಕೇರಿಯ ಸುಶಿಕ್ಷಿತನಾಗಿದ್ದ ಗೋವಿಂದನಿಂದ ಊರಿನ ಜನರಿಗೆ ತಿಳಿಯಿತು. ಶಿವಪ್ಪನ ಆಮಿಷಕ್ಕೆ ಒಳಗಾಗಿ ಗೋವಿಂದ ಊರಿನಲ್ಲಿ ಗೌಡನ ಪರವಾಗಿ ಮಾತನಾಡತೊಡಗಿದ. ವಿದೇಶಿ ಕಂಪನಿಯಲ್ಲಿ ತಮಗೆ ದುಡಿಯಲು ಕೆಲಸ ಸಿಗುತ್ತದೆ ಹಾಗೂ ಬೀಳು ಬಿದ್ದಿರುತ್ತಿದ್ದ ಭೂಮಿಯಲ್ಲಿ ಕೃಷಿ ಮುಂದುವರಿಕೆ ಅಸಾಧ್ಯವೆನಿಸಿ ಜನ ಹೊಲಗಳನ್ನು ಗೌಡನಿಗೆ ಮಾರಲು ಮುಂದಾದರು. ತಂದೆ ಊರಿನಲ್ಲಿ ಕಳೆದುಕೊಂಡಿದ್ದ ಹೆಸರನ್ನು ಪುನಃ

ರೂಪಿಸಿಕೊಳ್ಳಲು, ರಾಜಕೀಯವಾಗಿ ತಾನು ಬೆಳೆಯಲು ಊರಿನ ಜನರ ಸಹಕಾರದ ಅಗತ್ಯವಿದ್ದ ಶಿವಪ್ಪ ಅದಕ್ಕಾಗಿ ಕಾಯುತ್ತಿದ್ದ. ತನ್ನೀಕಾರ್ಯಕ್ಕೆ ತಂದೆಯ ಸಾವು ಸಹಾಯವಾಗಬಹುದೇನೋ ಎಂದು ಯೋಚಿಸಿದ. ಆದರೆ ಶಿವರಾತ್ರಿ ದಿನ ತಂದೆ ಸಾಯಲಿ ಎಂದು ಮಾಡಿಸಿದ ಪೂಜೆಗಳೆಲ್ಲ ವ್ಯರ್ಥವಾದವು. ಪಾರ್ಟಿಯ ಮೀಟಿಂಗಿಗೆ ಹೋಗಲೇಬೇಕಾದ ತುರ್ತು ಹಾಗೂ ತಂದೆಯ ಸಾವು ಶಿವಪ್ಪನನ್ನು ಇಕ್ಕಟ್ಟಿನಲ್ಲಿ ಸಿಗಿಸುತ್ತದೆ. ಮನೆಯ ಮಠದಯ್ಯನಿಗೆ ಸಾವಿನ ಸುದ್ದಿ ಮುಚ್ಚಿಡುವಂತೆ ಹೇಳಿ ಪಕ್ಷದ ಮೀಟಿಂಗಿಗೆ ಹೊರಟು ಹೋಗುತ್ತಾನೆ. ಗೊಂದಲಕ್ಕೆ ಸಿಗುವ ಮಠದಯ್ಯ ಹಾಗೂ ಶಿವಪ್ಪನ ಹೆಂಡತಿ ಘಟಿಸುವ ಘಟನೆಗಳನ್ನು ಕನಸಿನಲ್ಲೆ ಕಂಡು ತಿಳಿಯುತ್ತಿದ್ದ ಹೊಲೆಯ ವಜ್ರಪ್ಪನ ಆಗಮನ ಕಂಡು ಭೀತರಾಗುತ್ತಾರೆ. ಸಾವಿನ ಸುದ್ದಿಯನ್ನು ಮುಚ್ಚಿಟ್ಟ ಮಠದಯ್ಯ ವಜ್ರಪ್ಪನ ಗುರು ಕಾಡುಸಿದ್ಧ ಬರುವುದನ್ನು ತಿಳಿದು ಶಿವಪ್ಪನ ತಂದೆಯ ಸಾವನ್ನು ಘೋಷಿಸುತ್ತಾನೆ. ವಜ್ರಪ್ಪನ ಸತ್ಯವನ್ನು ತುಳಿದು ಆತನನ್ನು ಮೂಲೆಗೆ ತೂರಿ ಕಾಡುಸಿದ್ಧನಂತವರನ್ನು ತಮ್ಮ ಕಾರ್ಯಕ್ಕೆ ಬಳಸಿಕೊಂಡು ಬಿಡುವ ಮೇಲ್ವರ್ಗದ ಶೋಷಣೆ ಕ್ರೂರವಾಗಿದೆ. ಮೇಲ್ವರ್ಗದವರಿಂದಾಗುವ ಶೋಷಣೆ, ಜಾಗತೀಕರಣದಿಂದಾಗಿ ವಿದೇಶಿ ಕಂಪನಿಗಳು ಬುದ್ಧಿಹೀನ ಫ್ಯೂಡಲ್‌ಗಳನ್ನು ಬಳಸಿಕೊಳ್ಳುತ್ತಿರುವ ರೀತಿ ಸರಣಿ ಸವಾರಿಯ ಎರಡೂ ಮಾದರಿಗಳು ಇಲ್ಲಿ ಕಂಡು ಬರುತ್ತವೆ. ಈ ಎರಡೂ ಸವಾರಿಗಳಿಂದ ಉಂಟಾಗುವ ದುಷ್ಪರಿಣಾಮಗಳನ್ನು ಅಂತಿಮವಾಗಿ ಅನುಭವಿಸುವವರು ಜನಸಾಮಾನ್ಯರೆ ಎಂಬುದು ಬದಲಾಗದ ಸತ್ಯವಾಗಿದೆ.

ಮೇಲ್ವರ್ಗದ ಸಮುದಾಯಗಳಲ್ಲಿರುವ ಕೆಲ ಧೂರ್ತ ಫ್ಯೂಡಲ್‌ಗಳಿಗೆ, ಸ್ವಾರ್ಥಿಗಳಿಗೆ ತಮ್ಮ ಕ್ರೂರ ಬದುಕಿನ ಬಗ್ಗೆ ಪಶ್ಚಾತಾಪದ ನೋವೊಂದು ಕಂಡುಬರುವುದಾಗಲಿ, ಇಡೀ ವ್ಯವಸ್ಥೆಗೆ ತಮ್ಮಿಂದಾಗಿರುವ ಅನ್ಯಾಯದ ಪ್ರಜ್ಞೆಯಾಗಲಿ ಮೂಡಿದಂತೆ ಕಂಡು ಬರುವುದಿಲ್ಲ. ಹೊಸ ವೇಷದಲ್ಲಿ ಶೋಷಣೆಯ ವಿಭಿನ್ನ ಮುಖಗಳನ್ನು ಹೊತ್ತು ಸಾಗುತ್ತಿರುವವರು ತಮ್ಮ ಸ್ವಾರ್ಥಕ್ಕೆ ನಿಂತ ನೆಲವನ್ನು ಮಾರಿಕೊಳ್ಳುವ ಹೇಯ ಕೃತ್ಯಕ್ಕೂ ಇಳಿದಿದ್ದಾರೆ. ಇಲ್ಲಿನ ಬಹುಪಾಲು ಮೇಲ್ವರ್ಗದ ಬದುಕಿನ ರೀತಿಯು ಅದರದೇ ಆದ ಸತ್ವಯುತ ಸಂವೇದನೆಯನ್ನು ಕಟ್ಟಿಕೊಳ್ಳುವಲ್ಲಿ ವಿಫಲವಾಗಿದೆ. ದೂರ್ತತನದ ಸ್ವಾರ್ಥ ಬದುಕಿಗೆ ತನ್ನ ನೆಲೆಯ ಅರಿವಿಲ್ಲ, ಅನ್ಯ ಸಮುದಾಯಗಳ ಸಂವೇದನೆಗಳನ್ನು ತಿಳಿಯುವ ಸೂಕ್ಷ್ಮತೆಯೂ ಇಲ್ಲದಾಗಿದೆ. ವಿರೂಪಾಕ್ಷಸ್ವಾಮಿ (ಸಂಬಂಧಗಳು), ಸಿದ್ಧಪ್ಪ(ನೀರು ತಂದವರು)ನಂತಹ ಕೆಲವೇ ವ್ಯಕ್ತಿಗಳು ಮಾತ್ರವೇ ಸತ್ವಯುತವಾದಂತ ನಿಲುವನ್ನುಳ್ಳವರು.

### ಫ್ಯೂಡಲ್ ವ್ಯವಸ್ಥೆ ಮತ್ತು ಮೇಲ್ವರ್ಗದ ಸ್ತ್ರೀ

ಫ್ಯೂಡಲ್ ವ್ಯವಸ್ಥೆಯಲ್ಲಿ ಕೆಳವರ್ಗದ, ಅಸಹಾಯಕ ಸ್ತ್ರೀ ಬದುಕು ನಲುಗಿರುವುದು ಶಾಪವಾಗಿಯೇ ಉಳಿದಿದೆ. ಆದರೆ ಗೌಡ, ಕುಲಕರ್ಣಿ, ಪಟೇಲನಂತಹ ಫ್ಯೂಡಲ್‌ಗಳ ದಬ್ಬಾಳಿಕೆಯನ್ನು ವಿಧಿಯಿಲ್ಲದೆ ಅನುಭವಿಸಬೇಕಾದ ಸ್ಥಿತಿ ಮೇಲ್ವರ್ಗದ ಮಹಿಳೆಯರನ್ನೂ ಬಾಧಿಸಿದೆ. ದರ್ಪ, ದಬ್ಬಾಳಿಕೆಯ ಗೌಡನ ನಿರ್ವೀರ್ಯತೆಯನ್ನು ಮೀರಿ ತಮ್ಮ ಬದುಕನ್ನು ಕಟ್ಟಿಕೊಂಡ ಈ ಮಹಿಳೆಯರ ಸಂವೇದನೆಯು

ವಿಶಿಷ್ಟವಾದಂತಹದ್ದು. ಆರ್ಥಿಕ ಅಸಾಹಯಕತೆಯ, ಒತ್ತಾಯದ ಜೀವನಕ್ಕೆ ಇಂತಹ ಸ್ತ್ರೀ ಬದುಕಿನ ಭಾವನೆಗಳು ಬಲಿಯಾಗಿವೆ. ತನ್ನ ಇಚ್ಛೆಯನ್ನರಿಯದ ಹೆತ್ತವರಿಂದಾಗಲೀ ಮುದಿವಯಸ್ಸಿನ, ಕ್ರೂರಿಯಾದ ಗೌಡನಿಂದಾಗಲಿ ತನ್ನ ಬದುಕಿಗೆ ದೊರೆಯದ ನ್ಯಾಯವನ್ನು ತಾನೇ ಕಂಡುಕೊಳ್ಳುವಲ್ಲಿ ಈ ಮಹಿಳೆ ಗಟ್ಟಿಗೊಂಡಿದ್ದಾಳೆ. ಆದರೆ ಸ್ತ್ರೀಯರು ಈ ರೀತಿ ಗಟ್ಟಿಗೊಳ್ಳುವ ಅನಿವಾರ್ಯದ ಪರಿಸ್ಥಿತಿಯನ್ನು ಫ್ಯೂಡಲ್ ವ್ಯವಸ್ಥೆಯೇ ರೂಪಿಸಿದೆ ಎಂಬುದು ಮುಖ್ಯ ವಿಚಾರವಾಗಿದೆ. ಯಾವ ಅನೈತಿಕತೆಯಿಂದ ಫ್ಯೂಡಲ್ ವ್ಯವಸ್ಥೆ ತಳಸಮುದಾಯದ ಇಲ್ಲವೆ ಅಸಹಾಯಕರಾದ ಸ್ತ್ರೀ ಬದುಕನ್ನು ನಾಶಗೊಳಿಸಿತ್ತೊ ಅಂತಹ ಅನೈತಿಕ ಮಾರ್ಗದಿಂದಲೇ ಮೇಲ್ವರ್ಗದ ಸ್ತ್ರೀಯರು ತಮ್ಮ ಬದುಕಿಗೆ ನ್ಯಾಯವನ್ನು ಕಂಡುಕೊಂಡಿದ್ದಾರೆ. ಈ ಮೂಲಕ ವ್ಯವಸ್ಥೆಯ ಕ್ರೌರ್ಯವನ್ನು ಹೀಗಳೆದು ಅನೈತಿಕತೆಯಿಂದಲೇ ನೈತಿಕ ನೆಲೆಯೊಂದನ್ನು ಬದುಕಲ್ಲಿ ಕಂಡುಕೊಂಡಿದ್ದಾರೆ.

'ಮಾಯೆ ಅಂದ್ರೆ ಮಾಯೆ' (ಶಾಂತರಸ) ಕತೆಯ ರಾಚಮ್ಮ ಗಂಗ್ಯಾನನ್ನು ಮನಸಾರೆ ಮೆಚ್ಚಿ ಮದುವೆಯಾಗಲಿಚ್ಛಿಸಿದಳು. ಆಕೆಯ ಬಯಕೆ ಕೈಗೂಡದೆ ಗಂಗ್ಯಾ ಊರುಬಿಟ್ಟ, ರಾಚಮ್ಮನನ್ನು ಮುದಿಗೌಡನಿಗೆ ಮದುವೆ ಮಾಡಿ ಕೊಡಲಾಯಿತು. ಗೌಡನ ಮನೆಯಲ್ಲಿ ಎಲ್ಲಾ ಬಗೆಯ ಸಂಪತ್ತು, ಆಳುಕಾಳು ಇದ್ದಾಗ್ಯೂ ರಾಚಮ್ಮನ ಬದುಕಿಗೆ ನೆಮ್ಮದಿಯೇ ಇರಲಿಲ್ಲ. ಕ್ರೂರಿಯಾಗಿ ವರ್ತಿಸುವ ಗೌಡನ ಶೋಷಣೆಯನ್ನು ಎದುರಿಸುತ್ತಲೇ ಬಂದ ರಾಚಮ್ಮ ಗಂಗ್ಯಾನೊಂದಿಗೆ ಹೊರಟು ಹೋಗುತ್ತಾಳೆ. ಮದುವೆಯ ನಂತರದ ಈ ಆಯ್ಕೆ ಸಮಾಜದಿಂದ ಮಾನ್ಯತೆ ಪಡೆಯದು ಎಂದು ಹೊಯ್ದಾಡುವ ರಾಚಮ್ಮ ಕೊನೆಗೆ ತನ್ನ ನಿರ್ಧಾರಕ್ಕೆ ಬದ್ಧವಾಗುತ್ತಾಳೆ. ಒಪ್ಪಿತವಲ್ಲದ ಬದುಕಿನಲ್ಲಿ ಅನುಭವಿಸುವ ನೋವಿನಿಂದ ದೂರವಾಗಿ ಗಂಗ್ಯಾನೊಂದಿಗೆ ಸಂಸಾರ ಮಾಡಲು ಮುಂದಾಗುತ್ತಾಳೆ. ಗೌಡನಿಗೆ ಅಪಮಾನ ವಾಗುವ ರೀತಿಯಲ್ಲಿ ಆತನ ತಾಳಿಯನ್ನು ಒಡೆದ ಮಡಿಕೆಯಲ್ಲಿಟ್ಟು ಅದರ ಮೇಲೆ ಚಪ್ಪಲಿಗಳನ್ನಿರಿಸಿ ಹೋಗಿರುತ್ತಾಳೆ. ಮುಂದಿನ ಬದುಕಿನ ಎಲ್ಲಾ ಜವಾಬ್ದಾರಿಗಳನ್ನರಿತು ಗೌಡನಿಗೆ ಧಿಕ್ಕಾರ ಹಾಕಿ ಹೊರಡುವ ಗಟ್ಟಿತನಕ್ಕೆ ಆಕೆಯ ನಿರ್ಧಾರ ಪಕ್ವಗೊಂಡಿರುತ್ತದೆ.

'ಕಾಗೆ ಮುಟ್ಟಿತು' (ಗೀತಾ ನಾಗಭೂಷಣ) ಕಾದಂಬರಿಯಲ್ಲಿ ಸಾವಿನ ನಂತರದ ಸಂಸ್ಕಾರದಿಂದ ಬಯಲಾಗುವ ಸತ್ಯ ಫ್ಯೂಡಲ್ ವ್ಯವಸ್ಥೆಯ ಕ್ರೌರ್ಯವನ್ನು ಮೆಟ್ಟಿನಿಲ್ಲುತ್ತದೆ. ದರ್ಪ, ದೌರ್ಜನ್ಯ, ಅತ್ಯಾಚಾರಗಳಿಗೆ ಹೆಸರಾಗಿದ್ದ ಶಾಂತಪ್ಪಗೌಡನ ಮಗ ಉಗ್ರಪ್ಪಗೌಡನ ಕ್ರೌರ್ಯ ವಿಕೃತವಾದದ್ದು. ಭೂಕಂಪದಿಂದ ದಿಕ್ಕೆಟ್ಟು ಬಂದಿದ್ದ ಬಾಳ್ಯಾ ಹಾಗೂ ಸೋನಿ ದಂಪತಿಗಳು ಕೆಳವರ್ಗದವರಾಗಿದ್ದರು. ಉಗ್ರಪ್ಪಗೌಡನ ಆಶ್ರಯಕ್ಕೆ ಬಂದಿದ್ದ ಈ ಸಂಸಾರ ಆರಂಭದಲ್ಲಿ ನೆಮ್ಮದಿಯನ್ನು ಕಂಡಿತಾದರೂ ಬಹಳ ದಿನಗಳವರೆಗೆ ಅದು ಉಳಿಯಲಿಲ್ಲ. ಸೋನಿಯ ಸೌಂದರ್ಯಕ್ಕೆ ಮಾರುಹೋದ ಉಗ್ರಪ್ಪಗೌಡ ಆಕೆಯನ್ನು ಬಲವಂತವಾಗಿ ಭೋಗಿಸುತ್ತಾನೆ. ವಿಷಯ ತಿಳಿದ ಬಾಳ್ಯಾ ಸಂಸಾರದಿಂದ ವಿಮುಖನಾಗುತ್ತಾನೆ. ಗೌಡನ ಹೆಂಡತಿ ಗಂಗಮ್ಮ ಗಂಡು ಸಂತಾನವನ್ನು ಪಡೆಯಲು ಅಪೇಕ್ಷಿಸುತ್ತಾಳೆ. ಆದರೆ ಗೌಡನ

ದೌರ್ಜನ್ಯ, ನಿರ್ಲಕ್ಷ್ಯಕ್ಕೆ ಬೇಸತ್ತು ಬಾಳ್ಯಾನಿಂದ ಗಂಡು ಮಗುವನ್ನು ಪಡೆಯುತ್ತಾಳೆ. ಅದುವರೆಗೂ ತನ್ನ ಆಳಿನ ಜೀವನವನ್ನು ಭೋಗಿಸಿದ ದೊಡ್ಡಸ್ತಿಕೆಯಲ್ಲಿಯೇ ಇದ್ದ ಗೌಡನಿಗೆ ಬಾಳ್ಯಾನ ಸಾವಿನ ಸಂಸ್ಕಾರದಲ್ಲಿ ಸತ್ಯ ತಿಳಿಯುತ್ತದೆ. ಪಿಂಡದ ಊಟವನ್ನು ಕಾಗೆ ಮುಟ್ಟದೆ ಹೋದಾಗ ಗೌಡತಿ ತನ್ನ ಮಗ ಶರಣಬಸವನ ಕೈಯಿಂದ ಲೋಬಾನ ಹಾಕಿಸಿ ಹೇಳಿದ ಮಾತುಗಳಿಂದ ಹೊರಟ ಸಂಶಯದ ಸುಳಿ ಸತ್ಯವನ್ನು ಹೊರಹಾಕುತ್ತದೆ. ಗೌಡನನ್ನು ದಿಗ್ಭ್ರಾಂತನನ್ನಾಗಿ ಮಾಡುವ ಈ ಸತ್ಯ ಗೌಡತಿಯ ದಿಟ್ಟತನವನ್ನೇ ತಿಳಿಸುತ್ತದೆ. 'ಹಸಿ ಮಾಂಸ ಮತ್ತು ಹದ್ದುಗಳು' (ಗೀತಾ ನಾಗಭೂಷಣ) ಕಾದಂಬರಿಯಲ್ಲಿ ಕುಲಕರ್ಣಿ ಛಾಜಾದ ನೆಪದಲ್ಲಿ ಕೆಳವರ್ಗದ ಸ್ತ್ರೀಯರನ್ನು ಬಲಾತ್ಕಾರದಿಂದ ಭೋಗಿಸುತ್ತಾನೆ. ಕುಲಕರ್ಣಿಯ ಹೆಂಡತಿ ಹೀರಾಬಾಯಿ ಗಂಡನಿಗೆ ಗೊತ್ತಿಲ್ಲದಂತೆ ಆಳು ಮಗ ಕಾಳ್ಯಾನೊಂದಿಗೆ ಅನೈತಿಕ ಸಂಬಂಧವನ್ನು ಉಳಿಸಿಕೊಳ್ಳುತ್ತಾಳೆ.

'ಧರ್ಮ-ಬೇಲಿ-ಬದುಕು' (ಶ್ರೀಕಾಂತ ಪಾಟೀಲ) ಕತೆಯಲ್ಲಿ ಸಾಹುಕಾರ ಶರಣಪ್ಪನನ್ನು ಮಲ್ಲಮ್ಮ ವಿವಾಹವಾಗುತ್ತಾಳೆ. ಶರಣಪ್ಪನ ನಿರ್ವೀಯತೆಯ ಅನುಭವದಿಂದ ಬೇಸತ್ತ ಮಲ್ಲಮ್ಮ ಸೋದರ ಮಾವನೊಂದಿಗೆ ಸಂಬಂಧವನ್ನು ಇಟ್ಟುಕೊಳ್ಳುತ್ತಾಳೆ. ಗಂಡನನ್ನು ಬಿಟ್ಟು ಹೋಗದೆ, ವಿವಾಹಿತ ಸ್ತ್ರೀಗೆ ಸಿಗಬೇಕಾದ ಸಾಂಪ್ರದಾಯಿಕ ಗೌರವ ಮರ್ಯಾದೆಗಳನ್ನು ಕಾಯ್ದುಕೊಳ್ಳಬಯಸುವ ಮಲ್ಲಮ್ಮ ತಾಯಿಯಿಂದ ಹಾಗೂ ಚಿಕ್ಕಮ್ಮನಿಂದ ಈ ಕಾರ್ಯಕ್ಕೆ ಬೆಂಬಲ ಪಡೆಯುತ್ತಾಳೆ. ಇವಳ ಜೀವನದ ಗುಟ್ಟು ತಿಳಿದು ಹೀಯಾಳಿಸುವ ಜನ ಕ್ರಮೇಣ ಆಕೆಯ ತಪ್ಪನ್ನು ಒಪ್ಪುತ್ತಾರೆ.

ಇದೇ ರೀತಿಯ ಸಮಸ್ಯೆ ಹನುಮಕ್ಕನ ಮಗಳು ಶಾಂತಾಳಿಗೆ ಒದಗುತ್ತದೆ. ಮಲ್ಲಮ್ಮನಿಂದ ಈ ರೀತಿಯ ಅನ್ಯ ಸಂಬಂಧಗಳ ಸಲಹೆ ಪಡೆದ ಶಾಂತ ಅದನ್ನು ನಿರಾಕರಿಸುತ್ತಾಳೆ. ಗೌಡನಿಗೆ ವಿಚ್ಛೇದನ ಕೊಟ್ಟು ಸ್ವಾವಲಂಬಿಯಾಗಿ ಬದುಕುವ ನಿರ್ಧಾರವನ್ನು ಶಾಂತ ಕೈಗೊಳ್ಳುತ್ತಾಳೆ. ಯಾವ ಕಾರಣಕ್ಕೂ ತನ್ನ ನೈತಿಕತೆಯನ್ನು ಬಿಡಲು ಇಚ್ಛಿಸಿದ ಶಾಂತಳ ನಿಲುವು ಧರ್ಮದ ಬೇಲಿಯಲ್ಲಿ ಅನೈತಿಕ ಬದುಕನ್ನು ಕಟ್ಟಿಕೊಳ್ಳಲು ಇಚ್ಛಿಸುವುದಿಲ್ಲ.

'ಹೊತ್ತು ಮೂಡುವ ಸಮಯ' (ಅಮರೇಶ ನುಗಡೋಣಿ) ಕತೆಯ ಅಕ್ಕಮ್ಮ ದೊಡ್ಡನಗೌಡನ ಮೂರನೆ ಹೆಂಡತಿ. ಗಂಡನ ಕ್ರೌರ್ಯಕ್ಕೆ ನಿರ್ವೀರ್ಯತನಕ್ಕೆ ಇಬ್ಬರು ಹೆಂಡತಿಯರು ಕಣ್ಮುಚ್ಚಿದ್ದರು. ಸುಖವಿಲ್ಲದ ಅಕ್ಕಮ್ಮನ ಜೀವನಕ್ಕೆ ಆಸರೆಯಾಗ ಬಯಸಿದ್ದ ಕೆಳಜಾತಿಯ ಲಿಂಗನನ್ನು ಗೌಡ ಕೊಲ್ಲಿಸುತ್ತಾನೆ. ಒಬ್ಬಂಟಿಗಳಾಗಿ ಜೀವನದಲ್ಲಿ ಜಿಗುಪ್ಸೆಗೊಂಡಿದ್ದ ಅಕ್ಕಮ್ಮ ಓರಗಿತ್ತಿ ಸಿದ್ಲಿಂಗಮ್ಮ ಮಕ್ಕಳಿಲ್ಲದ ಅಕ್ಕಮ್ಮನನ್ನು ಬಂಜೆಯೆಂದದ್ದಲ್ಲದೆ, ತನ್ನ ಮಕ್ಕಳೇ ಮುಂದೆ ಆಸ್ತಿಯ ಹಕ್ಕುದಾದರರೆಂಬ ವಿಚಾರ ಮಾತಾಡಿದ್ದನ್ನು ಕೇಳಿ ದಿಗ್ಭ್ರಾಂತಳಾಗುತ್ತಾಳೆ. ಬಂಜೆಂಬ ಶಬ್ದ ಕೇಳದೆ ತನ್ನ ಬಗ್ಗೆ ನಂಬಿಕೆ ಇರುವ ಅಕ್ಕಮ್ಮ ಆಗುಂತಕನಾಗಿ ಬಂದಿದ್ದ ಲಿಂಗನ ಮಗನಿಂದ ತನ್ನ ಬಯಕೆ ಈಡೇರಿಸಿಕೊಳ್ಳುತ್ತಾಳೆ.

ಫ್ಯೂಡಲ್ ವ್ಯವಸ್ಥೆಯ ದರ್ಪದಲ್ಲಿ ತಮ್ಮ ಕನಸುಗಳನ್ನು ಕಳೆದುಕೊಂಡ 'ರಾಚಮ್ಮ' (ಮಾಯಿ ಅಂವ್ರೆ ಮಾಯಿ), 'ಗಂಗಮ್ಮ' (ಕಾಗೆ ಮುಟ್ಟಿತು) ಮಲ್ಲಮ್ಮ, (ಧರ್ಮ-ಬೇಲಿ-ಬದುಕು), ಅಕ್ಕಮ್ಮ (ಹೊತ್ತು ಮೂಡುವ ಸಮಯ)ರಂತಹ ಸ್ತ್ರೀಯರ ವಿವಾಹ ಬಾಹಿರ ಸಂಬಂಧವು ಇಲ್ಲಿ ಅನೈತಿಕ ನೆಲೆಯನ್ನು ಪಡೆಯುವುದಿಲ್ಲ. ತಮ್ಮ ಬದುಕಿನಲ್ಲಿ ಎರಗಿದ ಅಪವಾದ, ಸ್ವಾತಂತ್ರ ಹೀನ ಸ್ಥಿತಿಯನ್ನು ಅದೇ ವ್ಯವಸ್ಥೆಯೊಳಗಿದ್ದು ಪಡೆಯುವ ದಿಟ್ಟತನವನ್ನು ತೋರಿದವರು. ಸ್ವಭಾವತಃ ಕಾಮುಕರಲ್ಲದ ಇಂತಹ ಮಹಿಳೆಯರ ಈ ಪರಿಸ್ಥಿತಿಗೆ ಕಾರಣವಾಗುವ ಫ್ಯೂಡಲ್ ವ್ಯವಸ್ಥೆಯ ಪುರುಷರ ವರ್ತನೆ ಮತ್ತೊಂದು ರೀತಿಯಲ್ಲಿ ಹೆಣ್ಣಿನ ಬದುಕಿಗೆ ನೋವನ್ನೆ ಉಂಟು ಮಾಡುತ್ತದೆ. ಮದುವೆಯಾದ ಹೆಣ್ಣು ಎಂಬ ಅಳುಕಿನಲ್ಲಿ ಹೊಯ್ದಾಡುವ ರಾಚಮ್ಮ, ಮಕ್ಕಳನ್ನು ಪಡೆದು ತಮ್ಮ ಬದುಕನ್ನು ಭದ್ರಗೊಳಿಸಿಕೊಳ್ಳಬೇಕೆಂಬ ಗಂಗಮ್ಮ, ಅಕ್ಕಮ್ಮ ಜೀವನದಲ್ಲಿ ಎದುರಾದ ಅಭಾವಕ್ಕೆ ಸೋತವರೆ ವಿನಹ ಅನವಶ್ಯಕವಾಗಿ ಮೈಮರೆತವರಲ್ಲ. ಕಂಬಾರರ 'ನವಿಲೇ ನವಿಲೇ'[5] ಕಾವ್ಯದಲ್ಲಿ ಬರುವಂತೆ ಇದು ಉದ್ಧಾರಕ್ಕಾಗಿ ಕೈಗೊಂಡ ಮಹಾನ್ ಕಾರ್ಯವೇ ವಿನಹ ಕಾಮುಕತನದ ಕ್ಷಣಿಕ ತೃಪ್ತಿಯಲ್ಲ. ಕುಲಕರ್ಣಿಯ ಹೆಂಡತಿ 'ಹೀರಾಬಾಯಿ' (ಹಸಿಮಾಂಸ ಮತ್ತು ಹದ್ದುಗಳು) ಕಾಮುಕಳೆನಿಸಿದರೂ ತನ್ನ ಮನಸ್ಥಿತಿಗೆ ಒಗ್ಗದ ಹಾಗೂ ಬೇರೆ ಬೇರೆ ಹೆಣ್ಣುಗಳಲ್ಲಿ ಮೈಮರೆತು ಹೆಂಡತಿಯನ್ನೇ ಮರೆತವನಿಗೆ ಕೊಡುವ ತಿರುಗೇಟನಂತಿದೆ. ಯಾವೆಲ್ಲ ಕಾರಣದಿಂದ ಸ್ತ್ರೀ ಬದುಕಿನ ಈ ಮಾರ್ಗ ಸೂಕ್ತವಾದದ್ದು ಎಂದು ಒಪ್ಪಿ ಮೆಚ್ಚುವುದಕ್ಕಿಂತ ಸ್ತ್ರೀಯರನ್ನು ಇಂತಹ ಸ್ಥಿತಿಗೆ ತಳ್ಳುವ ಪುರುಷ ಸಮಾಜವನ್ನು ಬದಲಾಯಿಸುವ ಮಾರ್ಗೋಪಾಯಗಳೇ ಇಲ್ಲದಂತಾಗಿವೆ.

ಮೇಲ್ವರ್ಗದ ಗೌಡ, ಕುಲಕರ್ಣಿಯರ ಹೆಂಡತಿಯನ್ನು ಭೋಗಿಸುವುದು ಕೆಳವರ್ಗದ ಯುವಕರ ಗೆಲುವೆಂದು ಹೇಳಲಾಗದು. ತಮ್ಮದಲ್ಲದ ತಪ್ಪಿಗೆ ಬಲಿಯಾಗುವ ಯುವಕರ ಬಾಳು ಮತ್ತೊಂದು ರೀತಿಯ ಶೋಷಣೆಯನ್ನು ಅನುಭವಿಸುವುದು ಅಮಾನವೀಯವಾಗಿಯೇ ಕಂಡುಬರುತ್ತದೆ.

## ಮುಸ್ಲಿಂ ಸಮುದಾಯದ ಸಂವೇದನೆ

ಮುಸ್ಲಿಂ ಸಮುದಾಯ ಪ್ರಭುತ್ವದ ಕೋಮಾಗಿದ್ದ ಕಾರಣ ಸ್ವಾತಂತ್ರ್ಯಪೂರ್ವ ಹಾಗೂ ಸ್ವಾತಂತ್ರ್ಯ ನಂತರ ಇವರ ಬದುಕಿನ ಬಗೆಗಿನ ಸ್ಥಿತ್ಯಂತರಗಳನ್ನು ಇಲ್ಲಿನ ಕಥನ ತಿಳಿಸುತ್ತದೆ. ಮುಸ್ಲಿಂ ಸಮುದಾಯ ಹಿಂದೂಗಳೊಂದಿಗೆ ಸೌಹಾರ್ದಯುತವಾಗಿ ಬಾಳಿದ್ದ ಕಾಲವು ಅಂದು, ಇಂದೂ ಸಹ ಹೈದರಾಬಾದ್ ಕರ್ನಾಟಕದಲ್ಲಿ ಕಂಡುಬರುತ್ತದೆ. ಆದರೆ ಹಿಂದೂ-ಮುಸ್ಲಿಂ ಸಮುದಾಯಗಳಲ್ಲಿನ ಕೆಲ ಸ್ವಾರ್ಥಿಗಳಿಂದಾಗಿ ರಜಾಕಾರರಂತಹ ದೂರ್ತ ಶಕ್ತಿಗಳು ಇಲ್ಲಿ ಹುಟ್ಟಿ ಬೆಳೆದು ಪರಿಸ್ಥಿತಿಯನ್ನು ಹದಗೆಡಿಸಿರುವುದು ಕಂಡುಬರುತ್ತದೆ. ರಜಾಕಾರರ ಹಾವಳಿಯಂತಹ ಸಂದರ್ಭದಲ್ಲಿಯೂ ಹಿಂದೂ-ಮುಸ್ಲಿಂ ಬಾಂಧವ್ಯ ಸೌಹಾರ್ದಯುತವಾಗಿ ಕಂಡುಬಂದದ್ದು 'ಉರಿದ ಬದುಕು' (ಶಾಂತರಸ), 'ಹಾಲುಜೇನು' (ಜಯತೀರ್ಥ ರಾಜಪುರೋಹಿತ), 'ಬಡೇಸಾಬು ಪುರಾಣ' (ಶಾಂತರಸ) ಮುಂತಾದ ಕಥೆಗಳಿಂದ ತಿಳಿದುಬರುತ್ತದೆ. 'ಉರಿದ ಬದುಕು' ಕತೆಯ ಮಾಬಮ್ಮನ ತ್ಯಾಗ ಜಾತ್ಯಾತೀತ ಮನೋಭಾವದ ಪ್ರತೀಕವಾಗಿದೆ.

'ಹಾಲುಜೇನು' ಕಾದಂಬರಿಯಲ್ಲಿ ಪೀರ ಮತ್ತು ಆತನ ಕುಟುಂಬದವರು ಅನ್ಯಕೋಮಿನ ಜನರೊಂದಿಗೆ ಹೊಂದಿದ್ದ ಬಾಂಧವ್ಯ ಇಡೀ ಕುಟುಂಬವನ್ನು ಕಾಯ್ದುಕೊಂಡು ಹೋಗುತ್ತದೆ. 'ಬಡೇಸಾಬು ಪುರಾಣ' ಕತೆಯಲ್ಲಿ ಬಡೇಸಾಬುನಿಂದ ಉಂಟಾಗಿದ್ದ ಜಾತಿ ಪ್ರತಿಷ್ಠೆಗಳೂ ಹಿಂದೂ-ಮುಸ್ಲಿಂರ ಐಕ್ಯತೆ ಕದಡಿರುತ್ತದೆ. ಸ್ವತಃ ಮುಸ್ಲಿಂ ಜನರೇ ಬಡೇಸಾಬುನ ಚಟುವಟಿಕೆಯಿಂದ ಬೇಸತ್ತಿರುವುದು ಕಂಡು ಬರುತ್ತದೆ.

ಪರಿಸ್ಥಿತಿಯ ಒತ್ತಡಕ್ಕೆ ಸಿಲುಕಿ ಮುಸ್ಲಿಂ ಕೋಮಿಗೆ ಮತಾಂತರ ಹೊಂದಿದ ತಳವರ್ಗದವರ ಪರಿಸ್ಥಿತಿಯನ್ನು ಹಾಲು-ಜೇನು ಕಾದಂಬರಿ ವಿವರಿಸುತ್ತದೆ. ಕೆಳವರ್ಗದ ಜನರ ಮತಾಂತರ ಮೇಲ್ವರ್ಗದ ಶೋಷಣೆಯನ್ನು ವಿರೋಧಿಸಿ ನಿಲ್ಲಲು ಸಿಕ್ಕ ರಿಯಾಯಿತಿಯೇ ಹೊರತು ಶೋಷಣೆಯಿಂದ ಪೂರ್ಣಪ್ರಮಾಣದ ಮುಕ್ತಿ ದೊರೆಯಲಿಲ್ಲ. ಆದರೆ ಈ ಮತಾಂತರ ಸಂಪೂರ್ಣವಾಗಿ ಅವರನ್ನು ಮುಸ್ಲಿಂರನ್ನಾಗಿ ಮಾಡಲಿಲ್ಲ. ಲೋಬಾನ ಹಾಕಿಸುವುದಕ್ಕಾಗಲಿ, ನೈವೇದ್ಯ ಕೊಡುವುದಕ್ಕಾಗಲಿ ಇಲ್ಲಿನ ಅನ್ಯ ಕೆಳಸಮುದಾಯ ಯಾವ ತಕರಾರುಗಳನ್ನು ಮಾಡದೆ ಇದ್ದುದು ಅವರಲ್ಲಿ ಯಾವ ಅತಂತ್ರ ಪರಿಸ್ಥಿತಿಯನ್ನುಂಟುಮಾಡಲಿಲ್ಲ. ಮಲೆನಾಡಿನ ಸಂದರ್ಭದಲ್ಲಿ ಕ್ರೈಸ್ತ ಧರ್ಮಕ್ಕೆ ಮತಾಂತರ ಹೊಂದಿದ ಕೆಳವರ್ಗದವರಿಗೆ ಇಂತಹ ವಾತಾವರಣ ಕ್ರೈಸ್ತ ಧರ್ಮದವರಿಂದಾಗಲಿ, ಅವರ ಮೊದಲಿನ ಕುಲದ ಸಮುದಾಯದವರಿಂದಾಗಲಿ ದೊರೆಯಲಿಲ್ಲ. ಈ ರೀತಿಯ ಮತಾಂತರವನ್ನು ವಿರೋಧಿಸಿ ಕುವೆಂಪುರವರು ವೈದಿಕ ಧರ್ಮವನ್ನು ಪ್ರಶ್ನಿಸುವ ರೀತಿ ಇಲ್ಲಿ ಬಹುಮುಖ್ಯವಾಗಿದೆ. ಹಿಂದುತ್ವದ ಸಾರವನ್ನು ಸಾರಿ ಮತಾಂತರ ತಡೆಯುವ ಶಕ್ತಿ ಹಿಂದೂ ಧರ್ಮದಲ್ಲಿದ್ದರೂ ಅದನ್ನು ಜನಸಾಮಾನ್ಯರಿಗೆ ತಿಳಿಸಿ ಹೇಳದೆ ಮೌನವಹಿಸಿರುವ ವೈದಿಕ ಮಠಗಳ ಮಠಾಧೀಶರನ್ನು 'ಮಲೆಗಳಲ್ಲಿ ಮದುಮಗಳು' (ಕುವೆಂಪು) ಕಾದಂಬರಿಯಲ್ಲಿ ಹೀಗಳೆಯುತ್ತಾರೆ. ಬೇರೆ ನಾಡಿನಲ್ಲಿ ನಮ್ಮ ಧರ್ಮದಲ್ಲಿ ಸತ್ವಯುತ ಅಂಶಗಳನ್ನು ಸಾರುವ ಸ್ವಾಮಿ ವಿವೇಕಾನಂದರ ಅಗತ್ಯವನ್ನು ಪ್ರಾದೇಶಿಕ ನೆಲೆಯಲ್ಲಿಯೂ ಅಪೇಕ್ಷಿಸುತ್ತಾರೆ.

ಹೈದರಾಬಾದ್ ಕರ್ನಾಟಕದ ಸಂದರ್ಭದಲ್ಲಿ ಇಂತಹ ಮತಾಂತರವನ್ನು ಬಹುವಾಗಿ ವ್ಯಾಪಿಸದಂತೆ ತಡೆದವರು ಸೂಫಿಗಳು, ತತ್ವಪದಕಾರರು, ಹರಿದಾಸರು ಎಂದರೆ ತಪ್ಪಾಗದು. ಕುವೆಂಪು ಬಯಸಿದ ಧರ್ಮಸತ್ವದ ತಿಳುವಳಿಕೆಯ ಪ್ರಸಾರ ಕಾರ್ಯ ಇಲ್ಲಿ ಸೂಫಿಗಳಿಂದ, ತತ್ವಪದಕಾರರಿಂದ, ಹರಿದಾಸರಿಂದ ಸಾಧ್ಯವಾಗಿದೆ. ಸ್ವಾತಂತ್ರನಂತರ ಈ ರೀತಿ ಮುಸ್ಲಿಂ ಧರ್ಮಕ್ಕೆ ಮತಾಂತರ ಹೊಂದಿ ದ್ವಂದ್ವದಲ್ಲಿ ಸಿಲುಕಿರುವ ಬದುಕಿನ ವಿವರಗಳು ಅಷ್ಟಾಗಿ ಕಂಡುಬಂದಿಲ್ಲ. ಕೃಷಿ ಪ್ರಧಾನವಾದ ಈ ಪ್ರದೇಶದಲ್ಲಿ ಮುಸ್ಲಿಂ ಸಮುದಾಯ ಕೃಷಿ ಸಂಬಂಧಿ ಚಟುವಟಿಕೆಯಲ್ಲಿಯೇ ಬದುಕು ರೂಪಿಸಿಕೊಂಡಿದೆ.

ಮಲೆನಾಡಿನ ಮುಸ್ಲಿಂ ಸಮುದಾಯದ ಬಗ್ಗೆ ಕುವೆಂಪುರವರು ತಿಳಿಸುವ ವಿವರಗಳಿಗೂ ಇಲ್ಲಿನ ಮುಸ್ಲಿಂ ಜನರ ಬದುಕಿಗೂ ಭಿನ್ನತೆಯಿದೆ. ಮಲೆನಾಡಿನ ಮುಸ್ಲಿಂರನ್ನು ಬ್ಯಾರಿಗಳೆಂದು ಕರೆಯಲಾಗುತ್ತಿತ್ತು. ಒಕ್ಕಲಿಗ ಹಾಗೂ ಅನ್ಯ ಕೋಮಿನವರಿಂದ ಇವರ ಅಂತಹ ಗೌರವವನ್ನು ಪಡೆದವರಾಗಿರಲಿಲ್ಲ. ಅಜ್ಜಸಾಬ, ಪುಡಿಸಾಬು, ಲುಂಗಿಸಾಬ ಮುಂತಾದ ಮುಸ್ಲಿಂ ಜನರ ದಬ್ಬಾಳಿಕೆ, ಕ್ರೌರ್ಯ ಪ್ರವೃತ್ತಿಯನ್ನು ಇಲ್ಲಿನ

ಫ್ಯೂಡಲ್‌ಗಳು ಬಳಸಿಕೊಳ್ಳುತ್ತಿದ್ದರು. ಸ್ವತಃ ಅವರ ಹಿಂಸಾತ್ಮಕ ಬದುಕಿನ ಮುಖಗಳನ್ನು ಮಲೆಗಳಲ್ಲಿ ಮನುಮಗಳು ಕಾದಂಬರಿ ತಿಳಿಸಿಕೊಡುತ್ತದೆ. ಉನ್ನತ ಉದ್ಯೋಗ ಬದಲಾದ ಹೊಸ ಪರಿಸ್ಥಿತಿಗಳಲ್ಲಿ ಇವರ ಬದುಕು ಎಷ್ಟರಮಟ್ಟಿಗೆ ಮಾರ್ಪಟ್ಟಿತ್ತು ಎಂಬುದರ ಬಗ್ಗೆ ಹೈದರಾಬಾದ್ ಕರ್ನಾಟಕದ ಕಥನ ಸಾಹಿತ್ಯದಲ್ಲಿ ಬಹಳ ಮಾಹಿತಿಗಳು ತಿಳಿಯುವುದಿಲ್ಲ.

ಮೇಲ್ವರ್ಗದ ಫ್ಯೂಡಲ್‌ಗಳಿಂದ ಈ ಪ್ರದೇಶದ ದುಡಿದುಣ್ಣುವ ರೈತಾಪಿ ಜನರು ಶೋಷಣೆಯನ್ನು ಅನುಭವಿಸಿದಂತೆ ಮುಸ್ಲಿಂ ಸಮುದಾಯವು ಶೋಷಣೆಯನ್ನು ಅನುಭವಿಸಿದೆ. 'ಕೆಂಡದ ಮಳೆ ಕರೆವಲ್ಲಿ ಉದಕವಾಗಿದ್ದವರ ಕಥೆ' (ಕುಂ. ವೀರಭದ್ರಪ್ಪ) ಎಂಬ ಕತೆಯಲ್ಲಿ ಮುಸ್ಲಿಂ ಕುಟುಂಬವೊಂದು ಮೇಲ್ವರ್ಗದ ಹೇರಿಕೆಗೆ ದಿಕ್ಕು ಕಾಣದಾಗುತ್ತದೆ. ವಿದ್ಯಾವಂತ ಪೀರಣ್ಣ ತನ್ನ ತಂದೆಯ ಹೆಣವನ್ನು ಮೇಲ್ವರ್ಗದವರ ಸ್ಮಶಾನದಲ್ಲಿ ಹೂತಿರುತ್ತಾನೆ. ಮೇಲ್ವರ್ಗದಿಂದ ಉಂಟಾದ ಸಮಸ್ಯೆಯಿಂದಾಗಿ ಪೀರಣ್ಣ ಆತನ ತಮ್ಮ ಬಾಷಾ ತಾಯಿ ಶಾಲಮ್ಮ ಕಂಗಾಲಾಗುತ್ತಾರೆ. ಮೇಲ್ವರ್ಗದವರು ಸ್ಮಶಾನದಿಂದ ಹೆಣ ಹೊರತೆಗೆದು ಅಗಸೆಯ ಬಳಿ ಒಗೆದುದ್ದಕ್ಕೆ ತೀವ್ರವಾಗಿ ಪ್ರತಿಕ್ರಿಯಿಸುವ ಬಾಷಾ ಅದನ್ನು ತೆಗೆದುಕೊಂಡು ಹೋಗಿ ಗೌಡನ ಮನೆಯ ದೇವರ ಕೋಣೆಯಲ್ಲಿ ಇಡುವ ಧೈರ್ಯ ತೋರುತ್ತಾನೆ. ಆದರೆ ಗೌಡನಿಂದ, ಪೋಲಿಸರಿಂದ ಉಂಟಾಗುವ ಸಮಸ್ಯೆಯಿಂದ ಕುಟುಂಬ ನಲುಗಿಹೋಗುತ್ತದೆ

ಈ ಪ್ರದೇಶದಲ್ಲಿ ಮುಸ್ಲಿಂ ಸಮುದಾಯ ಬದುಕು ರೂಪಿಸಿಕೊಂಡಿರುವ ಹಿನ್ನೆಲೆಯ ಸಂವೇದನೆಗಳು ಇಲ್ಲಿ ದೊರೆಯುತ್ತವೆ. ಆದರೆ ಸ್ವತಃ ಈ ಧರ್ಮದ ಬುರ್ಕಾಪದ್ಧತಿ, ವಿವಾಹ ಪದ್ಧತಿ, ಮುಂತಾದ ಸಮುದಾಯ ಕೇಂದ್ರಿತ ವಿಷಯಗಳಿಗೆ ಸಂಬಂಧಿಸಿದ ಸಂವೇದನೆಗಳು ತಿಳಿದುಬರುವುದಿಲ್ಲ. ಸಮುದಾಯದ ಸಾಂಪ್ರದಾಯಿಕ ಬದುಕಿನಲ್ಲಿ ನಲುಗುವ ಸ್ತ್ರೀ ಬದುಕು, ಸ್ತ್ರೀ ಶಿಕ್ಷಣ, ವಿದ್ಯಾವಂತ ಯುವ ಜನಾಂಗದಲ್ಲಿ ಉಂಟಾದ ಹೊಸ ಜಾಗೃತಿ, ಸಮುದಾಯದ ಸ್ವ-ವಿಮರ್ಶೆ ಇತ್ಯಾದಿ ವಿಚಾರಗಳು ಇಲ್ಲಿ ಕಂಡು ಬರುವುದಿಲ್ಲ. ಸಾರಾ ಅಬೂಬಕರ್, ಅಬ್ದುಲ್ ರಷೀದ್, ಮುಂತಾದ ಮುಸ್ಲಿಂ ಸಂವೇದನೆಯನ್ನು ಕೇಂದ್ರ ವಿಷಯ ವನ್ನಾಗಿಸಿಕೊಂಡವರ ಕಥನದ ಸ್ವರೂಪ ಇಲ್ಲಿಲ್ಲ. 'ಮುಸ್ಲಿಂ ಸಂವೇದನೆ'ಗೆ ಇಲ್ಲಿನ ಕಥನ ಸಾಹಿತ್ಯ ವಿಸ್ತೃತ ಆಯಾಮವನ್ನು ನೀಡುತ್ತದೆ.

ಒಂದು ಸಮುದಾಯದಿಂದ ಕವಲೊಡೆದು ತಮ್ಮದೇ ಆದ ಬದುಕಿನ ರೀತಿಯೊಂದನ್ನು ರೂಪಿಸಿ ಕೊಂಡ ಕೆಲ ಸಮುದಾಯಗಳ ಸಂವೇದನೆಗಳು ಇಲ್ಲಿ ಪರಿಗಣಿತವಾಗುವಂತವುಗಳು. ಚೌತಿಗಾರು, ಪಾತ್ರದವ ರಂತಹ ಸಮುದಾಯಗಳು ಒಂದು ರೀತಿ ಮೇಲ್ವರ್ಗಕ್ಕೆ ಅಧೀನವಾಗಿ ಉಳಿದಂತಹ ಸಮುದಾಯಗಳು. ಆರಂಭಘಟ್ಟದ ಕಥನದಲ್ಲಿ ಕಂಡುಬರುವ ಇಂತಹ ಸಮುದಾಯಗಳ ಸಂವೇದನೆ ನಂತರ ಕಾಲಘಟ್ಟದಲ್ಲಿ ಇಂತವರ ಉಲ್ಲೇಖವೇ ವಿರಳವಾದಂತ ಸಂದರ್ಭ ಮುಖ್ಯವಾಗಿಯೂ ವಿಶಿಷ್ಟವಾಗಿ ಉಳಿಯುವುದು ಇಲ್ಲಿ ಸ್ಪಷ್ಟವಾಗಿ ತಿಳಿಯುತ್ತದೆ. ಇಂತಹ ಸಮುದಾಯದ ಸಂವೇದನೆ ಈ ಹಿಂದಿನ ಹಾಗೂ ಇಂದಿನ ಕಾಲಘಟ್ಟಕ್ಕೂ ಪ್ರಾದೇಶಿಕ ವೈಶಿಷ್ಟ್ಯವಾಗಿ ಕಂಡು ಬರುತ್ತಿರುವುದನ್ನು ತಿಳಿಯಬೇಕಿದೆ.

ಪಾತ್ರದವರ ಬದುಕು ಹೈದರಾಬಾದ್ ಕರ್ನಾಟಕದ ಆರಂಭ ಘಟ್ಟದ ಕಥೆಗಾರರಲ್ಲಿ ಒಬ್ಬರಾದ ಶಾಂತರಸರ ಕಥೆ, ಕಾದಂಬರಿಗಳಲ್ಲಿ ಚಿತ್ರಿತವಾಗಿದೆ. ಪಾತ್ರದವರು ನಿರ್ದಿಷ್ಟ ಜಾತಿ, ಧರ್ಮದ ಅಸ್ತಿತ್ವದಿಂದ ವಂಚಿತರಾದವರು. ಸಮಾಜದಲ್ಲಿ ಉನ್ನತ ವರ್ಗದವರ ಇಲ್ಲವೆ ಉಳ್ಳವರನ್ನು ಸಂತೃಪ್ತಿಪಡಿಸುವ ವರ್ಗವಾಗಿ ಮಾತ್ರವೇ ಗುರುತಿಸಲ್ಪಟ್ಟವರು. ಇವರ ಸಂಗೀತ, ನೃತ್ಯ ಕಲೆಯು ಈ ಪ್ರದೇಶದಲ್ಲಿ ವಿಶಿಷ್ಟ ವಾಗಿರುವಂತಹದ್ದು. ಇದರಂತೆ ಇವರ ಬದುಕಿನ ಸಂವೇದನೆಯು ಮಹತ್ವಪೂರ್ಣವಾದದ್ದು. ಪಾತ್ರದವರ ಬದುಕಿನ ಸಂವೇದನೆಯು ಇಲ್ಲಿ ಸ್ತ್ರೀಯನ್ನು ಕೇಂದ್ರೀಕರಿಸಿಯೇ ತಿಳಿದು ಬರುತ್ತದೆ. ಪಾತ್ರದವರ ಬದುಕು ಸ್ತ್ರೀಯನ್ನೇ ಆಧರಿಸಿದೆ. ಬೇರೆ ಬೇರೆ ಹಿನ್ನೆಲೆಗಳಲ್ಲಿ ಇವರ ಬದುಕಿನಲ್ಲಿ ಬಂದು ಹೋಗುವ ಪುರುಷರಿಗಿಂತ ಪಾತ್ರದ ಸ್ತ್ರೀ ಬದುಕು ಈ ಸಮುದಾಯದ ಇಡಿಯಾದ ಸಂವೇದನೆಯನ್ನು ತಿಳಿಸುತ್ತದೆ.

ಉಳ್ಳವರ ಪ್ರತಿಷ್ಠೆಯ, ಕಾಮುಕತನದ ದ್ಯೋತಕವಾಗಿ ಉಳಿದ ಈ ಸಮುದಾಯದ ಮಹಿಳೆಯರ ಬದುಕು ಅಸ್ತಿತ್ವದ ಸ್ಥಾಪನೆಗೆ ನಿರಂತರ ಪರಿತಪಿಸಿ ನರಳಿರುವಂತಹದ್ದು. ನೃತ್ಯ, ಸಂಗೀತ ಕಲೆಯ ಆರಾಧನೆಯಲ್ಲಿ ಮಹಾನ್ ಕಲಾವಿದೆಯರಾದರೂ ಉಳ್ಳವರ, ಫ್ಯೂಡಲ್‌ಗಳ ಹಿಡಿತದಲ್ಲಿ ವೇಶ್ಯೆಯರಾಗಿ ಬದುಕುವ ದುರಂತಕ್ಕೆ ಬಲಿಯಾದವರು. ಇವರ ಬದುಕಿನ ಸಂವೇದನೆಯ ಹಲವು ಮಾದರಿಗಳು ಹೈದರಾಬಾದ್ ಕರ್ನಾಟಕದ ಕಥನ ಸಾಹಿತ್ಯಕ್ಕೆ ವಸ್ತುವಾಗಿರುವುದು ಈ ಪ್ರದೇಶದ ವಿಶಿಷ್ಟ ಸಂವೇದನೆಯ ಭಾಗವೇ ಆಗಿದೆ.

'ನಾಟ್ಯರಾಣಿ' (ಶಾಂತರಸ) ಕತೆಯಲ್ಲಿ ನೃತ್ಯ ಪ್ರವೀಣಳಾಗಿದ್ದ ನಾಟ್ಯರಾಣಿಯೆಂದೆ ಹೆಸರು ಪಡೆದಿದ್ದ ಸುಂದರಿಯ ಸಾವು ಆಕೆಯ ಬದುಕಿಗಿಂತ ದುರಂತ ಸ್ಥಿತಿಯನ್ನು ಎದುರಿಸುತ್ತಿರುವುದನ್ನು ತಿಳಿಸುತ್ತದೆ. ತನ್ನದೇ ಆದ ಆದರ್ಶಗಳನ್ನು ಹೊಂದಿದ್ದ ಸುಂದರಿಯ ಬದುಕು ಕಾಮುಕ ಪುರುಷರಿಂದ ಅನೇಕ ತೊಂದರೆಗಳನ್ನು ಎದುರಿಸುತ್ತದೆ. ತಮ್ಮೊಂದಿಗೆ ಸೂಳೆಯಾಗಿ ಬದುಕಲು ಒಪ್ಪದ, ಸ್ವಾಭಿಮಾನಿಯಾದ ಸುಂದರಿಯನ್ನು ಕಂಪನಿ ಮಾಲೀಕರಾದಿಯಾಗಿ ಸಮಾಜದ ಅನೇಕ ಸ್ಥಿತಿವಂತರು ದ್ವೇಷಿಸುತ್ತಾರೆ. ತಮ್ಮ ಮೋಜಿಗಾಗಿ ಸುಂದರಿಯ ಮನೆಯನ್ನು ಬಳಿಸಿಕೊಳ್ಳುತ್ತಿದ್ದವರು ಸಹ ಆಕೆಯ ಸಾವಿಗೆ ಪ್ರತಿಕ್ರಿಯಿಸುವುದಿಲ್ಲ. ಅತ್ಯುತ್ತಮ ನಾಟ್ಯಗಾರ್ತಿಯಾದ ಸುಂದರಿಯ ಕಲೆಗಿಂತ ಸಮಾಜದಲ್ಲಿ ಆಕೆ ಸೂಳೆಯಾಗಲಿಲ್ಲ ಎಂಬ ಪುರುಷ ಸಮಾಜದ ಆರೋಪಗಳು ಸಾವಿನ ನಂತರವೂ ಕೇಳಿ ಬರುತ್ತವೆ. ಸೂಳೆಯಾಗದ ಕಾರಣಕ್ಕೆ ಕಲಾವಿದೆಯಾದ ಸುಂದರಿಯ ಪ್ರತಿಭೆಯನ್ನು ಅಲ್ಲಗಳೆಯುತ್ತಾರೆ. ಆಕೆಯ ಸಂಪತ್ತಿಗಾಗಿ ಹಲುಬುವ, ಆಕೆಯ ಶವಸಂಸ್ಕಾರಕ್ಕೆ ಅಡ್ಡಿ ಮಾಡುವ ಸಮಾಜದ ನಡುವೆ ಸುಂದರಿ, ಕಾಂತಮ್ಮನಂತಹ ಕಲಾವಿದೆಯರ ಬದುಕು ದುಃಸ್ಥರವಾದಂತಹದ್ದು. ಕಲಾವಿದೆಯರ ಬದುಕನ್ನು ಯಥಾವತ್ತಾಗಿ ತೆರೆದಿಡುವ ಕಥೆ ಅವರ ಬದುಕಿನ ಅಸ್ಥಿರತೆಯನ್ನು ತಿಳಿಸುತ್ತದೆ. ಫ್ಯೂಡಲ್ ವ್ಯವಸ್ಥೆಯ ನಡುವೆ ಶೀಲವನ್ನು ಉಳಿಸಿಕೊಂಡು ಬದುಕ ಬಯಸಿದ ಕಲಾವಿದೆಯರ ಜೀವನ ಅನೇಕ ರೀತಿಯ ದುರಂತಗಳನ್ನು ಎದುರಿಸಿದೆ. ಮಾದರಿ

ರೂಪದ ಈ ಕತೆಯ ಸಂವೇದನೆಯು ಆದರ್ಶಹೀನ ಸಮಾಜದ ನಡುವೆ ಆದರ್ಶಯುತವಾಗಿ ಬದುಕಿದ ಕಲಾವಿದೆಯರ ಬದುಕನ್ನು ಚಿತ್ರಿಸುತ್ತದೆ.

ತಮ್ಮ ಆದರ್ಶಗಳನ್ನು, ಪ್ರತಿಭೆಯನ್ನು ವೇಶ್ಯಾವೃತ್ತಿಗೆ ಇಳಿಸಿದ ಪುರುಷ ಸಮಾಜದ ನಡುವೆ ಮಾನದ, ಶೀಲದ ಹಂಗನ್ನು ತೊರೆದ ಪಾತ್ರದ ಮಹಿಳೆಯರು ದರ್ಪದಿಂದಲೇ ಬದುಕಿರುವುದನ್ನು ಅನೇಕ ಕತೆಗಳು ಗುರುತಿಸುತ್ತವೆ. ಫ್ಯೂಡಲ್ ವ್ಯವಸ್ಥೆಯ ಕಾಮುಕ ಪುರುಷರನ್ನು ತಮಗೆ ಬೇಕಾದಂತೆ ಬಳಸಿಕೊಂಡ ಪಾತ್ರದವರು ಕಂಡುಬರುತ್ತಾರೆ. 'ಬೇಸ್ತು' (ಶಾಂತರಸ) ಕತೆಯ ಚಂದ್ರಸಾನಿ, ರತ್ನಾಸಾನಿಯ ಜಾಣ್ಮೆ ಮೆಚ್ಚುವಂತಹದ್ದು. ಮೈನಾಪುರದ ಕ್ರಾಸಿನಲ್ಲಿದ್ದ ಹೋಟೆಲ್‌ನಲ್ಲಿ ಆಕಸ್ಮಿಕವಾಗಿ ಪಾತ್ರದವರಾದ ಚಂದ್ರಸಾನಿ, ರತ್ನಾ, ಕಾಮಣ್ಣ ಬಂದಿಳಿಯುತ್ತಾರೆ. ರಾಯಚೂರು ಬಸ್ಸು ಸಿಗದೆ ಹೋಟೆಲ್‌ನಲ್ಲೆ ಉಳಿಯಬೇಕಾಗಿ ಬಂದ ಅವರ ಸಂದರ್ಭವನ್ನು ಉಪಯೋಗಿಸಿಕೊಳ್ಳಲು ನರಸನಗೌಡ ಮುಂತಾದ ಪುರುಷರು ಬಯಸುತ್ತಾರೆ. ರಾತ್ರಿ ಹೋಟೆಲ್‌ನಲ್ಲಿ ಗಾನಾಪಾರ್ಟಿ ಮಾಡಲು ನರಸನಗೌಡ ಇಚ್ಛಿಸುತ್ತಾನೆ. ಚಂದ್ರಸಾನಿ ನರಸನಗೌಡನ ಬಯಕೆ ಈಡೇರಿಸುವ ಆಸೆ ಹುಟ್ಟಿಸಿ ಆತನ ಕೆಂಗಣ್ಣಿಗೆ ಗುರಿಯಾಗದಂತೆ ಗಾನಾಪಾರ್ಟಿಯನ್ನು ನಾಜೂಕಾಗಿ ತಳ್ಳಿ ಹಾಕುತ್ತಾಳೆ. ನರಸನಗೌಡ ಮತ್ತಿತರ ಗಂಡಸರಿಗೆ ಅವಮಾನವಾಗುವಂತೆ ರಾತ್ರಿ ಹೋಟೆಲ್‌ಗೆ ಬಂದಿದ್ದ ಸ್ವಾಮಿಯೊಂದಿಗೆ ಯಾರಿಗೂ ತಿಳಿಯದಂತೆ ಹೊರಟು ಹೋಗುತ್ತಾಳೆ.

ಪಾತ್ರದವರ ಬದುಕಿಗೆ ಉತ್ತಮ ರೀತಿಯ ಪ್ರತಿಕ್ರಿಯೆ ತೋರಿಸುವ ಪುರುಷ ಸಮಾಜವೂ ಇದೆ. ವಿವಾಹದಂತಹ ಸಂಬಂಧಗಳಲ್ಲಿ ತಮ್ಮ ಬದುಕನ್ನು ರೂಪಿಸಿಕೊಳ್ಳ ಬಯಸಿದ ಪಾತ್ರದ ಸ್ತ್ರೀ ಬದುಕಿಗೆ ಸ್ಪಂದಿಸಿದ ಪುರುಷನ ದುರಂತವನ್ನು 'ಬಯಲಾಟ' (ಶಾಂತರಸ) ಕತೆ ತಿಳಿಸುತ್ತದೆ. ಪಾತ್ರದವಳಾದ 'ಸಬ್ಬಾಸಾನಿ'ಗೆ ಬಸಪ್ಪ ಬದುಕು ಕೊಡುತ್ತಾನೆ. ಸಬ್ಬಾಸಾನಿಯಂತಹ ಪಾತ್ರದವಳನ್ನು ಸಂಸಾರ ಮಾಡಲು ಬಿಡದ ಫ್ಯೂಡಲ್‌ಗಳಿಂದಾಗಿ ಬಸಪ್ಪನ ಪ್ರೀತಿಗೆ ವಂಚನೆಯಾಗುತ್ತದೆ. ಬಸಪ್ಪನ ಪ್ರೀತಿಗೆ ದ್ರೋಹ ಬಗೆದ ಸಬ್ಬಾಸಾನಿ ಬಸಲಿಂಗಪ್ಪಗೌಡನ ಹಿಂದೆ ಹೋಗುತ್ತಾಳೆ. ಪಾತ್ರದ ಸ್ತ್ರೀಯರು ಸೂಳೆಯರಾಗಿಯೇ ಬದುಕಬೇಕೆಂದು ಹಾರೈಸುವ ಫ್ಯೂಡಲ್ ವ್ಯವಸ್ಥೆಯಲ್ಲಿ ಬಸಪ್ಪನಂತವರಿಂದ ಪಾತ್ರದ ಸ್ತ್ರೀಯರಿಗೆ ನ್ಯಾಯ ದೊರಕಿದರೂ ಫಲಕಾರಿಯಾಗಲಾರದು.)

ಸಮಾಜದಲ್ಲಿ ಉಳ್ಳವರ ಪ್ರತಿಷ್ಠೆಯೂ ಹೆಚ್ಚಾಗುವುದು ಪಾತ್ರದವರನ್ನು ಇಟ್ಟುಕೊಳ್ಳುವ ಹೆಮ್ಮೆಯಲ್ಲಿ. ಒಂದು ನಿರ್ದಿಷ್ಟ ಊರನ್ನು ಅಥವಾ ಯಾವುದೋ ವ್ಯಕ್ತಿಯನ್ನು ನಮ್ಮವರೆಂದು ನಂಬಿ ನೆಚ್ಚಿ ಬದುಕಲು ಸಾಧ್ಯವಾಗದಂತಹ ಸ್ಥಿತಿ 'ಗೋಹರಜಾನ್ ಮಾಲತಿ ಮತ್ತು ನಾನು' (ಚಂದ್ರಕಾಂತ ಕುಸನೂರ) ಕಾದಂಬರಿಯ ಗೋಹರಜಾನ್ ಅನುಭವಿಸುತ್ತಾಳೆ. ತನ್ನ ಸಂಪಾದನೆಯಲ್ಲಿ ಕೊಂಡ ಮನೆಯನ್ನು ಉನ್ನತವರ್ಗದವರ ಉಪಟಳಕ್ಕೆ ಹೆದರಿ ಬಿಟ್ಟು ಕೊಡುತ್ತಾಳೆ. ಸಹಾಯಕ್ಕೆ ನಿಲ್ಲಲು ಬಂದ ರವೀಂದ್ರ ನನ್ನಾಗಲಿ, ತಬಲ ಕಲಿಸಿದ ಗುರುವನ್ನಾಗಲಿ ಆಶ್ರಯಿಸುವ ಯಾವ ಪ್ರಯತ್ನಗಳೂ ಫಲಕಾರಿಯಾಗುವುದಿಲ್ಲ

ಎಂಬುದನ್ನರಿತ ಗೋಹರಜಾನ್ ದೂರ ಹೊರಟು ಹೋಗುತ್ತಾಳೆ. ಸಮಾಜದಲ್ಲಿ ಯಾವ ಭದ್ರತೆಯೂ ಇಲ್ಲದ್ದನ್ನು, ತಮ್ಮ ಭಾವನೆಗಳಿಗೆ ವಾಸ್ತವಿಕ ಬದುಕಿನಲ್ಲಿ ಯಾವ ಮನ್ನಣೆಯೂ ಇಲ್ಲವೆಂಬುದನ್ನು ಅರಿತು ಅಲೆಮಾರಿಗಳಾದ ಕಲಾವಿದೆಯರ ಸಂವೇದನೆಯ ಪ್ರತೀಕವಾಗಿ ಗೋಹರಜಾನ್ ಕಂಡು ಬರುತ್ತಾಳೆ. ಕಲೆಯನ್ನೇ ಮುಖ್ಯವಾಗಿಟ್ಟುಕೊಂಡು ಬದುಕುವ ಇನ್ನೊಂದು ಜನಾಂಗವೆಂದರೆ 'ಜಾತಿಗಾರ' ಜನಾಂಗ. ಇದು ಮುಸ್ಲಿಂ ಜನಾಂಗಕ್ಕೆ ಸೇರಿದ ಉಪಪಂಗಡ. ಈ ಜನಾಂಗದ ಬದುಕು ನಿರ್ದಿಷ್ಟ ಜಾತಿಯವರೊಂದಿಗೆ ಸಂಬಂಧಗಳನ್ನು ಉಳಿಸಿಕೊಳ್ಳುವಂತಹದ್ದಲ್ಲ. ಊರಿಂದೂರಿಗೆ ಹೋಗಿ ಇವರು ಆಡುವ ಆಟ(ಸಣ್ಣಾಟ ಮಾದರಿಯ ನಾಟಕ)ವೇ ಜಾತಿಗೇರ ಆಟ. ಪಾತ್ರದ ಸ್ತ್ರೀಯರಂತೆ ಈ ಸಮುದಾಯ ಸ್ತ್ರೀ ಬದುಕು ಅತಂತ್ರವನ್ನು ಎದುರಿಸುವಂತಹದ್ದು. ಆದರೆ ಕೆಲಮಟ್ಟಿನ ಭಿನ್ನತೆಯನ್ನು ಇವರ ಕಲಾ ಪ್ರದರ್ಶನಗಳು ಹೊಂದಿವೆ. ಊರಿಂದೂರಿಗೆ ಹೋಗಿ ನಾಟಕ ಮಾಡುವ ಜಾತಿಗೇರರ ಕಲೆಗೂ, ಗಜಲ್ ಗಾಯನ, ಗಾನಾಪಾರ್ಟಿ ಮಾಡುವ ಪಾತ್ರದವರ ಕಲೆಗೂ ವ್ಯತ್ಯಾಸವಿದೆ. ಫ್ಯೂಡಲ್ ವ್ಯವಸ್ಥೆಯಲ್ಲಿ ಇಂತಹ ಎರಡು ಬಗೆಯ ಸ್ತ್ರೀ ಬದುಕು ನಿರುಂಬಳವಾಗಿ ಉಳಿದಿಲ್ಲ. ಪಾತ್ರದವರಂತೆ ಇವರೂ ಪ್ರತಿಷ್ಠಿತನೊಬ್ಬನ ಇಚ್ಛೆಗೆ ಅನುಗುಣವಾಗಿ ಸೂಳೆಯಾಗಿ ಬದುಕಬೇಕೆ ವಿನಹ ವೈವಾಹಿಕ ಜೀವನವನ್ನು ಅನುಭವಿಸುವಂತಿಲ್ಲ. ಒಬ್ಬರೊಂದಿಗೆ ಉಳಿಯುವ ಇಲ್ಲವೆ ಬೇರೆಡೆ ಹೋಗಿ ಇನ್ನೊಬ್ಬನೊಂದಿಗೆ ಜೀವನ ಕಳೆಯುವ ಸಂಪತ್ತಿದ್ದ ಗೌಡನ ಅಥವಾ ಇಟ್ಟುಕೊಂಡವನ ಸಂಪತ್ತನ್ನು ಕಿತ್ತುಕೊಂಡು ಜೀವನ ಭದ್ರಪಡಿಸಿಕೊಳ್ಳುವ ಜಾತಿಗಾರ ಮಹಿಳೆಯರು ಕಂಡುಬರುತ್ತಾರೆ. ವಿವಾಹ ಬಾಹಿರ ಸಂಬಂಧವಾದರೂ ಇಟ್ಟುಕೊಂಡವನಿಗೆ ನಿಷ್ಠರಾಗಿ ಬದುಕುವ ಆದರ್ಶಗಳನ್ನುಳ್ಳ ಸ್ತ್ರೀ ಬದುಕನ್ನು ಶಾಂತರಸರು 'ಮಾಬಿ' (ಸಣ್ಣಗೌಡಸಾನಿ) ಪಾತ್ರದ ಮೂಲಕ ತಿಳಿಸುತ್ತಾರೆ. ಜಾತಿಗೇರ ಆಟ ಆಡಲು ಸಿದ್ಧನಳ್ಳಿಗೆ ಬಂದಿದ್ದ ಮಹಿಬೂಬುಜಾನ್ ತನ್ನ ಕುಲದ ಹೆಣ್ಣುಗಳ ಜೀವನಕ್ಕಿಂತ ಭಿನ್ನವಾದ ಜೀವನದ ಆದರ್ಶಗಳನ್ನು ಹೊಂದಿದ್ದಳು. ಇವಳನ್ನು ಪಡೆಯಲು ಪೈಪೋಟಿಗಿಳಿದ ಗಂಗಪ್ಪ ಮತ್ತು ಸೂಗನಗೌಡರಲ್ಲಿ ಮಾಬಿ ಸೂಗನಗೌಡನೊಂದಿಗೆ ಇರಲು ಬಯಸುತ್ತಾಳೆ. ಸೂಗನಗೌಡನಿಗೆ ನಿಷ್ಠಳಾಗಿ ಉಳಿಯುವ ಮಾಬಿ ಇತರ ಪಾತ್ರದವರು ಪಡೆಯಲಾಗದ 'ಗೌಡಸಾನಿ' ಎಂಬ ಪಟ್ಟ ಪಡೆಯುತ್ತಾಳೆ. ಆಕೆಯ ಸಾಮಾಜಿಕ ಸೇವೆಗೂ ಗೌಡನಿಂದ ಯಾವ ಅಡ್ಡಿ-ಆತಂಕಗಳು ಬರುವುದಿಲ್ಲ. ಭಾವುಕ ನೆಲೆಯಲ್ಲಿ ಸಣ್ಣಗೌಡಸಾನಿ ಪವಾಡ ಪುರುಷಳೆಂಬಂತಹ ವರ್ಣನೆ ಕಾದಂಬರಿಯಲ್ಲಿ ಕಂಡುಬರುತ್ತದೆ. ಇದರಿಂದ ಸಾಮಾಜಿಕವಾಗಿ ಹಾಗೆಯೇ ಕೌಟುಂಬಿಕವಾಗಿ ಕೆಲ ಅಡ್ಡಿ-ಆತಂಕಗಳನ್ನು ಅವಳು ಅನುಭವಿಸುತ್ತಾಳೆ. ಆಕೆಯ ಕಾರಣಕ್ಕಾಗಿಯೇ ಮುಂದುವರೆಯುವ ಫ್ಯೂಡಲ್‌ಗಳ ಜಗಳ ಊರಿನ ಶಾಂತಿಯನ್ನು ಭಂಗ ಮಾಡುತ್ತದೆ. ಸೂಗನಗೌಡನ ಮರಣದ ನಂತರ ಮಾಬಿಯ ಬಾಳು ಮತ್ತೆ ಅತಂತ್ರವಾಗುವುದು.

ಈ ಭಾಗದ ವಿಶಿಷ್ಟ ಕಲೆಗಳನ್ನು ಪ್ರತಿನಿಧಿಸುವ ಪಾತ್ರದವರು, ಜಾತಿಗಾರರು ಪ್ರಾದೇಶಿಕ ವೈಶಿಷ್ಟ್ಯಗಳಿಗೆ ಕಾರಣವಾಗಿರುವಂತವರು. ಸಾಮಾಜಿಕವಾಗಿ ಒಪ್ಪಿತವಾದ ಕೆಲ ನಿರ್ಬಂಧಗಳಲ್ಲಿಯೇ ಈ

ಸಮುದಾಯಗಳು ಬದುಕಬೇಕಾಗುತ್ತದೆ. ಊರಿನ ಪ್ರತಿಷ್ಠಿತರೆನಿಸಿದ ಫ್ಯೂಡಲ್‌ಗಳ ನಿರ್ಬಂಧಗಳಲ್ಲಿಯೇ ಇಂತಹ ಕಲಾವಿದೆಯರ ಬದುಕು ವೇಶ್ಯೆಯರೆಂಬ ಸೀಮಿತ ವ್ಯಾಪ್ತಿಯಲ್ಲಿ ದುರಂತಕ್ಕೀಡಾಗುತ್ತದೆ. ತಮ್ಮ ವ್ಯಕ್ತಿತ್ವವನ್ನು ಕಾಪಾಡಿಕೊಳ್ಳಬೇಕೆನ್ನುವ ಒಬ್ಬನಿಗೆ ನಿಷ್ಠವಾಗಿರಬೇಕೆಂಬ ಮಾಬಿಯಂತಹ ಹೆಣ್ಣುಗಳು ಸಹ ಹೆಚ್ಚಿನ ರಿಯಾಯಿತಿಗಳನ್ನು ಪಡೆದ ಸೂಳೆಯರಾಗುತ್ತಾರೆಯೇ ವಿನಹ ಹೆಂಡತಿಯಾಗಲಾರರು. ಹೆಂಡತಿಯಾಗದಂತೆ ಉಳಿಯಬೇಕಾದ ಮಾಬಿಯಂತವರ ಜೀವನಕ್ಕೆ ಒದಗಿದ ಅನ್ಯಾಯವು ಭಾವುಕ ನೆಲೆಯಲ್ಲಿ ಆಕೆಯ ಬದುಕನ್ನು ವರ್ಣಿಸುವ ಲೇಖಕರ ಹೊಗಳಿಕೆಯಲ್ಲಿ ಮರೆಮಾಚಿದಂತೆ ಕಂಡುಬರುತ್ತದೆ. ಪ್ರಾದೇಶಿಕವಾಗಿ ಕಂಡು ಬರುವ ವಿಶಿಷ್ಟ ಕಲೆಗಳು ಅವುಗಳ ಹಿಂದಿನ ಹೀನಾಯ ಬದುಕಿನ ಕಾರಣಕ್ಕಾಗಿಯೇ ಸಮಾಜದಲ್ಲಿ ಪೂರ್ಣಮಟ್ಟದ ಗೌರವದಿಂದ ವಂಚಿತವಾಗುತ್ತವೆ. ಇಂತಹ ಸ್ಥಿತಿಗೆ ಕಲೆಯನ್ನು, ಕಲಾವಿದರನ್ನು ಗುರಿ ಮಾಡುವ ಕೆಲ ಪ್ರತಿಷ್ಠಿತರ, ಕಾಮುಕರ ಕುಯುಕ್ತಿ ಮುನ್ನೆಲೆಗೆ ಬರುವಂತಹದ್ದಲ್ಲ. ಇಂತವರ ಕ್ರೌರ್ಯದಲ್ಲಿಯೇ ಕಲಾ ಸಮುದಾಯಗಳ ಪರಂಪರೆ ಕೊನೆಯಾಗಿದೆ ಎಂದರೂ ತಪ್ಪಾಗದು. ಸುಂದರಿ (ನಾಟ್ಯರಾಣಿ), ಸಬ್ಬಾಸಾನಿ (ಬಯಲಾಟ), ಗೋಹರಜಾನ್ (ಗೋಹರಜಾನ್ ಮಾಲತಿ ಮತ್ತು ನಾನು) ಮುಂತಾದ ಕಲಾವಿದೆಯರು ತಮ್ಮ ಮುಂದಿನ ಕಲಾ ಪರಂಪರೆಗೆ ತಿಳಿಸುವ ಸಂವೇದನೆಯು ನಿಶ್ಚಿತವಾಗಿ ಈ ಕ್ರೂರ ಸಾಮಾಜಿಕ ವ್ಯವಸ್ಥೆಯನ್ನು ವಿರೋಧಿಸುವ, ಕಲಾ ಜೀವನಕ್ಕೆ ಬೆನ್ನು ಮಾಡುವುದೆ ಆಗಿರುತ್ತದೆಂದು ಊಹೆ ಮಾಡಿದರೆ ತಪ್ಪಾಗದು. ಹಾಗೊಂದು ವೇಳೆ ಎಲ್ಲಾ ಅಡೆತಡೆಗಳನ್ನು ಒಪ್ಪಿಕೊಂಡು ಈ ಕಲೆಯನ್ನು ಮುಂದುವರೆಸುವಂತೆ ಸೂಚಿಸುವ ಕಲಾವಿದೆಯರು ಅಸಹಾಯಕತೆಯಲ್ಲಿ ಸಿಲುಕಿರುತ್ತಾರೆಯೆ ಹೊರತು ಸಂಪೂರ್ಣ ಕಲಾಭಿಮಾನದಿಂದಲೇ ಈ ನಿರ್ಣಯಕ್ಕೆ ಬಂದಿರುವುದಿಲ್ಲ.

### ಕೊರವ ಸಮುದಾಯದ ಸಂವೇದನೆ

ಇಲ್ಲಿನ ಕಥನ ಸಾಹಿತ್ಯದಲ್ಲಿ ಕಂಡುಬರುವ ಸಮುದಾಯಗಳಲ್ಲಿ ಕೊರವ ಸಮುದಾಯವೂ ಒಂದು. 'ಕುರುಮಯ್ಯ ಮತ್ತು ಅಂಕುಶದೊಡ್ಡಿ' (ಜಂಬಣ್ಣ ಅಮರಚಿಂತ) ಕಾದಂಬರಿ ಈ ಸಮುದಾಯದ ಸಂವೇದನೆಗಳನ್ನು ತಿಳಿಸುತ್ತದೆ. ಇವರ ಜೀವನ ಕ್ರಮ ರೀತಿ, ನೀತಿ, ನಂಬಿಕೆ, ಆಚರಣೆ ಇತ್ಯಾದಿಗಳು ಕೊರವ ಸಮುದಾಯವನ್ನು ವೈಶಿಷ್ಟ್ಯಪೂರ್ಣವಾಗಿಸಿವೆ. ಸ್ವತಃ ಈ ಸಮುದಾಯದ ಜೀವನ ಕ್ರಮ ಅಭಿವ್ಯಕ್ತಿಸುವ ಸಂವೇದನೆ ಒಂದು ಬಗೆಯಾದರೆ, ಇಡೀ ಸಮಾಜದಲ್ಲಿ ಇವರ ಅಸ್ತಿತ್ವಕ್ಕೆ ಸಂಬಂಧಿಸಿದಂತೆ ಕಂಡು ಬರುವ ಸಂವೇದನೆಯು ವಿಶಿಷ್ಟವಾದದ್ದು. ಅಂಕುಶದೊಡ್ಡಿಯ ಕೊರವ ಸಮುದಾಯದ ಬದುಕು ತನ್ನದೇ ಆದ ವಿಶಿಷ್ಟತೆ ಪಡೆದಿರುವಂತಹದ್ದು. ತಮ್ಮ ಸಮುದಾಯಕ್ಕೆ ನಾಯಕನನ್ನಾಗಿ ಕುರುಮಯ್ಯನನ್ನು ಹೊಂದಿದ್ದ ಇವರು ನಾಯಕನ ನಿರ್ಣಯಕ್ಕೆ ಬದ್ಧವಾಗಿ ನಡೆಯುವಂತವರು. ಹಂದಿ ಸಾಕಾಣಿಕೆ ಪ್ರಮುಖ ಕಸುಬಾದರೂ ಉಳ್ಳವರ ಸೇವೆಯಲ್ಲಿ ನಿರತರಾಗಿರುವಂತವರು. ಭೇಟಿಯಾಡುವುದು, ಈಚಲ ಬಾರಿಗೆ, ಚಾಪೆ, ಬುಟ್ಟಿ, ಮೊರ, ಕುಕ್ಕೆ, ಗಳಿಗೆ, ಮಂಕರಿ, ಸಿಂಬಿ, ಚುಕ್ಕ ಇತ್ಯಾದಿ ವಸ್ತುಗಳನ್ನು ತಯಾರಿಸುವ ಕಲೆ ಈ ಜನಾಂಗದ ಕುಲಕಸುಬಾಗಿ ಬಂದಿರುವಂತಹದ್ದು. ಇಂತಹ ವಸ್ತುಗಳ ತಯಾರಿಕೆ ಅವರ

ಜೀವನ ನಿರ್ವಹಣೆಗೂ ಸಾಲದಂತಹ ವರಮಾನ ತರುವಂತಹದ್ದು. ದೈವಾರಾಧನೆಯಲ್ಲಿ ಮುಖ್ಯವಾದದ್ದು 'ಬೆತ್ತಲೆ ಸೇವೆ'. ತಮ್ಮ ಮನೋ ಇಚ್ಛೆಗಳ ಈಡೇರಿಕೆಗೆ ಮಾಡಿಕೊಂಡ ಹರಕೆಯೇ ಬೆತ್ತಲೆ ಸೇವೆ. ಆದರೆ ಇದರಿಂದ ಈ ಜನಾಂಗದ ಬದುಕಿಗೆ ಬೇರೆ ರೀತಿಯ ದುಷ್ಪರಿಣಾಮಗಳೇ ಆಗುತ್ತಿದ್ದವು. ಕಾಮುಕ ಪುರುಷರಿಗೆ ಬೆತ್ತಲೆ ಸೇವೆ ಮಾಡುವ ಹೆಣ್ಣು ಮಕ್ಕಳು ಬಲಿಯಾಗುತ್ತಿದ್ದರು. ಇಂತಹ ಅಮಾನವೀಯ ದೈವಿಕ ಆರಾಧನೆಯು ಉಳ್ಳವರ ಕುಯುಕ್ತಿಯೇ ಆಗಿರುತ್ತಿತ್ತು. ಫ್ಯೂಡಲ್ ವ್ಯವಸ್ಥೆ ಹಾಗೂ ಪುರೋಹಿತಶಾಹಿ ವ್ಯವಸ್ಥೆಯೊಳಗೆ ಕೆಳವರ್ಗದ ಬದುಕು ನಿರಂತರವಾಗಿ ಶೋಷಣೆಯನ್ನು ಅನುಭವಿಸುತ್ತಲೇ ಬಂದಿದೆ. ಬೆತ್ತಲೆ ಸೇವೆಯ ಹರಕೆ ಹೊತ್ತ ತಾಯೇರಿ ಬುಡ್ಡಪ್ಪನೊಂದಿಗೆ ಮದುವೆಯಾಗುವ ಇಚ್ಛೆಯನ್ನು ಹೊಂದಿದ್ದಳು. ಕುಟುಂಬದವರ ಒತ್ತಾಯಕ್ಕೆ ಮುದುಕನೊಂದಿಗೆ ಮದುವೆಯಾಗಬೇಕಾದ ಗಂಡಾಂತರದಿಂದ ಪಾರು ಮಾಡೆಂದು ಹರಕೆ ಹೊತ್ತ ತಾಯೇರಿಯ ಇಚ್ಛೆ ಈಡೇರುತ್ತದೆ. ಬೆತ್ತಲೆ ಸೇವೆ ಮಾಡಿ ತನ್ನ ಮನಸ್ಸಿನ ಆಸೆ ಈಡೇರಿಸಿಕೊಂಡಳೆಂಬ ಸರಳವಾದ ನಿರ್ಣಯವನ್ನು ಇಲ್ಲಿ ನೀಡಲಾಗದು. ಬುಡ್ಡಪ್ಪನೊಂದಿಗೆ ಮದುವೆಯಾದದ್ದನ್ನು ಸಹಿಸದ ಕೊರವ ಜನಾಂಗದ ಪುರುಷರ ಕೆಂಗಣ್ಣಿಗೆ ತಾಯೇರಿ ಬಲಿಯಾಗುತ್ತಾಳೆ. ಆಕೆಯ ಮೇಲೆ ಗ್ಯಾನಪ್ಪನು ಅತ್ಯಾಚಾರ ಮಾಡ ಬಯಸುತ್ತಾನೆ. ಹರಕೆಯಂತಹ ದೈವ ಕಾರ್ಯಗಳು ಇಲ್ಲಿ ಶ್ರದ್ಧೆ ಗೌರವಗಳ ಹಿನ್ನೆಲೆಯಲ್ಲಿ ರೂಪುಗೊಂಡಿರುವಂತವುಗಳಲ್ಲ. ಇಂತಹ ಅಮಾನವೀಯ ಹರಕೆಗಳನ್ನು ದೇವರ ಹೆಸರಲ್ಲಿ ರೂಢಿಸುವ ಕಾಮುಕ ಪುರುಷ ಸಮಾಜದಿಂದ ಈ ಸಮುದಾಯದ ಸ್ತ್ರೀಯರ ಬದುಕು ನಾಶವಾಗುತ್ತದೆ.

ಕೊರವ ಸಮುದಾಯದಲ್ಲಿ ಕಂಡು ಬರುವ ಇನ್ನೊಂದು ಪದ್ಧತಿಯೆಂದರೆ ತನಗೆ ಸಂಬಂಧಿಸಿದ ಹೆಣ್ಣನ್ನು ಬೇರೆಯವರಿಗೆ ಮಾರಿಕೊಳ್ಳುವುದು. ಹೆಂಡತಿಯನ್ನು ಗಂಡ ಯಾರಿಗೆ ಬೇಕಾದರೂ ಮಾರಿಕೊಳ್ಳುವ ಪದ್ಧತಿ ಇವರಲ್ಲಿ ರೂಢಿಯಾಗಿರುವಂತಹದ್ದು. ಕೊರವ ಸಮುದಾಯದ ವಿಶಿಷ್ಟವಾದ ಈ ರೀತಿ ನೀತಿಗಳಿಂದಾಗಿಯೇ ಇಲ್ಲಿನ ಮಹಿಳೆಯರ ಸಂವೇದನೆ ಭಿನ್ನವಾಗಿದೆ. ಆದರೆ ಇಂತಹ ಅಮಾನವೀಯ ನಡೆಗಳನ್ನು ಸಮುದಾಯದ ವಿಶಿಷ್ಟ ಪದ್ಧತಿಗಳೆಂದು ಮೆಚ್ಚಲಾಗದು. ಕ್ರೂರವಾದ ಇಂತಹ ಪದ್ಧತಿಗಳಿಂದ ಕೊರವ ಜನಾಂಗದ ಮಹಿಳೆಯರು ನಿರಂತರ ಶೋಷಣೆಯನ್ನು ಸಮುದಾಯದ ಮತ್ತು ಸಮುದಾಯೇತರ ಪುರುಷರಿಂದ ಅನುಭವಿಸುತ್ತಲೇ ಇರುತ್ತಾರೆ.

ರೋಗಿಯಾದ ಮಾರೆಪ್ಪನಿಂದ ಬಿಡುಗಡೆ ಹೊಂದಿದ ಬುಡ್ಡಮ್ಮನು ಜಂಬಯ್ಯನನ್ನು ಕೂಡಿಕೊಳ್ಳುತ್ತಾಳೆ. ತನ್ನ ಮಗುವಿಗಾಗಿ ಹಂಬಲಿಸುವ ಬುಡ್ಡಮ್ಮನ ತಾಯ್ತನದ ವೇದನೆ ಮಾರೆಪ್ಪನಿಗಾಗಲಿ, ಜಂಬಯ್ಯನಿಗಾಗಲಿ ತಿಳಿಯುವುದಿಲ್ಲ. ಆರ್ಥಿಕವಾಗಿ ಇಳಿಮುಖವಾದ ಜಂಬಯ್ಯ ಹೆಂಡತಿಯನ್ನು ಗ್ಯಾನಪ್ಪನಿಗೆ ಮಾರುತ್ತಾನೆ. ಇದರಿಂದ ತೀವ್ರವಾದ ನೋವನ್ನು ಅನುಭವಿಸಿದ ಬುಡ್ಡಮ್ಮ ಮಗು ಸಮೇತ ಬಾವಿಗೆ ಬಿದ್ದು ಸಾಯುತ್ತಾಳೆ. "ಇದ್ರಾಗ ಯಾರ್ದು ತಪ್ಪು ಯಾರ್ದು ಒಪ್ಪು.... ಯಾವ ಸೂಳೆ ಮಗ ಮಾಡಿದ್ದೇ ಇಂಥ ರೀತಿ ರಿವಾಜು.... ಹೆಂಗಸ್ರು ಮಾರೋದು ಯಾವ ಮಂದ್ಯಾಗ ಇಲ್ಲ" (ಜಂಬಣ್ಣ

ಅಮರಚಿಂತ; ೧೯೯೪; ಪುಟ : ೮೬) ಎಂದು ಅಂಕುಶದೊಡ್ಡಿಯ ಯಜಮಾನ ಕುರಿಮಯ್ಯ ಚಿಂತಿಸಿದರೂ ಪರಿಸ್ಥಿತಿ ಕೈಮೀರಿ ಹೋಗಿರುತ್ತದೆ.

ಸಮುದಾಯಗಳು ತಾವು ರೂಢಿಸಿಕೊಂಡು ಬಂದ ಪದ್ಧತಿಗಳ ಒಳಿತು ಕೆಡಕುಗಳ ಪರಾಮರ್ಶೆ ಮಾಡದೆ ಒಪ್ಪಿಕೊಂಡು ಬದುಕುವ ಇಲ್ಲವೆ ಅನುಸರಿಸುವ ಮೌಢ್ಯತೆ ಇಲ್ಲಿನ ಕತೆಗಳಲ್ಲಿ ಕಂಡು ಬರುತ್ತದೆ. ಸಮುದಾಯಗಳ ಮೌಢ್ಯತೆಗಳ ಪರಿವರ್ತನೆಯ ಲಕ್ಷಣಗಳು ಕತೆಗಳಲ್ಲಿ ಕಂಡುಬರುತ್ತವೆಯಾದರೂ ಇಂತಹ ಪದ್ಧತಿಗಳನ್ನು ಆಯಾ ಸಮುದಾಯಗಳಿಗೆ ಹೇರಿ ತಮ್ಮ ಉದ್ದೇಶಗಳನ್ನು ಈಡೇರಿಸಿಕೊಳ್ಳುವ ಮೇಲಸ್ತರದ ಸಮುದಾಯಗಳು ಯಾವುದೇ ರೀತಿಯಿಂದ ತಮ್ಮ ಶೋಷಣೆಯನ್ನು ಜಾರಿಯಲ್ಲಿರಿಸುವ ಜಾಣ್ಮೆಯನ್ನು ತೋರುವಂತವುಗಳಾಗಿವೆ. ತಾವು ಉಳಿಮೆ ಮಾಡುವ, ತಮ್ಮ ಜೀವನಕ್ಕೆ ಬೇಕಾದ ಕಾಳುಕಡಿ ಸಂಪಾದಿಸಿಕೊಳ್ಳುವ ಇಚ್ಛೆಯನ್ನು ಮುಂದಿಟ್ಟ ಕೊರವ ಸಮುದಾಯ ಗೌಡನ ಕೋಪಕ್ಕೆ ಗುರಿಯಾಗುತ್ತದೆ. ಅತಿಯಾದ ಮಳೆಯಿಂದ ಕಂಗೆಟ್ಟ ಸಮುದಾಯ ಗುಡಿಯಲ್ಲಿ ಆಶ್ರಯ ಪಡೆದದ್ದಕ್ಕಾಗಿ ಊರಿನಿಂದಲೇ ಬಹಿಷ್ಕಾರ ಪಡೆದು ಹೊರನಡೆಯುತ್ತದೆ. ಗೌಡನ ಅನ್ಯಾಯವನ್ನು ವಿರೋಧಿಸಿ ಕುರಿಮಯ್ಯ ಕೊರವರಿಗಾಗಿಯೇ ತೋಡಿದ ಬಾವಿ ಗೌಡನ ಪಾಲಾಗುತ್ತದೆ. ಕಂಗೆಡಿಸುವ, ದಿಕ್ಕೆಡಿಸುವ ಶೋಷಣೆಯಲ್ಲಿ ಜರ್ಝರಿತರಾಗುವುದು ಒಂದೆಡೆಯಾದರೆ, ತಮ್ಮ ಬದುಕಿನ ದ್ವಂದ್ವಗಳನ್ನು ಪರಿಷ್ಕರಿಸಿಕೊಳ್ಳಲಾಗದ ಹಿಂಜರಿಕೆಗಳು ಎಲ್ಲವೂ ಕಾದಂಬರಿಯಲ್ಲಿ ತಿಳಿದು ಬರುತ್ತವೆ.

'ಎಲುಗನೆಂಬ ಕೊರಚನೂ ಚವುಡಕನೆಂಬ ಹಂದಿಯೂ' (ಕುಂ. ವೀರಭದ್ರಪ್ಪ) ಕತೆಯಲ್ಲಿ ಮೆದುಳು ಜ್ವರದ ಭೀತಿಗೆ ಸರಕಾರದವರು ಹಂದಿಗಳನ್ನು ಕೊಲ್ಲಿಸುತ್ತಾರೆ. "ಹಂದಿ ಸಂಗಾಟ ಹಂದಿಯಂತೆ ಬಿದ್ದಿರೋ ತನಗ್ಯಾಕ ಸರಕಾರದೋರು ಹೇಳುತ್ತಿರುವಂಥ ಜಡ್ಡು ಜಾಪತ್ತು ಬರುತ್ತಿಲ್ಲವು ಎಂದು ಯೋಚಿಸುತ್ತಿದನು" (ಕುಂ. ವೀರಭದ್ರಪ್ಪ; ೨೦೦೪; ಪುಟ : ೧೪) ಎಲುಗ. ಎಲುಗನ ಈ ಯೋಚನೆ ಬುದ್ಧಿಹೀನ ಸರಕಾರದ ಯೋಜನೆಗಳನ್ನು ಹೀಯಾಳಿಸುತ್ತದೆ. ಮನುಷ್ಯರಲ್ಲಿ ರೋಗ ನಿರೋಧಕ ಶಕ್ತಿಯನ್ನು ನೀಡದೆ, ರೋಗಕ್ಕೆ ಸೂಕ್ತ ಔಷಧವನ್ನು ಕಂಡು ಹಿಡಿಯದೆ ಹಂದಿಗಳನ್ನೇ ಕೊಲ್ಲಬೇಕೆಂಬುದನ್ನು ಎಲುಗ ವಿರೋಧಿಸುತ್ತಾನೆ. ಆತನ ವಿರೋಧಕ್ಕೆ ಫಲ ದೊರೆಯದೆ ಅವನ ದೊಡ್ಡಿಯಲ್ಲಿದ್ದ ಹಂದಿಗಳೆಲ್ಲವೂ ಸಾಯುತ್ತವೆ. ಅದಾಗ ತಾನೆ ಜನ್ಮ ನೀಡಿ ಸತ್ತ ಹಂದಿಯ ಮರಿಯೇ ಚವುಡ. ಎಲುಗನು ಮಗುವಿನಂತೆ ಈ ಹಂದಿಯನ್ನು ನೋಡಿಕೊಂಡು ತನ್ನ ಕಣ್ಣಾಸರೆಯಲ್ಲಿಯೇ ಬೆಳೆಸುತ್ತಾನೆ. ಊರ ಗೌಡನು ತನ್ನ ಮನೆಯೊಳಗೆ ಬಂದ ಚವುಡ ಹಂದಿಯನ್ನು ಲಕ್ಷ್ಮೀ ಸಮಾನವೆಂದು ನಂಬಿ ಹುಗಿದು ಬಿಡುತ್ತಾನೆ. ಇದನ್ನು ತಿಳಿದು ಪ್ರತಿಕಾರ ತೀರಿಸಿಕೊಳ್ಳಬಯಸಿದ ಎಲುಗ ಸಮಯಕ್ಕಾಗಿ ಕಾಯುತ್ತಾನೆ. ಎಲುಗನ ಜಾತಿಯವಳೆ ಆದ ಲಕ್ಷ್ಮೀಯೊಂದಿಗೆ ಅನೈತಿಕ ಸಂಬಂಧವನ್ನು ಇಟ್ಟುಕೊಂಡಿದ್ದ ಗೌಡನ ಮಗನನ್ನು ಎಲುಗ ಕೊಂದು ಹಾಕುತ್ತಾನೆ. ಕುರುಮಯ್ಯನಿಗಿದ್ದ ಅಸಹಾಯಕತೆಗಳು ಎಲುಗನಿಗಿರಲಿಲ್ಲ. ಇಡೀ ಸಮುದಾಯದ ಜವಾಬ್ದಾರಿ ತನ್ನವರ ಮೇಲೆ ಗೌಡನಿಂದ ಉಂಟಾಗುವ ಅಪಾಯಗಳಿಂದ ಮೌನವಹಿಸುವ ಕುರುಮಯ್ಯನಿಗೂ ಇಂತಹ

ಹಂಗಿಲ್ಲದ ಎಲುಗನಿಗೂ ವ್ಯತ್ಯಾಸವಿದೆ. ಆದರೆ ಇಂತವರ ವಿರೋಧವನ್ನು ಪ್ರತಿಭಟಿಸುವ ಶಕ್ತಿ ಗೌಡಸಂತಪವರಲ್ಲಿಲ್ಲ. ಸದಾ ಅನ್ಯಾಯಗಳನ್ನು ತನ್ನ ಕುಯುಕ್ತಿಯಿಂದ ಸಾಧಿಸುವ ವರ್ಗಕ್ಕೆ ನೇರವಾದ ಪ್ರತಿಭಟನೆಯ ಶಕ್ತಿ ಇಲ್ಲವೆಂಬುದನ್ನು ಕತೆ ತಿಳಿಸುತ್ತದೆ. ಮನೆ ಹೊಕ್ಕ ಹಂದಿಯು ಲಕ್ಷ್ಮಿ ಸಮಾನವೆಂದು ತಿಳಿಯುವ ಮೇಲ್ವರ್ಗದವರ ನಂಬಿಕೆಗಳಲ್ಲಿ ಕೆಳವರ್ಗವು ಶ್ರೇಷ್ಠತೆಯನ್ನು ಸಾಧಿಸುತ್ತದೆ.

## ಲಂಬಾಣಿ ಸಮುದಾಯ

ಲಂಬಾಣಿಗರು ಬುಡಕಟ್ಟು ಸಮುದಾಯಕ್ಕೆ ಸೇರಿದವರು. ಈ ಸಮುದಾಯವನ್ನು ಕರ್ನಾಟಕದಲ್ಲಿ ಬೇರೆ ಬೇರೆ ಹೆಸರುಗಳಿಂದ ಗುರುತಿಸಲಾಗುತ್ತದೆ. ಈ ಸಮುದಾಯವನ್ನು ಕರ್ನಾಟಕ ಹಾಗೂ ಇತರ ಪ್ರದೇಶಗಳಲ್ಲಿ ಬೇರೆ ಬೇರೆ ರೀತಿಯಿಂದ ಗುರುತಿಸುವುದನ್ನು ಪಿ.ಕೆ. ಖಂಡೋಬಾ ಅವರು (ಕರ್ನಾಟಕದ ಲಂಬಾಣಿಗಳು ಒಂದು ಸಾಂಸ್ಕೃತಿ ಅಧ್ಯಯನ) ತಿಳಿಸುತ್ತಾರೆ.

"ಈ ಜನರು ಕರ್ನಾಟಕ, ಆಂಧ್ರಪ್ರದೇಶ ಹಾಗೂ ಮಹಾರಾಷ್ಟ್ರಗಳಲ್ಲಿ ಲಮಾಣಿ, ಲಂಬಾಣಿ, ಲಂಬಾಡಿ, ಲಂಬಾಡಾ, ಲಬಾನ, ಲಭಾನಾ, ಲಭಾನಿ ಮುಂತಾದ ಹೆಸರುಗಳಿಂದ ಕರೆಯಲ್ಪಡುತ್ತಾರೆ..... 'ಲಮಾಣಿ' ಅಥವಾ 'ಲಂಬಾಣಿ' ಎಂಬ ಪದಗಳು ವ್ಯವಸಾಯ ಸೂಚಕ ಹೆಸರುಗಳಾಗಿವೆ. ಪಶ್ಚಿಮ ಸಮುದ್ರದಿಂದ 'ಲವಣ'ವನ್ನು ತಮ್ಮ ದನಕರುಗಳ ಮೇಲೆ ಹೇರಿಕೊಂಡು ಕರ್ನಾಟಕ, ಆಂಧ್ರ, ಮಹಾರಾಷ್ಟ್ರ ಮುಂತಾದ ಕಡೆಗಳಲ್ಲಿ ವ್ಯಾಪಾರವನ್ನು ಕೈಕೊಂಡುದ್ದರಿಂದ ಆ ವೃತ್ತಿಯನ್ನೇ ಆಧರಿಸಿ ಈ ಜನರನ್ನು ಲವಣಿಗರು, ಲಮಾಣಿಗರು, ಲಬಾನಿಗಳು, ಲಭಾನಿಗರು, ಲಂಬಾಡಿಗರು, ಲಂಬಾಣಿಗರು ಎಂಬ ಹೆಸರುಗಳಿಂದ ಕರೆಯತೊಡಗಿದರು (ಪಿ.ಕೆ. ಖಂಡೋಬಾ; ೧೯೯೧; ಪುಟ : ೧೦-೧೧). ಈ ಸಮುದಾಯವನ್ನು "ಬಂಜಾರಾ ಎಂದು ಸಹ ಕರೆಯಲಾಗುತ್ತದೆ. 'ಬಂಜಾರ' ಅಥವಾ 'ಬಣಜಾರ' ಎಂಬುದು ಇವರು ಮೂಲತಃ ವರ್ತಕರಾಗಿದ್ದರೆಂಬುದನ್ನು ಸೂಚಿಸುತ್ತದೆ. 'ಬಂಜಾರಾ' ಸಂಸ್ಕೃತದ 'ವಾಣಿಜ್ಯ' ಎಂಬ ಶಬ್ದದಿಂದ ಉತ್ಪತ್ತಿಯಾಗಿದೆ. ಪೂರ್ವದಲ್ಲಿ ಇವರು ವ್ಯಾಪಾರವನ್ನು ಕೈಕೊಂಡು ದೇಶ-ವಿದೇಶಗಳಲ್ಲಿ ಸಂಚರಿಸುತ್ತಿದ್ದುದರಿಂದ ಇವರನ್ನು 'ಬಂಜಾರ', 'ಬಣಜಾರಾ' ಎಂಬ ಹೆಸರುಗಳಿಂದ ಕರೆದರು" (ಪಿ.ಕೆ. ಖಂಡೋಬಾ; ೧೯೯೧; ಪುಟ : ೯-೧೦).

ಲಂಬಾಣಿ ಅಥವಾ ಬಂಜಾರ ಸಮುದಾಯದ ಸಂವೇದನೆ ಹೈದರಾಬಾದ್ ಕರ್ನಾಟಕದ ಕಥನ ಸಾಹಿತ್ಯದಲ್ಲಿ ಕಂಡುಬರುವ ರೀತಿ ವಿಶಿಷ್ಟವಾಗಿದೆ. ಆಯುಧಗಳ ತಯಾರಿಕೆ ಅವುಗಳ ಮಾರಾಟವನ್ನು ಮಾಡುತ್ತಿದ್ದ ಬಂಜಾರಾ ಸಮುದಾಯದ ವರ್ಣನೆ 'ಸುಳಿಗಾಳಿ' (ಜಯತೀರ್ಥ ರಾಜಪುರೋಹಿತ) ಕಾದಂಬರಿಯಲ್ಲಿ ಕಂಡು ಬರುತ್ತದೆ. ಬಂಜಾರಾ ಸಮುದಾಯದ ಪುರುಷರ ಪೌರುಷ ಹಾಗೂ ಸ್ತ್ರೀಯರ ಸೌಂದರ್ಯ ವರ್ಣನೆ ಕಾದಂಬರಿಯಲ್ಲಿ ಉತ್ಪ್ರೇಕ್ಷೆ ಎನಿಸದೆ ಕಂಡು ಬಂದಿದೆ. ಹೈದರಾಬಾದಿನ ಬಂಜಾರಾ ಹಿಲ್ಸ್ ನವಾಬ ನಗರಿಯೆಂದೆ ಗುರುತಿಸಲ್ಪಟ್ಟಿತ್ತು. ಶತಮಾನಗಳ ಹಿಂದೆ ಬೆಟ್ಟಮರಡಿಗಳಿಂದ ಕೂಡಿದ್ದ ಬಂಜಾರಾ ತಾಂಡ್ಯಾ ನಿಜಾಮ್ ಆಳ್ವಿಕೆಯಲ್ಲಿ ಹೈದರಾಬಾದ್ ನಗರದ ವೈಭವಯುಕ್ತ ಶ್ರೀಮಂತ

ನಿವಾಸವಾಗಿ ಬದಲಾಯಿತು. ತಲವಾರ-ಸಿಂಗ್ ಬಂಜಾರನ ಭಯಕ್ಕೆ ಈ ಪ್ರದೇಶವನ್ನು ಹಗಲುಹೊತ್ತು ನೋಡಲು ಜನ ಭಯಪಡುತ್ತಿದ್ದರು. ಆದರೆ ಕಾಲಾಂತರದಲ್ಲಿ ಇದು ಬದಲಾವಣೆಯಾದದ್ದು ಕರಾಮತ್ ನವಾಬನಿಂದ. ಕರಾಮತ್ ನವಾಬ್‌ನು ತಲವಾರಸಿಂಗ್ ಬಂಜಾರನಲ್ಲಿ ಸ್ನೇಹದಿಂದಲೇ ವರ್ತಿಸಿ ಶಸ್ತ್ರಾಸ್ತ್ರಗಳನ್ನುಕೊಳ್ಳುತ್ತಾನೆ. ಈ ಸಮುದಾಯದ ಸೌಂದರ್ಯವೇ ರೂಪ ಪಡೆದಂತಿದ್ದ ಸ್ತ್ರೀಯರ ವರ್ಣನೆ, ಕರಾಮತ್ ನವಾಬನ ವಂಶದ ಮೂಲ ಸ್ತ್ರೀ ಆಗುವ ಗುಲಾಬಿ ಬಂಜಾರನ್‌ಳ ವರ್ಣನೆ ಮನೋಜ್ಞವಾಗಿದೆ. ಅಡವಿಯ ಹಣ್ಣುಗಳನ್ನು, ಶಸ್ತ್ರಾಸ್ತ್ರಗಳನ್ನು ಮಾರಲು ಬರುವ ಬಂಜಾರಾ ಸ್ತ್ರೀಯರು ಸದಾ ತಮ್ಮಲ್ಲಿ ಆಯುಧಗಳನ್ನಿಟ್ಟುಕೊಂಡೆ ಪಟ್ಟಣ ಪ್ರವೇಶಿಸುತ್ತಿದ್ದರು. ಹೀಗಿದ್ದಾಗ್ಯೂ ಗುಲಾಬಿ ಬಂಜಾರನ್ ಮೋಸಕ್ಕೀಡಾಗಿ ಕರಾಮತ್ ನವಾಬನಲ್ಲಿ ಉಳಿದುಬಿಡುತ್ತಾಳೆ. ನವಾಬ ಬೇಗಂ ಆಗುವ ಮೂಲಕ ನವಾಬ ಮನೆತನದ ಸ್ತ್ರೀ ಸೌಂದರ್ಯದ ಮೂಲ ಗಣಿಯಾಗುತ್ತಾಳೆ. ಈಕೆಯ ಸೌಂದರ್ಯವನ್ನು ಹಿಡಿದಿಟ್ಟಿದ್ದ ದೊಡ್ಡ ತೈಲಚಿತ್ರವನ್ನು ವಂಶಸ್ಥರು ಉಳಿಸಿಕೊಂಡು ಬಂದಿರುತ್ತಾರೆ. ನವಾಬ ಬೇಗಂಳ ತೈಲಚಿತ್ರವನ್ನು ನೋಡಿದ ಆಂಗ್ಲ ಅಧಿಕಾರಿಗಳು "ವಾಟ್ ಎ ಫೈನ್ ಜಿಪ್ಸಿ ಬ್ಯೂಟಿ" ಎಂದು ಪ್ರಶಂಸಿಸುತ್ತಾರೆ. ಆಂಶಿಕವಾಗಿ ಬರುವ ಈ ಸಮುದಾಯದ ವರ್ಣನೆ ಗತಕಥನದಂತೆ ಕಂಡುಬರುತ್ತದೆ. ಆದರೆ ಸಮುದಾಯದ ಕೆಲ ವಿಶಿಷ್ಟ ಅಂಶಗಳನ್ನು ತಿಳಿಯುವಲ್ಲಿ ಇದು ಸಹಕಾರಿಯಾಗುತ್ತದೆ. ಕಾದಂಬರಿಯಲ್ಲಿ ಇವರ ಉದ್ಯೋಗ, ಸ್ತ್ರೀಬದುಕಿನ ಕೆಲಮಾಹಿತಿಗಳು ಮಾತ್ರ ಲಭ್ಯವಾಗುತ್ತವೆಯೆ ವಿನಹ ಕಾದಂಬರಿಯಲ್ಲಿ ಇಡಿಯಾದ ವಿವರಗಳು ತಿಳಿಯುವುದಿಲ್ಲ. ಕಾದಂಬರಿಯ ಮುಖ್ಯ ಆಶಯವೂ ಇದಲ್ಲವಾದ್ದರಿಂದ ಈ ಸಮುದಾಯದ ಸಂವೇದನೆಗಳು ಗೌಣವಾಗಿಯೇ ಉಳಿಯುತ್ತವೆ.

ಆರಂಭಘಟ್ಟದ ಅನೇಕ ಕತೆಗಳಲ್ಲಿ ಈ ಸಮುದಾಯದ ಬಗೆಗೆ ಆಂಶಿಕವಾದ ಕೆಲ ವಿವರಗಳು ಸಿಗುತ್ತವೆ. 'ಸಾವು ಸತ್ತಾಗ' (ಶಾಂತರಸ) ಕತೆಯಲ್ಲಿ ಬಡವರ ಪರವಾಗಿ ನ್ಯಾಯ ಬೇಡುವ ಈರಣ್ಣ ಮತ್ತು ರಷೀದ ಬರಗಾಲ ಪೀಡಿತವಾದ ಪ್ರದೇಶಕ್ಕೆ ನೆರವು ನೀಡುವಂತೆ ಸರಕಾರಕ್ಕೆ ಮನವಿ ಸಲ್ಲಿಸುತ್ತಾರೆ. ಪ್ರದೇಶದಲ್ಲಿ ಬರಗಾಲ ದಿನೇ ದಿನೇ ಹೆಚ್ಚಾಗಿ ಜನ ಊರು ಬಿಡುತ್ತಿರುತ್ತಾರೆ. ಮಂತ್ರಿಗಳು ಬರಗಾಲದ ವೀಕ್ಷಣೆಗೆ ಆ ಊರಿಗೆ ಬರುವ ಸುದ್ದಿ ಕೇಳಿಬರುತ್ತದೆ. ತಹಸೀಲ್ದಾರರು ಈರಣ್ಣ ಮತ್ತು ರಷೀದರಿಗೆ ಲಂಬಾಣಿ ಹೆಂಗಸರನ್ನು ಕರೆಯಿಸಿ ಮಂತ್ರಿಗಳ ಮುಂದೆ ಕುಣಿಸುವಂತೆ ಆಜ್ಞೆ ಮಾಡುತ್ತಾರೆ. ಹೊಟ್ಟೆಗೆ ಅನ್ನವಿಲ್ಲದೆ ಕಂಗಾಲಾಗಿದ್ದ ಈ ಜನರ ಸ್ಥಿತಿಯ ಬಗ್ಗೆ ಯೋಚಿಸದೆ ಕುಣಿಯಲು ಹೇಳುವ ಅಮಾನವೀಯ ಪ್ರಸಂಗ ಇವರಿಗೆ ಎದುರಾಗುತ್ತದೆ. ನೃತ್ಯವನ್ನು ಈ ಸಮುದಾಯದ ವಿಶಿಷ್ಟತೆಯೆಂದು ಪರಿಭಾವಿಸಿದರೂ ಅದರ ದುರಪಯೋಗ ಸಮಾಜದಲ್ಲಿ ಕಂಡು ಬರುವ ರೀತಿ ಕ್ರೂರವಾದದು. ಈರಣ್ಣ ಮತ್ತು ರಷೀದರ ಸಹಾಯದಿಂದ ಲಮಾಣಿ ಹೆಂಗಸರು, ಗಂಡಸರು ಧ್ವನಿ ಎತ್ತಿ ಹಾಡ ತೊಡಗುತ್ತಾರೆ.

ಬಣ್ಣ ಗುಬ್ಬ್ಯಾರು ಮಳಿರಾಜಾ ಅವರು
ಮಣ್ಣಾಗಿ ಹೋದಾರು ಮಳಿರಾಜಾ

ಬಣ್ಣದ ಗುಬ್ಯಾರು ಮಣ್ಣಾಗಿ ಹೋದಾರು
ಅನ್ನದ ದಿನ ಬಂದು ಮಳಿರಾಜಾ

(ಶಾಂತರಸ; ೧೯೯೭; ಪುಟ ೩೪೫)

ಎಂದು ಹಸಿವನ್ನೇ ಹಾಡುವ ಲಂಬಾಣಿಗಳ ಹಾಡಿಂದ ಮಂತ್ರಿಗಳ, ಅಧಿಕಾರಿಗಳ ಮುಖ ಕಪ್ಪಿಡುತ್ತದೆ. ಈ ಸಮುದಾಯವನ್ನು ಮನರಂಜನೆಗಾಗಿ ಬಳಸಿಕೊಳ್ಳುವ ಊರಿನ ರೂಢಿಯೊಂದಕ್ಕೆ ಧಿಕ್ಕಾರ ಹಾಕುವ ಇವರ ವರ್ತನೆ ಬಂಡಾಯ ಮನೋಭಾವವನ್ನೇ ಅಭಿವ್ಯಕ್ತಿಸುತ್ತದೆ.

ಸುಗ್ಗಿ ಕಾಲಕ್ಕೆ ಗುಳೆಹೊಡುವವರಲ್ಲಿ ಲಮಾಣಿ ಜನರು ಇರುತ್ತಿದ್ದರು. ದುಡಿದುಣ್ಣುವ ಹಾಗೂ ವರ್ಷಕ್ಕೆ ಬೇಕಾಗುವ ಕಾಳುಕಡಿಯನ್ನು ಸುಗ್ಗಿ ಕಾಲದಲ್ಲಿ ಸಂಗ್ರಹಿಸಿಕೊಳ್ಳುತ್ತಿದ್ದರು. ಗುಳೆಹೊಂಡುವ ಇವರು ಅನೇಕ ಕಷ್ಟಕಾರ್ಪಣ್ಯಕ್ಕೆ ಗುರಿಯಾಗುತ್ತಿದ್ದರು. ಆದರೆ ಇವರ ಬದುಕು ಒಂದೆಡೆ ನೆಲೆನಿಂತು ಮೇಲ್ವರ್ಗದ ಗೌಡ ಇನ್ನಿತರ ಪ್ರತಿಷ್ಠಿತರ ಹಿಡಿತಕ್ಕೆ ಒಳಗಾಗುತ್ತಿದ್ದ ಕೆಲ ಕೆಳವರ್ಗದ ಜನರಿಗಿಂತ ಒಂದು ರೀತಿಯ ರಿಯಾಯಿತಿ ಪಡೆದಿತ್ತು. 'ಕುರುಮಯ್ಯ ಅಂಕುಶದೊಡ್ಡಿ' (ಜಂಬಣ್ಣ ಅಮರಚಿಂತ) ಕಾದಂಬರಿಯಲ್ಲಿ ರೂಪ್ಲಾನಾಯ್ಕನ ಸಲಹೆಯಂತೆ ಗುತ್ತಿಗೆಗೆ ಗದ್ದೆಗಳನ್ನು ಹಿಡಿದು ತಮ್ಮ ಅನ್ನಕ್ಕೆ ದಾರಿ ಮಾಡಿಕೊಳ್ಳಬೇಕೆಂದು ಬಯಸಿದ್ದ ಅಂಕುಶದೊಡ್ಡಿಯ ಕುರುಮಯ್ಯ ಮತ್ತು ಆತನ ಜನರ ಇಚ್ಛೆ ಈಡೇರುವುದಿಲ್ಲ. ಗೌಡನ ಖಾಯಂ ಶೋಷಣೆಯಲ್ಲಿಯೇ ಉಳಿಯಬೇಕಾಗಿದ್ದ ಕೊರವ ಸಮುದಾಯದಂತೆ ಲಂಬಾಣಿಗಳು ಯಾರ ಹಿಡಿತಕ್ಕೂ ಸಿಗುವುದಿಲ್ಲವಾದರೂ ಊರಿಂದೂರಿಗೆ ಬಂದು ಅವರು ಪಡುವ ಕಷ್ಟಗಳು ಇಲ್ಲಿ ಗೌಣವಾಗಿಯೇ ಉಳಿಯುತ್ತವೆ.

ಈ ಸಮುದಾಯದವರ ಬಡತನ, ಹಸಿವಿನ ಅಸಹಾಯಕತೆ, ಮಕ್ಕಳ ಮಾರಾಟದಂತಹ ಕ್ರೂರ ಬದುಕು 'ಕಳ್ಳುಬಳ್ಳಿಯ ಕುಡಿಗಳು' (ಗೀತಾ ನಾಗಭೂಷಣ) ಕತೆಯಲ್ಲಿ ತಿಳಿದುಬರುತ್ತದೆ. ರೂಪ್ಲಿಬಾಯಿಯ ಗಂಡ ತುಳಸಿದಾಸ ಬೇಜವಾಬ್ದಾರಿಯ ಮನುಷ್ಯ. ರೂಪ್ಲಿಬಾಯಿ ಸದಾ ಜೇಲುವಾಸಿಯಾಗುತ್ತಿದ್ದ ಗಂಡನನ್ನು ಲೆಕ್ಕಕ್ಕೆ ತೆಗೆದುಕೊಳ್ಳದೆ ದುಡಿಯುತ್ತಿದ್ದಳು. ಹೆಣ್ಣು ಮಕ್ಕಳನ್ನೇ ಹೆತ್ತು ಸಂಸಾರ ನೀಗಿಸಲು ಹೆಣಗುತ್ತಿದ್ದ ರೂಪ್ಲಿಬಾಯಿಯ ಜೀವನ ದುಸ್ಥರವಾಗಿರುತ್ತದೆ. ಸಂತಾನಹರಣ ಚಿಕಿತ್ಸೆ ಫಲಿಸದೆ ಮತ್ತೊಂದು ಹೆಣ್ಣು ಮಗುವನ್ನು ಹೆರಬೇಕಾಗಿ ಬಂದ ಆಕೆಯ ನೋವು, ನಿರಾಸೆಗಳು ಹೆಚ್ಚಾಗುತ್ತವೆ. ಜೈಲಿನಿಂದ ಬಂದ ತುಳಸಿದಾಸ ಆಗ ತಾನೇ ಹುಟ್ಟಿ ಕೆಲವೇ ದಿನಗಳಾಗಿದ್ದ ಹಸುಗೂಸನ್ನು ಮಾರುತ್ತಾನೆ. ತುಳಸಿದಾಸನ ವರ್ತನೆಗೆ ಬೇಸತ್ತ ರೂಪ್ಲಿಬಾಯಿ ಗಂಡನೊಂದಿಗೆ ಸಂಸಾರ ಮಾಡುವುದನ್ನು ವಿರೋಧಿಸಿ ನಿಲ್ಲುತ್ತಾಳೆ. ಗಂಡನ ಈ ಬಗೆಯ ವರ್ತನೆಯು ಹೆಣ್ಣಿನಲ್ಲಿ ಉಂಟುಮಾಡುವ ನೋವೇ ರೂಪ್ಲಿಬಾಯಿಯಲ್ಲಿ ಕಂಡುಬರುತ್ತದೆ. ಆದರೆ ತನ್ನ ಸಮುದಾಯದಲ್ಲಿನ ಮಕ್ಕಳನ್ನು ಮಾರಲು ಅಥವಾ ಗಂಡು ಮಗುವನ್ನು ಹೆರಬೇಕೆನ್ನುವ ಒತ್ತಡಗಳನ್ನು ತನ್ನ ಅಸಹಾಯಕ ಪರಿಸ್ಥಿತಿಯಲ್ಲೂ ಮೀರುವ ಧೈರ್ಯವನ್ನು ಆಕೆಯ ಬದುಕಿನ ನೋವಿನಿಂದಲೇ ಕಟ್ಟಿಕೊಳ್ಳುತ್ತಾಳೆ. ಆಕೆಯ ಈ ನಿರ್ಧಾರ ಬದುಕಿನ ದಟ್ಟ ಅನುಭವದಿಂದ

ಪ್ರೇರಿತವಾದದ್ದು. ಪುರುಷ ವಿರೋಧಿ ನಿಲುವು ತನ್ನ ಕರುಳುಬಳ್ಳಿಯನ್ನು ಅಮಾನವೀಯವಾಗಿ ಮಾರಿಕೊಂಡ ಕ್ರೌರ್ಯದಿಂದಲೇ ಜಾಗೃತವಾಗುತ್ತದೆ.

'ತಾಯಿ ಸಾಕೀಬಾಯಿ' (ಬಿ.ಟಿ. ಲಲಿತಾನಾಯಕ್) ಕತೆಯಲ್ಲಿ ಚಿಕ್ಕವಯಸ್ಸಿನಲ್ಲಿಯೆ ವಿಧವೆಯಾಗಿದ್ದ ಸಾಕೀಬಾಯಿಯ ಒಬ್ಬಂಟಿ ಜೀವನದಿಂದ ಕಷ್ಟಗಳನ್ನು ಅನುಭವಿಸುತ್ತಾಳೆ. ತನ್ನ ದುಡಿಮೆಯಲ್ಲಿ ಮಕ್ಕಳನ್ನು ಸಲಹುತ್ತಾಳೆ. ಒಬ್ಬ ಮಗ ಓದಿ ವಿದ್ಯಾವಂತನಾಗುತ್ತಾನೆ. ವಿದ್ಯಾವಂತ ಮಗ ಅನ್ಯಜಾತಿಯ ಯುವತಿಯನ್ನು ವಿವಾಹವಾಗುತ್ತಾನೆ. ಮಗನ ಅಂತರ್‌ಜಾತಿ ವಿವಾಹವನ್ನು ಸಾಕೀಬಾಯಿ ವಿರೋಧಿಸುವುದಿಲ್ಲ. ಇನ್ನೊಬ್ಬ ಮಗ ತಾಯಿಯೊಂದಿಗೆ ಉಳಿದು ಸಜಾತಿಯಲ್ಲಿಯೇ ವಿವಾಹವಾಗುತ್ತಾನೆ. ಮುನಿಯನೊಂದಿಗೆ ಸಂಬಂಧ ಹೊಂದಿದ್ದ ಸಾಕೀಬಾಯಿ ಆತನೊಂದಿಗೆ ವಿವಾಹವಾಗಲು ಇಚ್ಛಿಸುತ್ತಾಳೆ. ಆಕೆಯ ಇಚ್ಛೆಯನ್ನು ವಿರೋಧಿಸುವ ವಿದ್ಯಾವಂತ ಮಗ ಸಂಪ್ರದಾಯ ವಿರೋಧವಾಗಿ ತಾನು ನಡೆದುಕೊಂಡಿರುವುದನ್ನು ಮರೆಯುತ್ತಾನೆ. ಅನ್ಯಜಾತಿಯಿಂದ ಬಂದ ಸೊಸೆ ಸಾಕೀಬಾಯಿಗೆ ಸಹಕರಿಸುತ್ತಾಳೆ. ಆದರೆ ಸಾಕೀಬಾಯಿಯ ಇಬ್ಬರೂ ಮಕ್ಕಳು ಸೇರಿ ಮುನಿಯನನ್ನು ಕೊಲ್ಲಿಸುವ ಮೂಲಕ ತಾಯಿಯ ಆಸೆಯನ್ನು ಮಣ್ಣು ಪಾಲು ಮಾಡುತ್ತಾರೆ. ಉಡುಕಿ, ವಿಧವಾ ಪುನರ್‌ವಿವಾಹ ಈ ಸಮುದಾಯದಲ್ಲಿ ದೊಡ್ಡ ಸಮಸ್ಯೆಯಾಗಿ ಪರಿಗಣಿತವಾಗುವುದಿಲ್ಲ. ಆದರೆ ಸ್ತ್ರೀ ಮನೋಇಚ್ಛೆಯನ್ನು ಅರಿಯದ ಪುರುಷ ಸಮಾಜದ ಆಲೋಚನೆ ಗಳನ್ನೇ ಹೇರಬಯಸುವ ಮಕ್ಕಳಿಂದ ಸಾಕೀಬಾಯಿಯ ಬದುಕಿಗೆ ನ್ಯಾಯ ದೊರಕುವುದಿಲ್ಲ. ಸ್ವತಂತ್ರ ಆಯ್ಕೆಯನ್ನು ವಿರೋಧಿಸುವ ವ್ಯವಸ್ಥೆಯಲ್ಲಿ ಸ್ತ್ರೀ ಬಯಸುವ ನ್ಯಾಯ ದೊರಕಲಾರದು ಎಂಬುದನ್ನು ಕತೆ ಪ್ರತಿನಿಧಿಸುತ್ತದೆ.

'ಗತಿ' (ಬಿ.ಟಿ. ಲಲಿತಾನಾಯಕ್) ಕಾದಂಬರಿಯಲ್ಲಿ ಲಂಬಾಣಿ ಸಮುದಾಯದ ಸ್ಥಿತಿ ಮತ್ತು ಅದರ ಗತಿ ತಿಳಿದುಬರುತ್ತದೆ. ಕಾದಂಬರಿಯು ಸೋನಿಯ ಬದುಕನ್ನು ಕೇಂದ್ರೀಕರಿಸಿದಂತೆ ಕಂಡರೂ ಈ ಸಮುದಾಯದ ಅನೇಕ ವಿಷಯಗಳನ್ನು ತಿಳಿಸುತ್ತದೆ. ವಿಷಯ ಲಂಪಟ, ಕುಡುಕ ಹಾಗೂ ಕಳ್ಳನಾಗಿದ್ದ ಮಾನಸಿಂಗ್ ಅರ್ಧಂಬರ್ಧ ಓದಿದ್ದ. ಈತನ ತಂದೆ ಹರಾಸಿಂಗನು ಕುಟುಂಬದ ಬಗ್ಗೆ ಜವಾಬ್ದಾರಿಯಿಂದ ನಡೆದುಕೊಳ್ಳುತ್ತಿರಲಿಲ್ಲ. ತೆರ ಕೊಡುವ ತಮ್ಮ ಸಮುದಾಯದ ರಿವಾಜನ್ನು ಮುರಿದು ಸೈಕಲ್ ರೂಪದ ವರದಕ್ಷಿಣೆ ಪಡೆದು ಮಾನ್ಯ ಸೋನಿಯನ್ನು ಮದುವೆಯಾಗುತ್ತಾನೆ. ಹೀಗಿದ್ದರೂ ಮಕ್ಕಳನ್ನು ಹೊರತುಪಡಿಸಿ ಬದುಕಿಗೆ ಯಾವ ಭರವಸೆ, ನಿರೀಕ್ಷೆಗಳಿಲ್ಲದ ಸೋನಿ ಸಂಸಾರದಿಂದ ಯಾವ ನೆಮ್ಮದಿಯನ್ನು ಪಡೆಯುವುದಿಲ್ಲ. ಗಂಡನ ದೌರ್ಜನ್ಯದಿಂದ ಬೇಸತ್ತು ಬೇರೆ ಮನೆ ಮಾಡಿ ಒಂಟಿ ಜೀವನ ಸಾಗಿಸಲು ನಿರ್ಧರಿಸುತ್ತಾಳೆ. ಇದೇ ಸಮುದಾಯಕ್ಕೆ ಸೇರಿದ್ದ ಲಕ್ಷ್ಮಿ - ಹೀರಾ ಎಂಬ ದಂಪತಿಗಳು ಸುಖಜೀವನವನ್ನು ನಡೆಸಿದ್ದವರು. ಆದರೆ ದುರದೃಷ್ಟದಿಂದ ಮೈಸೂರು ನೋಡಲು ಹೋದ ಸಂದರ್ಭದಲ್ಲಿ ಲಕ್ಷ್ಮಿಯ ಗಂಡ ಮರಣ ಹೊಂದುತ್ತಾನೆ. ಮಠದ ಸ್ವಾಮಿಯೊಬ್ಬನ ಅತ್ಯಾಚಾರಕ್ಕೆ ಒಳಗಾದ ಲಕ್ಷ್ಮಿ ಹೇಗೊ ಅಲ್ಲಿಂದ ಪಾರಾಗಿ ಬಂದು ಜೀವನ ನಡೆಸಲು ಪ್ರಾರಂಭಿಸುತ್ತಾಳೆ. ಸೋನಿ ಬದುಕಿಗೆ ಲಕ್ಷ್ಮಿ ನೆರವಾಗಿ

ನಿಲ್ಲುತ್ತಾಳೆ. ಒಂಟಿಯಾದ ಸೋನಿಯ ಬದುಕನ್ನು ಅದೇ ಸಮುದಾಯದ ಪೂಜಾರಿ ಹಾಗೂ ಚೇರ್‌ಮನ್ ದುರುಪಯೋಗಪಡಿಸಿಕೊಳ್ಳಲು ಬಯಸುತ್ತಾರೆ. ಯಾರ ಕುತಂತ್ರಕ್ಕೂ ಒಳಗಾಗದೆ ಸೋನಿ ಸ್ವಾಭಿಮಾನಿ ಯಾಗಿ, ಸ್ವಾವಲಂಬಿಯಾಗಿರುತ್ತಾಳೆ.

ಇಡೀ ತಾಂಡ್ಯಾದಲ್ಲಿ ಅಜ್ಞಾನ, ಬಡತನ ತುಂಬಿಕೊಂಡಿರುತ್ತದೆ. ಸೇವಾಲಾಲಾ ಎಂಬ ದೇವರ ಹೆಸರಲ್ಲಿ ನಡೆಯುವ ಮೂಢನಂಬಿಕೆ, ಬಲಿ ಕೊಡುವ ಪದ್ಧತಿಗಳು ಈ ಸಮುದಾಯದಲ್ಲಿ ಕಂಡುಬರುತ್ತವೆ. ಪಂಚಾಯಿತಿ ನಿರ್ಣಯದಲ್ಲಿ ಸ್ತ್ರೀ ವಿರೋಧಿಯಾದ ನಿಲುವು ಕಂಡು ಬಂದಾಗ ಕಂಗಾಲಾಗುವ ಸೋನಿ ಹಾಗೂ ಲಕ್ಷ್ಮಿ ಬದುಕಿಗೆ ನೆರವಾಗುವ ಯುವಕನೆ ಚಂದು. ಹರಾಸಿಂಗನ ಮಗನೇ ಆಗಿದ್ದ ಚಂದು ಸ್ವತಃ ತಂದೆಯೇ ತನ್ನ ತಾಯಿಯನ್ನು ಕೊಂದು ಹಾಕಿದ ದುರ್ಘಟನೆಯನ್ನು ಕಂಡು ಅನಾಥನಾದವನು. ಸೋನಿ ಜೀವನದ ಅನ್ಯಾಯವನ್ನು ಸರಿಪಡಿಸಲು ಹಾಗೂ ಇಡೀ ತಾಂಡ್ಯಾವನ್ನು ಸುಧಾರಿಸಲು ಚಂದು ನಿರ್ಧರಿಸುತ್ತಾನೆ. ತಾಂಡ್ಯಾದಲ್ಲಿ ಶಾಲೆಯನ್ನು ಪ್ರಾರಂಭಿಸಿ ಚಿಕ್ಕವರಿಗೆ, ದೊಡ್ಡವರಿಗೆ ಕೂಡಿಯೇ ಅಕ್ಷರಜ್ಞಾನ ನೀಡಲು ಮುಂದಾಗುತ್ತಾನೆ. ಇದುವರೆಗೂ ಅಜ್ಞಾನವನ್ನೇ, ತಮ್ಮ ಕುಡಿತದ ಅಮಲನ್ನೇ ಬದುಕೆಂದು ಕೊಂಡಿದ್ದವರನ್ನು ಅದರಿಂದ ಹೊರಬರುವಂತೆ ಮಾಡುವ ಎಲ್ಲ ಪ್ರಯತ್ನಗಳು ಕಾದಂಬರಿಯಲ್ಲಿ ಕಂಡುಬರುತ್ತವೆ. ಸಮುದಾಯದ ಉದ್ಧಾರಕ್ಕಾಗಿ ಪ್ರಯತ್ನಿಸಿದ ಚಂದುವಿನ ವಿಚಾರಗಳು ಅನೇಕ ಗೊಂದಲಗಳನ್ನು ದಾಟಿ ತಾಂಡ್ಯಾದಲ್ಲಿ ಪ್ರಾಧಾನ್ಯತೆ ಪಡೆಯುತ್ತಾ ಹೋಗುತ್ತವೆ.

ಈ ಸಮುದಾಯದ ಉಡುಕಿ ಪದ್ಧತಿ, ತೆರಕೊಡುವ ಪದ್ಧತಿಗಳ ಬಗ್ಗೆ ಲಲಿತಾನಾಯಕ್ ಅವರು ಭಾವುಕ ನೆಲೆಯಲ್ಲಿ ವರ್ಣನೆ ಮಾಡಿಲ್ಲ. ವ್ಯವಸ್ಥೆಯೊಂದು ಮನುಷ್ಯನ ಏಳಿಗೆಗೆ ಇರಬೇಕೆ ವಿನಹ ವಿನಾಶಕ್ಕಲ್ಲ. ಸ್ತ್ರೀ ಪುರುಷರಲ್ಲಿರಬೇಕಾದ ಸಮಾನತೆಯನ್ನು, ಕೌಟುಂಬಿಕವಾಗಿ, ಸಾಮಾಜಿಕವಾಗಿ ಶೈಕ್ಷಣಿಕವಾಗಿ ಈ ಸಮುದಾಯ ಮುನ್ನೆಲೆಗೆ ಬರಬೇಕೆನ್ನುವ ಆಶಯವನ್ನೇ ಅಭಿವ್ಯಕ್ತಿಸಿದ್ದಾರೆ. ಏಳಿಗೆಯನ್ನು ತರುವ ಹೊಸ ಬದುಕಿಗೆ ಸಮುದಾಯವನ್ನು ವಿಸ್ತರಿಸಬೇಕೆಂದು ಆಶಿಸುತ್ತಾರೆ.

'ಹವನ' (ಮಲ್ಲಿಕಾರ್ಜುನ ಹಿರೇಮಠ) ಕಾದಂಬರಿಯಲ್ಲಿ ಈ ಸಮುದಾಯದ ಅನೇಕ ಆಚರಣೆಗಳು ತಿಳಿದುಬರುತ್ತವೆ. ಲಂಬಾಣಿ ಸಮುದಾಯದ ಹೊರಗಿನಿಂದ ಇಂತಹ ಹಬ್ಬ ಆಚರಣೆಗಳನ್ನು ಬೆರಗುಗಣ್ಣಿನಿಂದ ನೋಡುವ ವಿಶ್ಲೇಷಿಸುವ ರೀತಿ ಕಾದಂಬರಿಯಲ್ಲಿ ಕಂಡು ಬರುತ್ತದೆ. 'ತೀಜ' ಹಬ್ಬ ಅಥವಾ 'ಸಸಿ'ಗಳ ಹಬ್ಬವೆಂದೇ ಕರೆಯುವ ಇವರ ವಿಶಿಷ್ಟ ಆಚರಣೆಯೊಂದನ್ನು ಕಾದಂಬರಿಯಲ್ಲಿ ವಿವರಿಸುತ್ತಾರೆ. ಈ ಹಬ್ಬದಲ್ಲಿ ಗೋಧಿ ಸಸಿಗಳನ್ನು ಬೆಳೆಸುವ ಹುಡುಗಿಯರು ಒಂಬತ್ತು ದಿನ ಸಪ್ಪೆ ಊಟದ ವ್ರತ ಮಾಡುತ್ತಾರೆ. ಯಾರ ಬುಟ್ಟಿಯೊಳಗೆ ಸಸಿ ಹಚ್ಚ ಹಸಿರಾಗಿ ಬೆಳದಿರುತ್ತದೆಯೊ ಆ ಹುಡುಗಿ ಶೀಲವತಿ ಎಂಬ ನಂಬಿಕೆ ಇವರಲ್ಲಿದೆ. ಪ್ರಗತಿಪರವಾದ ಆಲೋಚನೆಗಳು ಸೋಮಲ್ಯಾ ನಾಯ್ಕನಲ್ಲಿರುವುದು ಕಾದಂಬರಿಯಲ್ಲಿ ತಿಳಿದುಬರುತ್ತದೆ. ಇವರಲ್ಲಿ ಶಿಕ್ಷಣ ಪ್ರಸಾರಕ್ಕೆಂದು ಹೋಗುವ ಶಿಕ್ಷಕ ಇವರ ಬದುಕಲ್ಲಿ ಮುಖ್ಯಪಾತ್ರವಹಿಸುತ್ತಾನೆ. ಬೀಳು ಬಿದ್ದಿದ್ದ ಗೋಮಾಳವನ್ನು ಕೃಷಿಯೋಗ್ಯ

ಭೂಮಿಯನ್ನಾಗಿ ಮಾಡುವ ಇವರ ಅಭಿವೃದ್ಧಿಯನ್ನು ಮೇಲ್ವರ್ಗದವರು ಸಹಿಸದೆ ಹಾಳು ಮಾಡುತ್ತಾರೆ. ಉತ್ತರ ಕರ್ನಾಟಕದ ಹುನಗುಂದ ಪ್ರದೇಶದ ಲಂಬಾಣಿ ಸಮುದಾಯದ ರೀತಿ ನೀತಿ, ಆಚರಣೆ, ಸಂಭ್ರಮ, ಸಾರಾಯಿ ಮಾರುವ ದಂಧೆ, ಹೀಗೆ ಇವೆಲ್ಲ ವಿಷಯಗಳು ಕಾದಂಬರಿಯಲ್ಲಿ ತಿಳಿದುಬರುತ್ತವೆ. ಇವರಲ್ಲಿರುವ ದುಡಿಮೆಯ ಶಕ್ತಿ ಅದನ್ನು ಸಹಿಸದೆ ಮತ್ತೇ ಇವರನ್ನು ಕಳ್ಳರನ್ನಾಗಿಯೋ, ಕುಡುಕರು, ಅನಾಗರಿಕ ರನ್ನಾಗಿಯೇ ಉಳಿಸುವ ಮೇಲ್ವರ್ಗದ ಹತೋಟಿ ಕಾದಂಬರಿಯ ಆಳದಿಂದ ತಿಳಿದುಬರುತ್ತದೆ.

ಕಥೆಯ ಭಾಗವಾಗಿ ಅಲ್ಲಲ್ಲಿ ಪ್ರಸ್ತಾಪವನ್ನು ಪಡೆಯುತ್ತಿದ್ದ ಈ ಬುಡಕಟ್ಟು ಸಮುದಾಯ ಕಥನದ ಇಡಿಯಾದ ವ್ಯಾಪ್ತಿಯನ್ನು ಪಡೆದಿರುವುದು ಹೈದರಾಬಾದ್ ಕರ್ನಾಟಕದ ಕಥನಸಾಹಿತ್ಯದಿಂದ ತಿಳಿದುಬರುತ್ತದೆ. ಇವರ ಆಚರಣೆ ನಂಬಿಕೆಗಳು ಪ್ರದೇಶದ ಒಳಗೆ ಭಿನ್ನತೆಯಿಂದ ಕೂಡಿರುವ ಸಾಧ್ಯತೆಗಳಿವೆ. ಆದರೆ ಈ ಸಮುದಾಯ ಪ್ರಗತಿಪಥದಲ್ಲಿ ಸಾಗಬೇಕಾದ ಅಗತ್ಯ ಮಾತ್ರ ಇಲ್ಲಿನ ಕಥನದ ಮುಖ್ಯ ವಿಷಯವಾಗಿದೆ. ಇವರ ಬದುಕಿನ ಕೆಲ ರೀತಿ-ನೀತಿಗಳಲ್ಲಿ ಉಂಟಾಗಬೇಕಿರುವ ಪರಿಷ್ಕೃತತೆ ಈ ಸಮುದಾಯದ ನೆಮ್ಮದಿಯುತ ಬದುಕಿಗೆ ದಾರಿಯಾಗುತ್ತದೆ. ಮಕ್ಕಳ ಮಾರಾಟ, ಶಿಕ್ಷಣ ವಿರೋಧಿ ನೀತಿ, ಕುಡಿತ, ಇತ್ಯಾದಿಗಳಿಂದ ಮುಕ್ತವಾಗಿ ತಮ್ಮ ಬದುಕನ್ನು ಪ್ರಗತಿಪಥದಲ್ಲಿ ರೂಪಿಸಿಕೊಳ್ಳುವ ಮನಸ್ಥಿತಿ ಸಮುದಾಯದಲ್ಲಿ ರೂಪಿತವಾಗಬೇಕಿದೆ. ಈ ರೀತಿಯ ಹೊಸ ದಿಕ್ಕಿನೆಡೆಗಿನ ಇವರ ಚಲನೆಯ ಆಸಕ್ತಿಗಳನ್ನು ಸೂಕ್ಷ್ಮವಾಗಿ ಇಲ್ಲಿನ ಕಥನ ತಿಳಿಸುತ್ತದೆ.

### ಇತರ ತಳಸಮುದಾಯಗಳು

ಶೋಷಣೆಯನ್ನು ಒಪ್ಪಿಕೊಂಡಿದ್ದ ಈ ಪ್ರದೇಶದ ವಿಭಿನ್ನ ತಳಸಮುದಾಯಗಳು ಇಲ್ಲಿನ ಕಥನ ಸಾಹಿತ್ಯದಲ್ಲಿ ಕಂಡುಬರುತ್ತವೆ. ಬದುಕಿನ ಬಗೆಗೆ ತಿಳುವಳಿಕೆಯನ್ನು ಕಂಡುಕೊಂಡ, ಬದಲಾವಣೆಯನ್ನು ಅಪೇಕ್ಷಿಸಿ ಹೋರಾಡುವ ಇವರ ಸಂವೇದನೆಯ ವಿಭಿನ್ನ ಅಭಿವ್ಯಕ್ತಿ ಆಂಶಿಕವಾಗಿ ಹಾಗೂ ಕೇಂದ್ರ ವಿಷಯವಾಗಿ ಕಂಡು ಬಂದಿರುವುದನ್ನು ಇಲ್ಲಿ ಗುರುತಿಸಲಾಗಿದೆ. ಕಥನದ ಪ್ರಧಾನ ವಿಷಯವಾಗಿ ತಳಸಮುದಾಯದ ಸಂವೇದನೆ ಅಭಿವ್ಯಕ್ತಿ ಪಡೆಯುವಂತಾಗಿದ್ದು ಕೇವಲ ಸಾಹಿತ್ಯಿಕ ಬದಲಾವಣೆಯಲ್ಲ, ಸಾಮಾಜಿಕ ಬದಲಾವಣೆಯೂ ಆಗಿದೆ. ರಜಾಕಾರರ ಹಾವಳಿಯಲ್ಲಿ ಸ್ವತಂತ್ರ ಹೋರಾಟಗಾರರಿಗೆ ಸಹಾಯಕರಾಗಿ ಕಂಡು ಬಂದ ತಳ ಸಮುದಾಯದವರ (ಯಾರು ನಮ್ಮವರು?) ಚಿತ್ರಣ ದಿಟ್ಟತನದಿಂದ ಕೂಡಿದೆ. ಈವರೆಗೆ ತಮ್ಮ ಮೇಲಾದ ಅನ್ಯಾಯವನ್ನು ವಿರೋಧಿಸಿ ಮತಾಂತರದಿಂದ ತಾತ್ಕಾಲಿಕವಾಗಿ ಅಸ್ಪೃಶ್ಯತೆಯ ಬದುಕಿನಿಂದ ಬಿಡುಗಡೆಯನ್ನು ಪಡೆದಿದ್ದ ತಳ ಸಮುದಾಯದ ಸಂವೇದನೆಗಳು 'ಹಾಲುಜೇನು' (ಜಯತೀರ್ಥ ರಾಜಪುರೋಹಿತ) ಕಾದಂಬರಿಯಲ್ಲಿ 'ಬಡೆಸಾಬು ಪುರಾಣ' (ಶಾಂತರಸ) ಕತೆಯಲ್ಲಿ ಕಂಡು ಬರುತ್ತವೆ. ಮೇಲ್ವರ್ಗದಿಂದ ತಮಗಾದ ಅನ್ಯಾಯದ ಪ್ರತಿಕಾರವಾಗಿಯೇ ಕಂಡು ಬರುವ ಈ ಮತಾಂತರ ಈವರೆಗೂ ಕಂಡುಬಂದ ಅನ್ಯಾಯಗಳನ್ನೇ ಪ್ರತಿನಿಧಿಸುತ್ತದೆ. ಮತಾಂತರವೆಂಬ ರಾಜಕೀಯ ಕುತಂತ್ರಕ್ಕೆ ಒಳಗಾಗಿ ಶೋಷಣೆಯ ಇನ್ನೊಂದು ರೂಪವನ್ನು ಈ ಸಮುದಾಯ ಅನುಭವಿಸಿತು.

ಭೂ ಒಡೆಯನಿಂದ, ಪುರೋಹಿತಶಾಹಿಗಳಿಂದ, ರಾಜಕೀಯ ವ್ಯಕ್ತಿಗಳಿಂದ ತುಳಿತಕ್ಕೀಡಾದ ಸಮುದಾಯದ ಸಂವೇದನೆ ಕಾಲಘಟ್ಟಕ್ಕೆ ಅನುಗುಣವಾಗಿ ಬದಲಾವಣೆಯಾಯಿತು. ಮೇಲ್ವರ್ಗ, ಕೆಳವರ್ಗದ ಸಂಘರ್ಷ ಸಮಾಜದಲ್ಲಿ ಕಂಡುಬರುತ್ತಲೇ ಇರುವುದನ್ನು ಇಲ್ಲಿನ ಕತೆಗಳಲ್ಲಿ ಗುರುತಿಸಬಹುದಾಗಿದೆ. ಒಂದು ಕಾಲಘಟ್ಟದಲ್ಲಿ ಒಪ್ಪಿಸಲಾದ ಎಲ್ಲಾ ಹೇರಿಕೆಗಳನ್ನು ಈ ಸಮುದಾಯವು ಮೂಢನಂಬಿಕೆಯಿಂದಲೊ, ಕೆಳವರ್ಗದವರೆಂಬ ಕೀಳರಿಮೆಯಿಂದಲೊ, ಉಳ್ಳವರೆಂಬ ಭಯದಿಂದಲೊ, ಒಪ್ಪಿಕೊಂಡು ಬಂದದ್ದನ್ನು ಆರಂಭಘಟ್ಟದ ಕತೆಗಳಲ್ಲಿ ಗುರುತಿಸಬಹುದಾಗಿದೆ. ಶಾಂತರಸರ 'ಗೋದಾನ' ಕತೆಯು ಮೂಢನಂಬಿಕೆಯಲ್ಲಿರುವ ತಳಸಮುದಾಯವನ್ನು ತನ್ನ ಹಿತಾಸಕ್ತಿಗೆ ಬಳಸಿಕೊಳ್ಳುವ ಪುರೋಹಿತಶಾಹಿ ವರ್ಗದ ಕುಯುಕ್ತಿಯನ್ನು ತಿಳಿಸುತ್ತದೆ. ಮೂಢನಂಬಿಕೆಗಳಿಂದ, ತಳಸಮುದಾಯದವರೆಂಬ ಹಿಂಜರಿಕೆಗಳಿಂದ ಹೊರಬರದೆ ಉಳಿದ ಈ ಸಮುದಾಯದವರಲ್ಲಿಯೇ ನಿಜವಾದ ಜಾಗೃತಿ ಮೂಢಬೇಕಾಗಿದೆ. ಸ್ವಹಿತಾಸಕ್ತಿಯಲ್ಲಿಯೇ ಉಳಿಯಬಯಸುವ, ಸ್ವತಃ ಸಮುದಾಯದವರಲ್ಲಿಯೇ ಅನ್ಯಾಯವೆಸಗಲು ಮುಂದಾಗುವ ಇವರ ಬದುಕಿನಲ್ಲಿ ಉಂಟಾಗಬೇಕಾದ ಜಾಗೃತಿಯನ್ನು ಕುರಿತು ಚೆನ್ನಣ್ಣ ವಾಲೀಕಾರರ 'ಹೊಲಗೇರಿ' ಕತೆ ತಿಳಿಸುತ್ತದೆ. ತಬ್ಬಲಿಯಾಗಿ ಬೆಳೆದ ರಾಯ ಮುಂದೆ ಬಂಡೆಪ್ಪನಿಗೆ ಮೃತ್ಯುವಾಗಿ ನಿಲ್ಲುತ್ತಾನೆ. ಶಿವರಾಯ ಮಾಸ್ತರನಂತಹ ಹರಿಜನೋದ್ಧಾರಕನನ್ನು ಕೊಲ್ಲಿಸಿದ ಬಂಡೆಪ್ಪನ ಮೇಲೆ ರಾಯನ ಸೇಡು ಹೆಚ್ಚಾಗುತ್ತದೆ. ಮುಂದೆ ಆ ಸಮುದಾಯದ ಚೆನ್ನಗೊಂಡನೊಂದಿಗೆ ಸೇರಿಕೊಂಡು ರಾಜಕೀಯವಾಗಿ ಬಂಡೆಪ್ಪನನ್ನು ವಿರೋಧಿಸುತ್ತಾನೆ. ಅನೇಕ ಕಾರ್ಯಗಳನ್ನು ಹಳ್ಳಿಗಳ ಉದ್ಧಾರಕ್ಕಾಗಿ, ಹರಿಜನೋದ್ಧಾರಕ್ಕಾಗಿ ರಾಯ ಮತ್ತು ಚೆನ್ನಗೊಂಡರು ಮಾಡಿ ಜನ ಮೆಚ್ಚುಗೆಯನ್ನು ಪಡೆಯುತ್ತಾರೆ. ಆದರೆ ಈ ಸಮುದಾಯದವರನ್ನು ನಿರಂತರವಾಗಿ ಆಳುತ್ತಲೇ ಬಂದ ಮೇಲ್ವರ್ಗದವರ ಕುಯುಕ್ತಿ ಮತ್ತೆ ಇಲ್ಲಿ ಫಲಿಸುತ್ತದೆ. ರಾಯನನ್ನು ಸ್ವತಃ ಆತನ ಸಮುದಾಯದವನೇ ಆದ ಕಾಸ್ಯಾ ಕೊಲ್ಲುತ್ತಾನೆ. ಇದರಿಂದ ಬೇಸತ್ತ ಚೆನ್ನಗೊಂಡ 'ನಾಯಿಬಾಲ ಡೊಂಕಿರುವಂತೆ ಅಜ್ಞಾನ, ಹಾದರ, ಕಳವು, ಕೊಲೆಗಳಲ್ಲಿ ಬಿದ್ದಿರುವ ಈ ಜನಕ್ಕೆ ಏನು ಕೊಟ್ಟರೇನು? ಹಸಿವಾದಾಗ ಉಂಡರೆ ರಕ್ತವಾಗುವಂತೆ ಅರಿವಿಲ್ಲದಿರುವಾಗ ಏನು ಸವಲತ್ತು ನೀಡಿದರೇನು? ಸಹಾಯ ಸಲ್ಲಿಸಿದರೇನು? ಈ ಜನ ಈ ಜನವಾಗಿಯೇ ಇರುವದೆಂದಾಗ ಹರಿಜನರ ಹೆಸರಲ್ಲಿ ನಡೆವ ಕ್ರಾಂತಿ ಮಾತುಗಳು ಉದ್ಧಾರ ಬೋಧನೆಗಳು ಯೋಚನೆ, ಯೋಜನೆಗಳು ಎಷ್ಟು ಹಾಸ್ಯಾಸ್ಪದ! ಅವರು ಮೇಲೇಳದಂತೆ ನೋಡಿಕೊಳ್ಳುವ ಮೇಲ್ವರ್ಗದ ಸರ್ಪಗಾವಲು ಇರುವತನಕ ಹೀಗಾಗುವುದೆ! ಈ ಹೊಲಗೇರಿಯನ್ನು ಶುದ್ಧ ಮಾಡುವುದು ಹೇಗೆ? ಇವರು ಎಲ್ಲ ಮಾನವರಂಥಾಗಲು ಎಂಥ ಸಂಸ್ಕಾರ ಬೇಕು?' (ಚೆನ್ನಣ್ಣ ವಾಲೀಕಾರ; ೨೦೦೩; ಪುಟ : ೪೭) ಎಂದು ಮರುಗುತ್ತಾನೆ.

ಇವರ ಅನೇಕ ಕತೆ ಕಾದಂಬರಿಗಳಲ್ಲಿ ಹರಿಜನೋದ್ಧಾರದ ಕನಸು ನನಸಾಗದಂತೆ ಉಳಿಯುತ್ತಿರುವುದು ಕಂಡು ಬರುತ್ತದೆ. ಶೋಷಣೆಯನ್ನು ಒಪ್ಪುವ, ವಿರೋಧಿಸಿ ವಿನಾಶಕ್ಕೀಡಾಗುವ,ಹೀಗೆ ಪೂರ್ಣ

ಪ್ರಮಾಣದ ಬದುಕಿನ ನ್ಯಾಯವನ್ನು ಕಂಡುಕೊಳ್ಳಲಾಗದ ಸ್ಥಿತಿಯಲ್ಲಿಯೇ ಉಳಿದಿರುವುದು ತಿಳಿದು ಬರುತ್ತದೆ.

ಮೂಢನಂಬಿಕೆಗಳನ್ನು, ಅನ್ಯಾಯದ ಹೇರಿಕೆಗಳನ್ನು ಗ್ರಹಿಸುವ ಪ್ರಜ್ಞಾವಂತ ಜನಾಂಗ ತಳವರ್ಗದಲ್ಲಿ ಹುಟ್ಟಿ ಬಂದದ್ದು ಹೊಸ ಬದಲಾವಣೆಯನ್ನು ಮೂಡಿಸಿತು. ಹೊಸ ಆಲೋಚನೆಗಳು, ಪ್ರಜ್ಞೆಯೊಂದರ ಜಾಗೃತಿಯು ಕಾರ್ಯರೂಪಕ್ಕೆ ಬರುವಾಗಿನ ಅನೇಕ ಅಡ್ಡಿ-ಆಂತಕಗಳನ್ನು, ಹೊಸ ಜೀವನ ಕ್ರಮದಿಂದ ಹೊರಬೇಕಾದ ಹೊಸ ಜವಾಬ್ದಾರಿಗಳನ್ನು ಇಲ್ಲಿನ ಕತೆಗಳು ತಿಳಿಸುತ್ತವೆ. ಅದರಲ್ಲಿಯೂ ಕೆಳವರ್ಗದ ಸ್ತ್ರೀ ಬದುಕು ಜಾಗೃತಿಗೆ ತೆರೆದುಕೊಂಡಿದ್ದು ಮುಖ್ಯ ವಿಷಯವೆಂದೇ ಪರಿಗಣಿತವಾಗುತ್ತದೆ. ಶಿಕ್ಷಣದ ವಲಯಕ್ಕೆ ಸುಳಿಯದ, ಅನ್ಯಾಯವನ್ನು ಅಮಾನವೀಯ ಹೇರಿಕೆಗಳನ್ನು ರೂಢಿಸಿಕೊಂಡಿದ್ದ ತಳವರ್ಗದ ಮಹಿಳೆಯರ ಬದುಕನ್ನು ಖಂಡಿಸುವ, ಯಥಾವತ್ತಾಗಿ ಚಿತ್ರಿಸುವ ಕತೆಗಳು ಈ ಪ್ರದೇಶದಲ್ಲಿ ಕಂಡುಬರುತ್ತವೆ. ನಿರಮಾನ್ವಿಯವರ 'ದುರಸ್ತಿ' ಕತೆ ಕೆಳವರ್ಗದ ಮಹಿಳೆಯಲ್ಲಿ ಉಂಟಾಗಬೇಕಾದ ಜಾಗೃತಿಯನ್ನು ತಿಳಿಸುತ್ತದೆ. ರಾಮಣ್ಣನು ಗೌಡನ ಸೂಳೆಯಾದ ತನ್ನ ತಾಯಿಯಿಂದಾದ ತನ್ನ ಹುಟ್ಟನ್ನು ಹೀಗಳೆಯುತ್ತಾನೆ. ಗೌಡನ ಮಗನನ್ನು ತಮ್ಮನೆಂದೇ ರಾಮಣ್ಣ ಗೌರವಿಸುತ್ತಾನೆ. ಆದರೆ ರಾಮಣ್ಣನ ತಂಗಿ ಅಣ್ಣನ ಸಮಾನನಾದ ಗೌಡನ ಮಗನೊಂದಿಗೆ ಅನೈತಿಕ ಸಂಬಂಧವನ್ನು ಇಟ್ಟುಕೊಳ್ಳುತ್ತಾಳೆ. ಗೌಡನ ತನ್ನ ಜನ್ಮದಾತನೆಂದು ತಿಳಿದ ಜನ ತನಗೆ ತೋರುವ ಗೌರವವನ್ನು ರಾಮಣ್ಣ ಒಪ್ಪುತ್ತಾನಾದರೂ ಅದು ತಾತ್ಕಾಲಿಕ. ತಂಗಿಯ ಹೇಯ ಕೃತ್ಯ, ಗೌಡನಿಂದ ತನಗಾದ ಅನ್ಯಾಯಕ್ಕೆ ಕುಗ್ಗುತ್ತಾನೆ. ಕೆಳವರ್ಗದ ವೇಶ್ಯೆಗೆ ಬಾಳುಕೊಟ್ಟು ಉದ್ಧಾರ ಮಾಡಬೇಕೆಂದು ಬಯಸುತ್ತಾನೆ. ಆದರೆ ಅವಳು ರಾಮಣ್ಣನನ್ನು ವಂಚಿಸಿ ಬಾಂಬೆಗೆ ಶ್ರೀಮಂತನೊಬ್ಬನೊಂದಿಗೆ ಹೊರಟು ಹೋಗುತ್ತಾಳೆ. ಮೊದಲು ತನ್ನ ಕುಟುಂಬ, ಸಮುದಾಯವನ್ನು ಸರಿಪಡಿಸಿಕೊಳ್ಳದೆ ಬೇರೆಯವರನ್ನು ತಿದ್ದಿ ಉತ್ತಮ ದಾರಿಯಲ್ಲಿ ಮುನ್ನಡೆಸಬೇಕೆಂದು ಅಪೇಕ್ಷಿಸುವುದು ಮೂರ್ಖತನದ ವಿಚಾರವೆಂದು ತಿಳಿಯುತ್ತಾನೆ. ದುರಸ್ತಿಗೊಳ್ಳಬೇಕಾದವರು ಮೊದಲು ಯಾರೆಂಬುದನ್ನು ತಿಳಿಸುವ ಕತೆ ಸಮುದಾಯದ ಅಸ್ತಿತ್ವವಾದವನ್ನು ತಿಳಿಸುತ್ತದೆ.

(ದೈಹಿಕ ಶೋಷಣೆಗೆ ತಮ್ಮನ್ನು ಗುರಿ ಮಾಡುವ ಮೇಲ್ವರ್ಗದವರ ವಿರುದ್ಧ ಸಿಡಿದೆದ್ದ ಕೆಳವರ್ಗದ ಮಹಿಳೆಯರ ಜೀವನವನ್ನು ಇಲ್ಲಿನ ಕತೆಗಳಲ್ಲಿ ಗುರುತಿಸಲಾಗುತ್ತದೆ. ಪ್ರತಿಭಟನೆ ಅದಕ್ಕೆ ಸಿಕ್ಕ ಪ್ರತಿಫಲ ಕಾಲದಿಂದ ಕಾಲಕ್ಕೆ ಬದಲಾವಣೆಯಾಗಿದೆ. ಶೋಷಣೆಯನ್ನು ಒಪ್ಪದ ಮಾದೇವಿಯ ದಿಟ್ಟ ನಿಲುವು 'ಮಲಿನ ಮಜ್ಜನ ನ್ಯಾಯಕ್ಕೆಳಿಸಿ' (ಶಾಂತರಸ) ಕತೆಯಲ್ಲಿ ಕಂಡು ಬರುತ್ತದೆ. ತನ್ನನ್ನು ಬಸವಿ ಮಾಡ ಹೊರಟವರ ವಿರುದ್ಧ ಬಂಡೆದ್ದ ಮಾದೇವಿ ಉನ್ನತ ವರ್ಗದವರ ಕುಯುಕ್ತಿಗೆ ಬಲಿಯಾಗದೆ ಹೊಸ ಬದುಕಿನೆಡೆಗೆ ಮುಖ ಮಾಡುತ್ತಾಳೆ. ಮಾದೇವಿ ಹೊಸ ಬದುಕಿನ ಆದರ್ಶಗಳನ್ನು ಪಾಲಿಸಿದ ಕಾರಣಕ್ಕೆ ತಂದೆಯನ್ನು, ಗಂಡನನ್ನು ಕಳೆದುಕೊಳ್ಳುತ್ತಾಳೆ. ಆಕೆಯ ಆದರ್ಶಯುತ ಬದುಕನ್ನು ಸಹಿಸದ ಮೇಲ್ವರ್ಗದ ಜನತೆ, ಪುರೋಹಿತಶಾಹಿಗಳು ಆಕೆಯ ಗಂಡನನ್ನು, ತಂದೆಯನ್ನು ಕೊಲೆ ಮಾಡುವುದಲ್ಲದೆ ಉನ್ನತ

ವರ್ಗದ ದೈವವಾದ ಈಶ್ವರಲಿಂಗದ ಮೇಲೆ ಮಾದೇವಿ ನೀರು ಹಾಕಿದಳು ಎಂಬುದನ್ನು ನೆಪಮಾಡಿಕೊಂಡು ಪಂಚಾಯಿತಿ ಸೇರುತ್ತಾರೆ. ಲಿಂಗದ ಮೇಲೆ ನಾಯಿ ಮಾಡಿದ ಮಲಿನ ತೊಳೆದ ಮಾದೇವಿಯನ್ನು ಈ ನೆಪದಿಂದಲಾದರೂ ತಮ್ಮ ಕುಯುಕ್ತಿಗೆ ಬಳಸಿಕೊಳ್ಳಲು ಯತ್ನಿಸುವ ಮೇಲ್ವರ್ಗ ಮಾದೇವಿಯ ಪ್ರತಿಭಟನೆಯಿಂದ ಸೋಲುತ್ತದೆ. ಆದರೆ ಮಾದೇವಿಯು ತಾನು ನಿರೀಕ್ಷಿಸಿದ ಬದುಕುನ್ನು ಕಂಡುಕೊಳ್ಳಲು ಸಾಧ್ಯವಾಗುವುದಿಲ್ಲ.)

ಒತ್ತಾಯಪೂರ್ವಕ ಹೇರಿಕೆಯಿಂದ ತಳವರ್ಗದ ಮಹಿಳೆಯರ ಬದುಕು ನಲುಗಿರುವುದನ್ನು 'ಹುಲಿಗೆಮ್ಮ' (ಚೆನ್ನಣ್ಣ ವಾಲೀಕಾರ) ಕಾದಂಬರಿ ವಿವರಿಸುತ್ತದೆ. ಪರಿಸ್ಥಿತಿಯ ಹಿಡಿತಕ್ಕೆ ಸಿಕ್ಕು ಸ್ವತಃ ತಾನೇ ವೇಶ್ಯಾವಾಟಿಕೆಗೆ ಇಳಿಯುವ ಹುಲಿಗೆಮ್ಮನ ಬದುಕು ಕೊನೆಯಲ್ಲಿ ಪಡೆದುಕೊಳ್ಳುವ ನ್ಯಾಯ ಕಳೆದ ಬಾಳಿನ ಅನ್ಯಾಯಕ್ಕೆ ಸಿಕ್ಕ ಸಾಂತ್ವಾನವೇ ಹೊರತು ಆಕೆಯ ಹೋರಾಟಕ್ಕೆ ಸಿಕ್ಕ ಪ್ರತಿಫಲವಲ್ಲ. ಅನ್ಯಾಯಕ್ಕೀಡು ಮಾಡಿದವರು ಯಾವ ಬದಲಾವಣೆಯೂ ಇಲ್ಲದೆ ಉಳಿಯುವ, ನ್ಯಾಯಕ್ಕಾಗಿ ಹೋರಾಡಿದವರು ತೀವ್ರ ನೋವನ್ನು ಅನುಭವಿಸುವ ಸಮಾಜದ ಶ್ರೇಣೀಕೃತ ವ್ಯವಸ್ಥೆಯ ಆಮೂಲಾಗ್ರ ಬದಲಾವಣೆ ಇಲ್ಲಿ ಸಾಧ್ಯವಾಗಿಲ್ಲ. ಕತೆಗಳಲ್ಲಿ ಕಂಡುಬರುವ ತಾತ್ಕಾಲಿಕ ಪರಿಹಾರ ರೂಪದ ಈ ಜನಾಂಗದ ಸ್ತ್ರೀ ಬದುಕಿನ ವಿಮುಕ್ತಿ ಶೋಷಣೆಯಲ್ಲಿ ಗಟ್ಟಿಗೊಂಡು ಬದುಕಿಗೆ ತೆರೆದುಕೊಂಡವರಂತೆ ಕಂಡು ಬರುತ್ತಾರೆಯೇ ವಿನಹ ತನಗೆ ಬೇಕಾದ ಬದುಕನ್ನು ಹಕ್ಕಿನ ರೂಪದಲ್ಲಿ ಪಡೆದುಕೊಳ್ಳುವಲ್ಲಿ ಹೋರಾಡುವ ಮುಖೇನ ಗಟ್ಟಿಗೊಳ್ಳುವಿಕೆ ಇಲ್ಲಿಲ್ಲ. ಈ ವೈಫಲ್ಯ ಕಾಲಘಟ್ಟದ ಒತ್ತಡವನ್ನು ಅದಕ್ಕನುಗುಣವಾಗಿಯೇ ತಿಳಿಸಬೇಕಾಗಿ ಬರುವ ವಾಸ್ತವಿಕ ಸ್ಥಿತಿಯನ್ನು ಬಿಂಬಿಸುತ್ತದೆ. ಇದು ನಂತರದ ಕಾಲಘಟ್ಟದಲ್ಲಿ ಬದುಕಿನ ರೀತಿ, ಸಂವೇದನೆಗಳಲ್ಲಾದ ಬಲಾವಣೆಗಳನ್ನು ತಿಳಿಯಲು ದಾರಿಯಾಗುತ್ತದೆ ಎಂದರೆ ತಪ್ಪಾಗಲಾರದು.

'ಊರಮ್ಮ' (ಅಮರೇಶ ನುಗಡೋಣಿ) ಕತೆಯಲ್ಲಿನ ಊರಮ್ಮ ತನ್ನ ಆಯ್ಕೆಗಾಗಿ ಫ್ಯೂಡಲ್ ವ್ಯವಸ್ಥೆಯನ್ನು ತುಳಿದು ಹೊರಟವಳು. ಶೋಷಣೆಯಲ್ಲಿಯೇ ಗಟ್ಟಿಗೊಂಡು ಅದರಲ್ಲಿಯೇ ಉಳಿಯುವ ಶೋಷಿತ ಸ್ತ್ರೀಯ ಅಂತಃಸತ್ವಕ್ಕೂ, ಶೋಷಣೆಗೆ ಈಡುಮಾಡುವವರನ್ನು ವಿರೋಧಿಸಿ ತನ್ನ ನಿಲುವಿನಲ್ಲಿ ಗಟ್ಟಿಗೊಂಡು ಹೊಸ ಬದುಕಿನ ಜವಾಬ್ದಾರಿ ಹೊರುವವರಿಗೂ ವ್ಯತ್ಯಾಸವಿದೆ. ಊರಮ್ಮ ಫ್ಯೂಡಲ್ ವ್ಯವಸ್ಥೆಯಿಂದ ಪೋಷಿತನಾದ ಸೀತಯ್ಯನನ್ನು ಧಿಕ್ಕರಿಸಿ ಆಕೆಯ ಇಚ್ಛೆಗೆ ಅನುಗುಣವಾಗಿ ಭೀಮನೊಂದಿಗೆ ಜೀವನ ನಡೆಸಲು ಬಯಸುತ್ತಾಳೆ. ದೇಹ ಮತ್ತು ಮನಸ್ಸಿಗೆ ಸಂಬಂಧಿಸಿದ ಸೂಕ್ಷ್ಮ ವಿಚಾರಗಳನ್ನು ಕತೆ ತಿಳಿಸುತ್ತದೆ. ಬಲತ್ಕಾರದಿಂದ ಊರಮ್ಮನ ದೇಹವನ್ನು ವಶಪಡಿಸಿಕೊಂಡ ಸೀತಯ್ಯನಂತಹ ಶೋಷಕರಿಗೆ ಆಕೆಯ ದೇಹ ವಶವಾಗುತ್ತದೆಯೆ ವಿನಹ ಮನಸ್ಸಲ್ಲ. ಅಂತಸ್ತುಗಳಿಲ್ಲದ, ಬುದ್ಧಿ ಬಲಿಯದ, ವಾದ್ಯ ನುಡಿಸುವುದರಲ್ಲಿ ಪ್ರವೀಣನಾಗಿದ್ದ ಭೀಮನಿಗೆ ಮನಸೋತ ಊರಮ್ಮ ತನ್ನ ನಿಲುವನ್ನು ಗಟ್ಟಿಗೊಳಿಸಿ ಕೊಳ್ಳುತ್ತಾಳೆ. ಈ ಕಾರಣಕ್ಕೆ ಪಡಬಹುದಾದ ಎಲ್ಲ ಸಂಕಷ್ಟಗಳನ್ನು ಅನುಭವಿಸುವ ಊರಮ್ಮ ಕೊನೆಗೆ ಸೀತಯ್ಯನನ್ನು ಕೊಂದು ಹಾಕುತ್ತಾಳೆ. ತನ್ನ ಬದುಕನ್ನು ಕಸಿದುಕೊಂಡವರಿಗೆ ಬದುಕೆ ಇಲ್ಲದಂತೆ ಮಾಡುವ ಮೂಲಕವೇ ಉತ್ತರ ನೀಡುತ್ತಾಳೆ.

ಮಾದೇವಿ (ಶಾಂತರಸ), ಹುಲಿಗೆಮ್ಮ, (ಚೆನ್ನಣ್ಣ ವಾಲೀಕಾರ), ಊರಮ್ಮ (ಅಮರೇಶ ನುಗಡೋಣಿ) ಜಾತಿಯ ಕಾರಣಕ್ಕಾಗಿಯೇ ಒಪ್ಪಿಕೊಳ್ಳಬೇಕಾದ ಕೆಲ ಹೇರಿಕೆಗಳನ್ನು ಮೀರಬಯಸುವ ಪ್ರಜ್ಞಾವಂತರು. ಅಕ್ರಮವಾದ ಹೇರಿಕೆಗಳನ್ನು ವಿರೋಧಿಸುವ ವಿಷಯದಲ್ಲಿ ಎಲ್ಲಾ ಸ್ತ್ರೀ ಬದುಕಿನ ಸಂವೇದನೆಗಳು ಏಕರೂಪವೆಂದೆ ಗುರುತಿಸಬಹುದಾದರೂ, ಜಾತಿ ಕಾರಣದಿಂದಲೇ ಇಲ್ಲಿನ ಸ್ತ್ರೀ ಸಂವೇದನೆಯನ್ನು ವಿಶಿಷ್ಟ ಹಾಗೂ ಹೊಸ ಜಾಗೃತಿಯೆಂದೆ ಗುರುತಿಸಬಹುದಾಗಿದೆ.

ಬದುಕಿನ ಯಾವೆಲ್ಲ ಅಸಹಾಯಕತೆಗಳನ್ನು ಒಪ್ಪಿಕೊಂಡು ಒಂದು ಸಮುದಾಯವು ಈ ಹಿಂದೆ ನಲುಗಿತ್ತೋ ಅವುಗಳೆಲ್ಲವನ್ನು ಮೀರಿ ಬೆಳೆಯಲು ಬಯಸಿದ್ದು ಅದರ ಅಸ್ತಿತ್ವದ ಜಾಗೃತಿಯನ್ನೇ ಹೊರಹೊಮ್ಮಿಸುತ್ತದೆ. ತಮ್ಮ ಅಸಹಾಯಕತೆಯೊಳಗಿಂದಲೇ ಒಂದು ಪ್ರತಿಭಟನೆಯನ್ನು ಹುಟ್ಟು ಹಾಕಿಕೊಂಡಿದ್ದ ಈ ಸಮುದಾಯವು ಅದನ್ನು ರೂಢಿಸಿದ ಮೇಲ್ವರ್ಗವನ್ನು ವಿರೋಧಿಸುವ ರೀತಿ ವಿಶಿಷ್ಟವಾಗಿದೆ. 'ಕತ್ತಲ ತ್ರಿಶೂಲ ಹಿಡಿದ ಕತೆ' (ಕುಂ. ವೀರಭದ್ರಪ್ಪ) ಎಂಬ ಕತೆಯಲ್ಲಿ 'ಕತ್ತಲನ ಪ್ರತಿಭಟನೆ ಒಪ್ಪಿಸಲಾದ ಅಸಹಾಯಕತೆಯ ಮೀರುವಿಕೆಯೇ ಆಗಿದೆ. ಅಸ್ಪೃಶ್ಯತೆ ಮತ್ತು ಹಸಿವಿನ ಸಂಬಂಧದಲ್ಲಿ ಕಂಡುಬರುವ ಅನ್ಯೂನ್ಯತೆಯ ದಟ್ಟ ಚಿತ್ರಣದ ಪ್ರತೀಕವೆಂಬಂತೆ ಇಲ್ಲಿನ ಕತ್ತಲನ ಪರಿಸ್ಥಿತಿಯು ಕಂಡು ಬರುತ್ತದೆ. ಹಸಿವಿನ ಕ್ರೂರತೆ ಈಗಾಗಲೇ ಬೇರೆಯ ರೀತಿಯಲ್ಲಿ ಉನ್ನತ ವರ್ಗದವರಿಂದ ಶೋಷಣೆಗೆ ಈಡಾಗಿ ಕನ್ನೀರವ್ವನ ಬಾವಿಗೆ ಬಿದ್ದವರ ಜಾಡನ್ನೇ ಹಿಡಿಯುವಂತೆ ಕತ್ತಲನನ್ನು ಪ್ರೇರೇಪಿಸುತ್ತದೆ. ಎಲ್ಲ ಪ್ರೇರಣೆಯನ್ನು ಮೀರಿ ಕತ್ತಲನು ಜೀವನ ಸಾಗಿಸುತ್ತಿದ್ದ. ತನಗೆ ಹುಟ್ಟಿದ ಮಕ್ಕಳಾದ ದ್ಯಾಮಿ, ಸಿದ್ಧರನ್ನು ಬೇರೆಡೆಗೆ ದುಡಿಯಲು ಇಟ್ಟಿದ್ದ. ಗೌಡನಿಂದಾಗಿ ತನ್ನ ಕುಟುಂಬ ದೈಹಿಕವಾಗಿ, ಆರ್ಥಿಕವಾಗಿ ಶೋಷಣೆಯನ್ನು ಸಹಿಸಿರುವುದನ್ನು ಕತ್ತಲ ನೆನೆಯುತ್ತಾನೆ. ಗೌಡನಿಂದ ಹೆಂಡತಿಗಾದ ಅನ್ಯಾಯವನ್ನು ಹುಟ್ಟಿದ ಮಕ್ಕಳನ್ನು ಕತ್ತು ಹಿಸುಕಿ ಸಾಯಿಸುವುದರ ಮೂಲಕ ಗೆಲ್ಲುತ್ತಾನೆ. ಆದರೆ ತನ್ನ ಹಸಿದ ಹೊಟ್ಟೆಯ ಅಸಹಾಯಕತೆಯನ್ನು ನೀಗಿಕೊಳ್ಳಲಾಗದ ಕತ್ತಲ ಮತ್ತೆ ಗೌಡನ ಮನೆಯ ಎಂಜಲನ್ನೇ ಕಾಯುತ್ತಾ ನಿಲ್ಲುತ್ತಾನೆ. "ತೀರಿಸಿಕೊಳ್ಳಲಾರದ ಹಸಿವು ಸಾವಿಗೆ ಬಲು ಹತ್ತಿರದಲ್ಲೇ ಸುಳಿಯುತ್ತಿರುವುದು ಕತ್ತಲನಿಗೆ ಅರ್ಥವಾಗಲಾರದು ಕೂಡ. ಅನ್ನ ಕಾಣದ ಹೊಟ್ಟೆಯೊಳಗೆ ಬೆಂಕಿ ಕಾಣಿಸಿಕೊಳ್ಳಬೇಕು. ಆ ಬೆಂಕಿ ಕಾಂಕ್ರೀಟು ಕಟ್ಟಡಗಳನ್ನು ಸುಟ್ಟು ಬೂದಿ ಮಾಡಬಲ್ಲದು ಎಂದು ತಿಳಿದುಕೊಳ್ಳಲು ಕತ್ತಲ ಇನ್ನೂ ಹಸಿಯಬೇಕಾಗಿದೆ. ಹಸಿವೆಗೆ ಮೂಲ ಕಾರಣಗಳನ್ನು ಶೋಧಿಸುವಲ್ಲಿ ಕತ್ತಲ ಹೆಜ್ಜೆ ಇಡತೊಡಗಿದ" (ಕುಂ. ವೀರಭದ್ರಪ್ಪ; ೨೦೦೪; ಪುಟ : ೨) ಎಂಬಲ್ಲಿ ಪ್ರತಿಭಟನೆಗೆ ಮೂಲ ಚೈತನ್ಯ ಹಸಿವು ಎಂಬುದನ್ನು ಕತೆ ತಿಳಿಸುತ್ತದೆ. ತನ್ನ ಸೇವೆಯ ಸ್ಮರಣೆ ಎಳ್ಳಷ್ಟು ಇಲ್ಲದ ಗೌಡನ ಮನೆಯಲ್ಲಿ ನಾಯಿಗೆ ಸಿಗುವಷ್ಟಾದರೂ ಪ್ರಾತಿನಿಧ್ಯ ಸಿಗದೆ ಹೋದಾಗ ಕತ್ತಲ ನೊಂದುಕೊಳ್ಳುತ್ತಾನೆ. ಕೊನೆಗೆ ಶೋಷಕ ವರ್ಗಗಳಾದ ಫ್ಯೂಡಲ್‌ಗಳನ್ನು, ಪುರೋಹಿತಶಾಹಿಗಳನ್ನು ತ್ರಿಶೂಲ ಹಿಡಿದು ಬೆದರಿಸಿ ಗುಡಿಯೊಳಗಿನ ದೇವರ ಎಡೆಯನ್ನೇ ತಿಂದು ಹಸಿವನ್ನು ನೀಗಿಸಿಕೊಳ್ಳುತ್ತಾನೆ.

'ದೇವರ ಹೆಣ' (ಕುಂ. ವೀರಭದ್ರಪ್ಪ) ಕತೆಯ ಠೊಣ್ಣೆಯೂ ತನ್ನ ಅಸಹಾಯಕತೆಯನ್ನು ಮೀರಿ ಬೆಳೆಯುತ್ತಾನೆ. ಗೌಡನ ಮನೆಯ ಸತ್ತ ಎತ್ತಿಗಾಗಿ ಠೊಣ್ಣೆ ಮಾಡುವ ಹೋರಾಟ ಆತನಲ್ಲಿ ತಂದು ಕೊಡುವ ಶಕ್ತಿ ಇಡೀ ಜನಾಂಗದ ಹಸಿವಿಗೆ ಧ್ವನಿ ನೀಡುವಂತಹದ್ದು. ತನ್ನ ಕಾರ್ಯಕ್ಕೆ ಸಿಗಲೇಬೇಕಾದ ಪ್ರತಿಫಲವನ್ನು ಆಗ್ರಹಿಸಿ ಕೇಳುವ ಹಂತಕ್ಕೆ ಬೆಳೆಯುವ ಇಲ್ಲಿನ ಕ್ರಾಂತಿ ವಿಶಿಷ್ಟವಾಗಿದೆ.

ಬೆಳವಣಿಗೆಯನ್ನು ಸೂಚಿಸುವ ಪ್ರಜ್ಞಾವಂತ ಸಮುದಾಯ ಕೆಳವರ್ಗದಲ್ಲಿ ಕಂಡು ಬರುತ್ತಿದೆ ಯೆಂಬುದನ್ನು ಇದು ಹೊಸ ತಲೆಮಾರಿನ ಆರೋಗ್ಯ ಪೂರ್ಣ ಸ್ಥಿತಿಯೆಂದೆ ಗುರುತಿಸಲಾಗುತ್ತದೆ. ಈ ಸಮುದಾಯದ ಶಿಕ್ಷಿತ ವರ್ಗದಲ್ಲಿಯೂ ಈ ರೀತಿಯ ಕ್ರಾಂತಿಕಾರಕ ವಿಚಾರಗಳು ಕಂಡು ಬರುವುದನ್ನು ಅಮರೇಶ ನುಗಡೋಣಿಯವರ 'ತಮಂಧದ ಕೇಡು' ಕತೆ ತಿಳಿಸುತ್ತದೆ. ಬಸವಣ್ಣನವರ ಕ್ರಾಂತಿಯ ಮೂಲ ಸೆಲೆಯಾದ ಅಂತರ್ಜಾತಿ ವಿವಾಹದಂತಹ ವಿಚಾರವನ್ನು ಕೇಂದ್ರೀಕರಿಸುವ ಈ ಕತೆಯಲ್ಲಿ ಚೆನ್ನಮಲ್ಲಯ್ಯ ಇಂತಹ ವಿಚಾರದಿಂದಾಗಿಯೇ ತಂದೆಯಿಂದ ಹಾಗೂ ಶಾಂತಗೌಡನಿಂದ ವಿರೋಧವನ್ನು ಎದುರಿಸುತ್ತಾನೆ.

ಗೌಡನ ಮಗಳು ಮತ್ತು ದುರುಗನ ಮಗ ಚೆನ್ನಮಲ್ಲಯ್ಯ ಮದುವೆ ಆಗುವರೆಂಬ ವಿಚಾರ ಎರಡು ಸಮುದಾಯದವರಿಗೂ ಬಿಕ್ಕಟ್ಟನ್ನು ಉಂಟು ಮಾಡಿತ್ತು. ಅಂತರ್ಜಾತೀಯ ವಿವಾಹಕ್ಕೆ ಎರಡು ಸಮುದಾಯದ ಹೊಸ ತಲೆಮಾರು ಪಕ್ವಗೊಂಡಿರುವುದು ಇಲ್ಲಿ ಕಂಡುಬರುತ್ತದೆ. ಫ್ಯೂಡಲ್ ವ್ಯವಸ್ಥೆಯ ವಿರೋಧ, ಹಳೆ ತಲೆಮಾರಿನ ಶೋಷಣೆಯನ್ನು ಒಪ್ಪಿಕೊಂಡ ದುರುಗನ ತಳಮಳ ಎಲ್ಲವೂ ಗೌಡ ಮತ್ತು ದುರಗ ನೀರು ಪಾಲಾಗುವ ಮೂಲಕ ಕೊನೆಗೊಳ್ಳುತ್ತದೆ. ಶೋಷಣೆ ಮಾಡುವ ಸಮುದಾಯ ಶೋಷಣೆಯನ್ನು ಒಪ್ಪಿಕೊಂಡ ಹಳೆ ತಲೆಮಾರು ನೀರಿನಲ್ಲಿ ಕೊಚ್ಚಿ ಹೋಗುವುದು ಸಾಂಕೇತಿಕವಾದದ್ದು. ಆದರೆ ಇವೆರಡರ ಬೇರು ಅಷ್ಟು ಸುಲಭವಾಗಿ ನಾಶ ಹೊಂದುವಂತಹದ್ದಲ್ಲ. ಕತೆಯಲ್ಲಿ ಹೊಸ ತಲೆಮಾರಿನ ವಿಚಾರಧಾರೆಗಳು ಕಂಡು ಬರುವುದು ಸಾಮಾಜಿಕ ಸ್ಥಿತಿಯಲ್ಲಿ ಕಂಡು ಬರುವ ಬದಲಾವಣೆಗಳನ್ನೇ ಅರ್ಥೈಸುತ್ತವೆ. ಇಡೀ ಕುಟುಂಬವನ್ನೇ ತಮ್ಮ ಸ್ವಾರ್ಥಕ್ಕೆ ಬಳಸಿಕೊಂಡ ಸಮುದಾಯದ ವಿರುದ್ಧ ಚೆನ್ನಮಲ್ಲಯ್ಯ ಹೋರಾಟಕ್ಕಿಳಿದದ್ದು ಹೋರಾಟದ ಮಾದರಿಗಳಲ್ಲಿ ಒಂದಾಗಿದೆ.

ಸುಶಿಕ್ಷಿತರಾದ ಕೆಳವರ್ಗದವರು ಮತ್ತೊಮ್ಮೆ ಶೋಷಣೆಗೆ ಗುರಿಯಾಗುತ್ತಿರುವುದು ಅಲ್ಲದೆ ತಳಸಮುದಾಯದವರಿಂದಲೇ ತಳವರ್ಗದ ಜನರಿಗೆ ನ್ಯಾಯ ಸಿಗುತ್ತಿಲ್ಲವೆಂಬ ಕ್ರೂರ ವಾಸ್ತವವನ್ನು 'ಬೇಟೆ' (ಅಮರೇಶ ನುಗಡೋಣಿ) ಕತೆಯು ತಿಳಿಸುತ್ತದೆ. ಹಿರೇಗೌಡನಿಂದ ಪರಶಿವಯ್ಯ ತಂದೆ ಪಾಳು ಜಮೀನೊಂದನ್ನು ಪಡೆದಿರುತ್ತಾನೆ. ಪರಶಿವಯ್ಯನ ಹೆಂಡತಿ ಗಂಗವ್ವನ ಶ್ರಮದಿಂದ ಬೆಳೆ ಬೆಳೆಯುವ ಸಾಧ್ಯತೆಯನ್ನು ಕಂಡುಕೊಂಡ ಜಮೀನು ದಂಪತಿಗಳ ಬದುಕಿಗೆ ಆಸರೆಯಾಗುತ್ತದೆ. ಇವರ ಸುಖದ ಜೀವನ ಈರಪ್ಪನಿಂದ ಹಾಳಾಗುತ್ತದೆ. ಮೈದುನನ ಕೊಲೆ ಅಪಾದನೆ ಹೊತ್ತ ಗಂಗವ್ವ ಗಂಡ ಮಕ್ಕಳೊಂದಿಗೆ ತವರು ಮನೆ ಸೇರುತ್ತಾಳೆ. ಸಂಕಷ್ಟಗಳನ್ನು ಅನುಭವಿಸಿದ ದಂಪತಿಗಳು ಮಲ್ಲಿಹಳ್ಳಿಗೆ ಪುನಃ ಹೋಗುವ

ಅವಕಾಶ ಹಿರೇಗೌಡನ ಮಗ ಪಂಪಾಪತಿಗೌಡನಿಂದ ಒದಗಿ ಬಂದದ್ದನ್ನು ಕಂಡು ಸಂತೋಷಗೊಳ್ಳುತ್ತಾರೆ. ಆದರೆ ಪಂಪಾಪತಿಗೌಡ ತನ್ನ ತಂದೆ ಕೊಟ್ಟ ಹೊಲವನ್ನು ಹಿಂತಿರುಗಿ ಪಡೆಯಲು ನಡೆಸುವ ಕುಯುಕ್ತಿಯನ್ನು ತಿಳಿದು ದಂಪತಿಗಳು ಕೊರಗುತ್ತಾರೆ. ಆದರೆ ತಮ್ಮ ಜಾತಿಯವನೇ ಆದ ತಮ್ಮ ಮನೆಯ ಕೂಸಂತಿದ್ದ ಜಿಲ್ಲಾ ಪಂಚಾಯಿತಿ ಅಧ್ಯಕ್ಷನಾಗಿದ್ದ ಪರಸಪ್ಪನೂ ಇವರಿಗೆ ದ್ರೋಹ ಬಗೆಯಲು ಮುಂದಾಗುತ್ತಾನೆ. ಗೌಡನ ಪರವಾಗಿಯೇ ಇದ್ದ ಪರಸಪ್ಪ ಕೆಳಜಾತಿಯ ಅಭಿವೃದ್ಧಿಯನ್ನು ಗಾಳಿಗೆ ತೂರಿದವನು. ಒಂದು ಜನಾಂಗದ ಉದ್ಧಾರವನ್ನು ಸೂಚಿಸುವ ಪರಸಪ್ಪನಂತವರಿಂದಲೇ ಸಜಾತಿಯ ಶೋಷಣೆ ನಡೆಯುತ್ತದೆ. ಸಮುದಾಯವೊಂದರ ಹಿಂದುಳಿದಿರುವಿಕೆಗೆ ಕಾರಣಗಳೇನು? ಎಂಬಲ್ಲಿ ಈ ರೀತಿಯ ಸ್ವಾರ್ಥಗಳು ಸೇರುತ್ತವೆ. ತನ್ನ ಬದುಕಿಗೆ ಭವಿಷ್ಯ ನೀಡಲು ಹುಟ್ಟಿರುವ ಕುಡಿಗಳಲ್ಲೆ ನವಜಾತ ಶಿಶುವಾದ ಭೂಮಿಲಿಂಗನ ಮರಣ ಇಡೀ ದಲಿತ ಜಾತಿಯ ಅಭಿವೃದ್ಧಿ ಪಥದಲ್ಲಿ ಇರುವವರಿಂದ ಉಂಟಾದ ಭ್ರಮನಿರಸನವನ್ನು ತಿಳಿಸುತ್ತದೆ. ಸಮುದಾಯದ ಪ್ರಗತಿಯನ್ನು ವ್ಯಕ್ತಿಗತವಾಗಿ, ಕೌಟುಂಬಿಕವಾಗಿ ಮಾತ್ರವೇ ಸೀಮಿತಗೊಳಿಸಿ ಗುರುತಿಸುವುದು, ಆ ಮೂಲಕ ಇಡೀ ಸಮುದಾಯವೇ ಪ್ರಗತಿ ಕಂಡಿದೆ ಎಂಬ ನಿರ್ಣಯಕ್ಕೆ ಬರುವುದು ಉಚಿತವಾದದ್ದಲ್ಲ. ಪ್ರಗತಿ ಪಥದಲ್ಲಿ ಸಾಗುತ್ತಿರುವ ಇಂತಹ ಸಮುದಾಯದ ಕೆಲವರಿಂದ ಆಗಬೇಕಾಗಿರುವ ಮುಖ್ಯ ಕಾರ್ಯಗಳನ್ನು ಸೂಚಿಸುವ ಕತೆ ಸಮುದಾಯದ ಕಾಳಜಿಯನ್ನೇ ಅಭಿವ್ಯಕ್ತಿಸುತ್ತದೆ.

### ತಳಸಮುದಾಯದ ಆಚರಣೆಗಳು

ತಳಸಮುದಾಯದ ನಂಬಿಕೆ, ಆಚರಣೆ, ಹರಕೆ, ಇತ್ಯಾದಿಗಳು ಇಲ್ಲಿನ ಕಥನದಲ್ಲಿ ಬಿಂಬಿತವಾಗಿವೆ. ಮರಗಮ್ಮನ ಕಾರ್ಯ ಮಾಡುವಲ್ಲಿ ಸಂಭ್ರಮದಿಂದ ಪಾಲ್ಗೊಳ್ಳುವ ಜನರ ಉತ್ಸಾಹ 'ಒಂದು ಹೆಣ್ಣಿನ ಒಳಜಗತ್ತು' (ಚೆನ್ನಣ್ಣ ವಾಲೀಕಾರ) ಕಾದಂಬರಿಯಲ್ಲಿ ಕಂಡು ಬರುತ್ತದೆ. ಉತ್ತಮ ಬೆಳೆ, ಉತ್ತಮ ಮಳೆಯಿಂದ ಸಾಧ್ಯವಾಗಿದ್ದ ಕಾರಣ ಕೆಳಗೇರಿ ಜನ ಮರಗಮ್ಮನ ಕಾರ್ಯ ಮಾಡಲು ವಾರಗಟ್ಟಲೆ ಸಿದ್ಧತೆ ನಡೆಸುತ್ತಾರೆ. ದೇವಿ ವಾರವಾದ ಶುಕ್ರವಾರದಂದು ಈ ಕಾರ್ಯ ಮಾಡಲು ನಿಶ್ಚಿಯಿಸಿದ ಜನ ಅದಕ್ಕಾಗಿ ಸಿದ್ಧತೆಯನ್ನು ನಡೆಸುತ್ತಾರೆ. "ಮಳೆ ನಿಲ್ಲುತ್ತಲೇ ಪೂಜಾರಿ ಜಳಕ ಮಾಡಿ ತೊಯ್ದ ಬಟ್ಟೆಯ ಮೇಲೆ ಬಂದನು. ಕಾಲಿಗೆ ಬೆಳ್ಳಿ ತೋಡ್ಯಾ ಹಾಕಿದ್ದನು. ಬರೀ ಧೋತರೊಂದನ್ನುಟ್ಟು ಬರಿ ಮೈಯಿಂದಿದ್ದನು. ಹಣೆ ತುಂಬ ಕುಂಕುಮ ಹಚ್ಚಿಕೊಂಡು ಕೂದಲು ಮುಖದ ತುಂಬ ಹಾಕಿಕೊಂಡಿದ್ದನು. ಪೂಜಾರಿ ಊರ ಹೊರಗಿರುವ ಮರಗಮ್ಮನ ಗುಡಿ ಮುಂದೆ ನಿಂತು ಹಕಾರಿ ಹೊಡೆದು ಕೂಡಲೇ ಹಲಗಿ ಡೊಳ್ಳುಗಳು ಬೀಳತೊಡಗಿದವು. ಒಂದು ವರುಷದಿಂದ ದೇವಿ ಹೆಸರಿನ ಮೇಲೆ ಕುರಿಗಳನ್ನು ಬಿಟ್ಟವರು ತೆಗೆದುಕೊಂಡು ಬರತೊಡಗಿದರು. ಒಂದು ವಾರದಿಂದ ಮಾಡಿಟ್ಟಿದ್ದ ರೊಟ್ಟಿ, ಬಾನದನ್ನ ಬುಟ್ಟಿಯಲ್ಲಿ ತುಂಬಿಕೊಂಡು ತಂದು ತಂದು, ದೇವಿಯ ಗುಡಿ ಕಟ್ಟಿಗೆ ಇಡತೊಡಗಿದರು. ಅಡಿಗೆಗೆ ಬೇಕಾಗುವ ಖಾರಾ, ಅರಿಷಿಣ, ಉಪ್ಪು, ಎಣ್ಣೆ, ಉಳ್ಳಾಗಡ್ಡಿ, ಮಸಾಲಿ ಸಾಮಾನುಗಳನ್ನು ತಂದು ಇಟ್ಟರು. ಪೂಜಾರಿ ಕೈಯಲ್ಲಿ ಬಿಚ್ಚುಗತ್ತಿ ತೆಗೆದುಕೊಂಡು ಗುಡಿಸುತ್ತ ದೇವಿಗೆ ಬಿಟ್ಟ ಕುರಿಗಳನ್ನು ತೆಗೆದುಕೊಂಡು ಏಳು ಸಲ ಸುತ್ತಿದನು. ಎಲ್ಲಾ

ಕುರಿಗಳಿಗೆ ಭಂಡಾರ ಹಚ್ಚಿದನು. ಚ್ಯಾಜಕ್ಕೆ ತಾನೊಂದು ಕುರಿ ಕಡಿದು ಉಳಿದವುಗಳನ್ನು ತನ್ನ ಜನರಿಗೆ ಕಡಿಯಲು ಹೇಳಿದನು. ಪೂಜಾರಿ ಕಡಿದ ಕುರಿಯ ತಲೆಯ ಬಾಯಿಯೊಳಗೆ ಅದರ ಎಡಗಾಲನ್ನು ಕತ್ತರಿಸಿಟ್ಟು, ದೇವಿಯ ಮುಂದೆ ಇಟ್ಟರು. ...ಊರಿಗೆ ಕೇಡಾಗದಿರಲೆಂದು ಪೂಜಾರಿ ಹಕಾರಿ ಹೊಡೆಯುತ್ತ ಕೈಯಲ್ಲಿ ಬಿಚ್ಚುಗತ್ತಿ ಹಿಡಿದು ಹಲಗೆ ಡೊಳ್ಳುಗಳ ಜೊತೆಗೆ ಕುರಿ ಕೊಯ್ದು ಅಡಿಗೆಯ ಚೂರು ಬಾನಾ ಕಲಿಸಿದ ಸರಗ ಚೆಲ್ಲುತ್ತ ಹೊರಟನು. ದಾರಿಯಲ್ಲಿ ಹೋಗುವ ಪೂಜಾರಿ ನಿಂತುಕೊಂಡಾಗ ಭಕ್ತರು ಟೆಂಗೊಡೆದು ನಿಂಬೆಕಾಯಿ ಕೊಯ್ಯುತ್ತಿದ್ದರು. ತಾಸಿನೊಳಗಾಗಿ ಊರು ಸುತ್ತ ತಿರುಗಿ ಸರಗ ಚೆಲ್ಲಿ ಬಂದ ನಂತರ ದೇವರ ಹೇಳುವ ಕಾರ್ಯ ನಡೆಯಿತು. ಮಕ್ಕಳಾಗದವರು, ಬೇನೆ ಬೇಸರಿಕೆ ಬಂದವರು ಒಂದಿಲ್ಲೊಂದು ಸಂಕಟ, ಸಮಸ್ಯೆಯಲ್ಲಿ ಸಿಗಿ ಬಿದ್ದವರು ಬಂದು ಬಂದು ಮುತ್ಯಾನೆದುರು ಕೈಜೋಡಿಸಿ ನಿಂತು ತಮ್ಮ ಸಮಸ್ಯೆಗಳನ್ನು ತಿಳಿಸುತ್ತಿದ್ದರು" (ಚೆನ್ನಣ್ಣ ವಾಲೀಕರ; ಪುಟ : ೩೬). ಕೆಳವರ್ಗದ ಜನ ಇಂತಹ ಸಂದರ್ಭದಲ್ಲಿ ಮನಸಾರೆ ಉಂಡು ತಮ್ಮ ಬದುಕಿಗೆ ಸಂತೋಷ ಕಂಡುಕೊಳ್ಳುತ್ತಾರೆ. ಆದರೆ ದೇವರ ಹರಕೆ ತೀರಿಸುವುದಕ್ಕಾಗಿ ಅನೇಕ ರೀತಿಯ ಸಂಕಷ್ಟಗಳನ್ನು ಪಡುವ ಕೆಳವರ್ಗದವರ ಪರಿಸ್ಥಿತಿಯನ್ನು 'ಹಬ್ಬ ಮತ್ತು ಬಲಿ' (ಬಿ.ಟಿ. ಲಲಿತಾನಾಯಕ್) ಕತೆ ತಿಳಿಸುತ್ತದೆ. ಮನೆ ಮಂದಿಯೆಲ್ಲ ಸಂಬಂಧಿಕ ರೊಂದಿಗೆ ಸೇರಿ ದೇವಿಗೆ ಬಲಿ ಅರ್ಪಿಸಿ ಹಬ್ಬ ಮಾಡಬೇಕೆಂದು ಬಯಸುವ ಈ ಸಮುದಾಯದ ಆಸೆ ಈಡೇರುತ್ತದೆ. ಮಕ್ಕಳಿಗೆ ಬಟ್ಟೆ ತರುವುದಲ್ಲದೆ, ಸಂಬಂಧಿಕರೆಲ್ಲರೂ ಮನಸಾರೆ ಉಣ್ಣಲು ಸಾಧ್ಯವಾಗುವಷ್ಟು ಅಡುಗೆ ಮಾಡಿಸಿದ ಸಣ್ಣು ದೇವಿ ಪ್ರೀತಿಗೆ ಒಳಗಾದೆನೆಂದು ನೆಮ್ಮದಿ ಪಡುತ್ತಾನೆ. ಮಾಂಸದಡಿಗೆ ಉಂಡು ಕುಡಿದು ಕಳೆದ ವರ್ಷ ತನಗೆ ಈ ರೀತಿ ಹಬ್ಬ ಮಾಡಲು ದೇವಿಯನ್ನು ಸಂತೃಪ್ತಿಪಡಿಸಲು ಸಾಧ್ಯವಾಗದೆ ಇದ್ದುದನ್ನು ಸಣ್ಣು ನೆನೆಯುತ್ತಾನೆ. ಆದರೆ ದೇವಿಗೆ ಬಲಿ ಅರ್ಪಿಸಿ ಸಂತೃಪ್ತಿಪಡಿಸುವ ಭರದಲ್ಲಿ ತಾನು ಗೌಡನಿಗೆ ಜೀತದಾಳಾಗಬೇಕಾದ ನೋವನ್ನು ಮರೆತಿರುತ್ತಾನೆ. ಹಬ್ಬದ ನಂತರ ಗೌಡನ ಆಳುಗಳು ಸಣ್ಣುನನ್ನು ಕರೆಯಲು ಬಂದಾಗ ಹಬ್ಬಕ್ಕಾಗಿ ತಾನು ಗೌಡನಲ್ಲಿ ಮೂರು ನೂರು ರೂಪಾಯಿ ಸಾಲ ಮಾಡಿದ್ದು ಅದನ್ನು ತೀರಿಸಲು ಜೀತಕ್ಕೆ ಇರಬೇಕಾಗಿರುವುದು ನೆನಪಾಗಿ ಕಂಗಾಲಾಗುತ್ತಾನೆ. ಹೆಂಡತಿ ಮಕ್ಕಳನ್ನು ಬಿಟ್ಟು ಜೀತಕ್ಕೆ ಗೌಡನ ಮನೆಗೆ ಹೋಗುತ್ತಿರುವವನ ಜೀವನ ಬಲಿಯಾಗುತ್ತಿರುವುದನ್ನು ಕತೆ ಸೂಚಿಸುತ್ತದೆ.

ಬದುಕು ಕಾದಂಬರಿಯಲ್ಲಿ ಜಮಾದಾರ ಮಲ್ಲಪ್ಪ ಮಾಪುರತಾಯಿ ಜಾತ್ರೆಯನ್ನು ತನ್ನ ಮನೆ ಮಂದಿ, ಸಂಬಂಧಿಕರು, ಸುತ್ತಮುತ್ತಲಿನ ಜನರೊಂದಿಗೆ ಸೇರಿ ಮಾಡುತ್ತಿದ್ದ ವಿವರಗಳು, ಬೇಟೆಯಾಡಿ ಬಂದಾಗ ನಡೆಯುತ್ತಿದ್ದ ಸಂಭ್ರಮದ ಅಡುಗೆ, ಜ್ವಾಳದ ಖಣ ಮಾಡಿ ಹಂತಿಕಟ್ಟುವಾಗ ಕೆಳಗೇರಿ ಮಂದಿ ಪಡುವ ಸಂಭ್ರಮ ಎಲ್ಲವೂ ಆತನ ಅಂತಸ್ತನ್ನು ಸಾರುವಂತಹುಗಳಾಗಿವೆ. ಆದರೊಂದಿಗೆ ಪ್ರಾದೇಶಿಕ ವಾಗಿಯೂ ಈ ಆಚರಣೆಗಳು ಪ್ರಾಮುಖ್ಯತೆಯನ್ನು ಪಡೆಯುತ್ತವೆ. ಬೇಟೆಯನ್ನು ಹೊತ್ತು ತಂದಾಗ ಜಮಾದಾರ ಮಲ್ಲಪ್ಪನ ಮನೆಯಂಗಳದಲ್ಲಿ ಖಂಡದ ಅಡುಗೆ ಬಗೆ ಬಗೆಯಾಗಿ ತಯಾರಾಗುತ್ತಿತ್ತು.

ರುಕ್ಮಿಣ್ಣ ಖಂಡದ ಅಡಿಗೆ ಮಾಡುವಲ್ಲಿ ಎತ್ತಿದ ಕೈ. ಆತನಂತೆ ಮಾಂಸದ ಸಾರು, ತಾಳು ಪಲ್ಲೆ ಮಾಡುವವರು ಆ ಸುತ್ತಮುತ್ತಿನ ನಾಕಾರು ಊರುಗಳಲ್ಲಿ ಯಾರೂ ಇರಲಿಲ್ಲ. ಮಾಂಸದ ಸಾರು, ಕರಿದ ತುಂಡುಗಳ ತಾಳುಪಲ್ಲೆ ಖೀಮಾದ ಉಂಡಿ, ಭೇಜಾದ ತಾಳುಪಲ್ಯ, ಕೋಳಿ ಬಿರ್ಯಾನಿ, ಧಂ ಕಾ ಮುರಗಿ ಮುಂತಾದ ನಮೂನೆಯ ಅಡುಗೆ ಮಾಡುವುದನ್ನು ಆತ ಕರಗತ ಮಾಡಿಕೊಂಡಿದ್ದ. ಖಂಡದೂಟಕ್ಕೆ ಬೇಕಾದ ಬಿಸಿ ರೊಟ್ಟಿಯನ್ನು ಕಾಶಮ್ಮ, ಲಕ್ಕಮ್ಮ ಮೊದಲಾದವರು ಮಾಡುತ್ತಿದ್ದರು. ಇದರೊಂದಿಗೆ ಹುಳಿ ಹೆಂಡದ ಕುಡಿತ ಇವರ ಸಂಭ್ರಮವನ್ನು ಹೆಚ್ಚಿಸುತ್ತಿತ್ತು.

ಕೆಳಗೇರಿ ಮಂದಿಗೆ ಜಮಾದಾರ ಮಲ್ಲಪ್ಪನ ಹೊಲದ ರಾಶಿ ಪೂಜೆ ಎಂದರೆ ದೊಡ್ಡ ಸುಗ್ಗಿ ಹಬ್ಬದ ಸಂಭ್ರಮವನ್ನೇ ತಂದುಕೊಂಡುವಂತದ್ದಾಗಿತ್ತು. ಹಂತಿಕಟ್ಟುವ ರಾತ್ರಿ ಆತನ ಹೊಲದಲ್ಲಿ ಜಾತ್ರೆಯೇ ನಡೆಯುತ್ತಿತ್ತು. ಹೊಲದಾಗಿರುವ ಲಕ್ಷ್ಮಿಗೆ ಕುರಿ ಬಲಿ ಕೊಡುತ್ತಿದ್ದರು. ಲಕ್ಷ್ಮಿಗುಡಿಯ ಹೊಸ್ತಿಲಿಗೊಂದು, ಖಣಕ್ಕೊಂದು ಹೀಗೆ ಜೋಡಿ ಕುರಿಗಳ ಬಲಿಕೊಟ್ಟು ಕೆಳಗೇರಿ ಮಂದಿಗೆಲ್ಲ ಕುರಿ ಖಂಡದ ಪಲ್ಯಾ ಬಿಳಿಜ್ವಾಳದ ರೊಟ್ಟಿ, ಹುಳಿಬಾನ, ತಾಜಾ ಅಸಲಿ ಸಿಂದಿಯ ಸಮಾರಾಧನೆಯನ್ನೆ ಮಾಡಿಸುತ್ತಿದ್ದ. ದೊಡ್ಡಿ ಹೊಲ್ಯಾರು, ಸಮಗಾರ್‍ರು, ಹಜಾಮರು, ಅಗಸರು, ಫಕೀರರು, ಮುಲ್ಲಾಗೋಳು, ಜೋಗಣೇರು, ಸಿಂದಿಬನಾ ಕೆತ್ತೊ ಈಳಿಗೇರು ಹೀಗೆ ಎಲ್ಲಾ ಕೆಳವರ್ಗದ ಜನ ರಾಶಿ ಬುತ್ತಿ ಉಣ್ಣಲು ಬರುತ್ತಿದ್ದರು. ಖಣದಲ್ಲಿ ಕಂಡದ ಅಡಿಗೆಯ ಜೊತೆಗೆ ಎಣ್ಣಿ ಹೋಳಿಗೆಯ ಮೀಸಲು ಅಡಿಗೆಯನ್ನು ಮಾಡುತ್ತಿದ್ದರು. ಹಂತಿ ಹಾಡುಗಳು, ಹಿಜಡಾಗುಳು ಚಪ್ಪಾಳೆ ತಟ್ಟುತ್ತ ಕುಣಿಯುವುದು, ನಗೆಚಾಟಿಕೆಗಳು ಹೀಗೆ ಊಟದ ಜೊತೆಗೆ ತಮ್ಮ ಕಷ್ಟವನ್ನೆಲ್ಲ ಮರೆವ ಮೋಜಿನಲ್ಲಿ ಬಡವ, ಬಲ್ಲಿದ ಎನ್ನದೆ ಪಾಲ್ಗೊಳ್ಳುತ್ತಿದ್ದರು.

ಪ್ರಾದೇಶಿಕವಾಗಿ ಕಂಡು ಬರುವ ಇಂತಹ ಆಚರಣೆಗಳು, ಕೆಳವರ್ಗದವರು ಸಂಭ್ರಮದ ಮೋಜಿನ ವಿಭಿನ್ನ ರೀತಿಯನ್ನು ಕಟ್ಟಿಕೊಡುತ್ತದೆ. ಗೀತಾನಾಗಭೂಷಣ ಅವರ ಬರವಣಿಗೆ ಜಮಾದಾರ ಮಲ್ಲಪ್ಪನ ಏರು ಯವ್ವನದ ಶ್ರೀಮಂತಿಕೆಯಂತೆ ಕಂಡು ಬರುತ್ತದೆ. ಪ್ರಾದೇಶಿಕ ನೆಲೆಯಲ್ಲಿ ಮರೆಯಾಗಿದ್ದ ಕೆಳವರ್ಗದ ಬದುಕಿನ ಸಂಭ್ರಮವನ್ನು ಕಾದಂಬರಿಯಲ್ಲಿ ಮುಖ್ಯ ನೆಲೆಗೆ ತಂದು ನಿಲ್ಲಿಸಬೇಕೆಂಬ ಹಂಬಲ ಕಾಳಜಿಯಿಂದ ಕೂಡಿದ್ದು. "ಝೋಪಡಪಟ್ಟಿ ಮಂದಿಯ ಸುಖ-ದುಃಖ, ಸಂಕಟ ಸಮಸ್ಯೆ, ರೀತಿ-ರಿವಾಜು, ರೂಢಿ ನಂಬಿಕೆ, ಶಾಸ್ತ್ರ ಸಂಪ್ರದಾಯ, ಚಾಜನೇಮ, ಆಚರಣೆಗಳೆಲ್ಲ ಯಾವುದೇ ನಕಲೀ ಬಟ್ಟೆಯ ಮುಸುಕಿನ ಹಂಗಿಲ್ಲದೆ ಬೆತ್ತಲಾಗೇ ನಿಂತಿವೆ. ಶಿಷ್ಟ ಸಂಸ್ಕೃತಿಯ ಹೋಳಿಗೆ, ಪಾಯಸ ತಿಂದೂ ತಿಂದೂ ಜಡ್ಡುಗಟ್ಟಿ ಸ್ವಾದ ಕಳೆದುಕೊಂಡಿರುವ ನಾಲಿಗೆಗಳಿಗೆ ಜಾನಪದ ಸಂಸ್ಕೃತಿಯ ಸಜ್ಜಿ ರೊಟ್ಟಿ, ಬಚ್ಚಿಪಲ್ಯ, ಜ್ವಾಳದ ಕಡಬು, ಪುಂಡಿಪಲ್ಯ ಉಣ್ಣಿಸಿ ಖುಷಿ ಪಡಿಸುವ ಹುನ್ನಾರು ನನ್ನದು" (ಗೀತಾ ನಾಗಭೂಷಣ; ೨೦೦೧; ಪುಟ: x). ಮುನ್ನುಡಿ ಬರಹದ ತಮ್ಮ ಮಾತುಗಳಲ್ಲಿ ಗೀತಾ ನಾಗಭೂಷಣ ಅವರು ತಿಳಿಸುವ ವಿಚಾರಗಳುಮುಖ್ಯ ನೆಲೆಯಿಂದ ಹೊರಗುಳಿಸಲ್ಪಟ್ಟವರ ಬಣ್ಣ ರಹಿತ ಬದುಕಿನ ಚಿತ್ರಣದ ತುರ್ತನ್ನು ತಿಳಿಸುತ್ತವೆ. ಕೆಳವರ್ಗದ ಆಚರಣೆಗಳನ್ನು ಹೊಗಳಲೇ ಬೇಕೆನ್ನುವ ಆಶಯ ಇಲ್ಲಿನದಲ್ಲ. ಈ ಸಮುದಾಯಕ್ಕೆ ಸಂಬಂಧಿಸಿದ

ಕೆಲ ಆಚರಣೆಗಳನ್ನು ವಿಭಿನ್ನ ರೀತಿಯಲ್ಲಿ ವಿಮರ್ಶಿಸುತ್ತಲೇ ವಿರೋಧಿಸುವ ಇವರ ನಿಲುವು ಕಾದಂಬರಿಗೆ ವಾಸ್ತವಿಕ ಪ್ರಜ್ಞೆಯನ್ನು ನೀಡಿದೆ. 'ಜೋಗತಿ' ಸಂಪ್ರದಾಯದ ಬಗೆಗಿನ ವಿರೋಧಾತ್ಮಕ ವಿವರಗಳು ಕಾದಂಬರಿಯುದ್ದಕ್ಕೂ ಕಂಡು ಬರುವುದೇ ಇದಕ್ಕೆ ಸಾಕ್ಷಿ.

ಚುಂಚೂರಿನ ಮಾಪುರತಾಯಿಯ ಜಾತ್ರೆಯು ಆಕರ್ಷಣೀಯವಾಗಿರುವುದು ಇಲ್ಲಿ ನಡೆಯುವ ಬೆತ್ತಲೆ ಸೇವೆ ಮತ್ತು ಜೋಗತಿಯರನ್ನು ಬಿಡುವ ಕಾರ್ಯದಿಂದ ಇನ್ನೂ ಅನೇಕ ವೈಶಿಷ್ಟ್ಯಗಳು ಇಲ್ಲಿ ಕಂಡುಬರುತ್ತವೆ. ಆದರೂ ಸ್ತ್ರೀಕೇಂದ್ರಿತವಾದ ಈ ಆಚರಣೆಗಳ ಸುತ್ತ ಕಾದಂಬರಿಯಲ್ಲಿ ವಿಸ್ತಾರವಾದ ಪ್ರತಿಕ್ರಿಯೆ ಇದೆ. ಜಾತ್ರೆಯಲ್ಲಿ ಒಂದು ಕಡೆ ಒದ್ದೆ ಬಟ್ಟೆ ಉಟ್ಟು ದಿಂಡ ನಮಸ್ಕಾರ ಹಾಕುವ ಜನ ಕಂಡು ಬರುವುದನ್ನು ಇನ್ನೊಂದು ಕಡೆಯಿಂದ ಗಂಧದ ಹುಟಗಿ ಉಟ್ಟ ಬೆತ್ತಲೆ ಹೆಣ್ಣು ಗಂಡುಗಳು ಗುಡಿಯನ್ನು ಸುತ್ತುವುದನ್ನು, ಮತ್ತೊಂದು ಬದಿಯಲ್ಲಿ ಸ್ವಂತ ಇಚ್ಛೆಯಿಂದಲೊ ಅಥವಾ ಊರಿನ ಪೂಜಾರಿಯ, ಸ್ಥಿತಿವಂತರ ಒತ್ತಾಯದ ಮೇರಿಗೆ ಮನಸ್ಸಿರುವ, ಇಲ್ಲದಿರುವ ಸ್ತ್ರೀಯರನ್ನು ಒತ್ತಾಯಪೂರ್ವಕವಾಗಿ ಜೋಗಣೆಯರನ್ನಾಗಿ ಮಾಡುವ ಆಚರಣೆಗಳು ಕಾದಂಬರಿಯುದ್ದಕ್ಕೂ ವಿವರವಾಗಿ ತಿಳಿದು ಬರುತ್ತವೆ. ಸುರಗಿ ಎರೆದು ಮದುವಣಗಿತ್ತಿಯಂತೆ ಸಿಂಗರಿಸಿ ಕೂಡಿಸಿದ ಹೆಣ್ಣಿನ ಎಡಭಾಗದಲ್ಲಿ ಕತ್ತಿಯನ್ನು ಇಟ್ಟು, ಅದನ್ನೇ ಆಕೆಯ ಗಂಡನೆಂದು ಅಲಂಕರಿಸಿ ಅದರೊಂದಿಗೆ ಆಕೆಯ ಮದುವೆ ಮಾಡುತ್ತಾರೆ. ತಲೆಯ ಮೇಲೆ ಬಿದಿರ ಬುಟ್ಟಿಯನ್ನು ಹೊರಸಿ, ಬಗಲಲ್ಲಿ ಚೌಡಕಿ ಕೊಟ್ಟು ಆಕೆಯನ್ನು ಜೋಗಣೆಯನ್ನಾಗಿ ಮಾಡುತ್ತಾರೆ. ಜೋಗಣಿ ಕಾರ್ಯದ ಖರ್ಚನ್ನು ನೋಡಿಕೊಳ್ಳುವ ಮೇಲ್ವರ್ಗದ ಗೌಡನೊ, ಕುಲಕರ್ಣಿಯೊ ಆಕೆಯನ್ನು ಭೋಗಿಸಿ ಬಿಟ್ಟ ನಂತರ ಆಕೆ ಜೋಗಣಿಯಾಗುತ್ತಾಳೆ. ಮುಂದೆ ದೇವಿ ಹೆಸರಿನಲ್ಲಿ ಬಿಟ್ಟ ಈ ಮಹಿಳೆಯರು ಕಾಮುಕ ಪುರುಷರ ಕಾಮ ತಣಿಸುವ ವಸ್ತುಗಳಾಗಿ ಉಳಿಯುತ್ತಾರೆ. ತಮ್ಮ ಕಾಮಕ್ಕಾಗಿ ಸ್ತ್ರೀಯನ್ನು ಇಂತಹ ನೀಚ ಕಾರ್ಯಕ್ಕೆ ತಳ್ಳುವ ಪುರುಷ ವ್ಯವಸ್ಥೆ ಸಮಾಜದಲ್ಲಿ ಆಕೆಗೆ 'ನಿತ್ಯ ಮುತ್ತೈದೆ' ಎಂಬ ಹೆಸರನ್ನು ಕೊಡುವ ಮೂಲಕ ಆಕೆಗೆ ತನ್ನಿಂದ ಆದ ಅನ್ಯಾಯವನ್ನೆಲ್ಲ ಮರೆಮಾಚುತ್ತದೆ.

ಗುಡಿ ಪೂಜಾರಿಯ ಮೈಮೇಲೆ ಮಾಪುರತಾಯಿ ಬಂದಾಗ ಅವನು ಯಾವ ಹುಡುಗಿ ಜೋಗತಿ ಯಾಗಬೇಕೆಂದು ಸೂಚಿಸುತ್ತಾನೋ ಅಂತಹ ಹುಡುಗಿಯನ್ನು ಜೋಗತಿ ಮಾಡಬೇಕಾದ ಅನಿವಾರ್ಯತೆ ಹೊಲಗೇರಿ ಜನರದ್ದು. ಜಮಾದಾರ ಮಲ್ಲಪ್ಪನ ದೊಡ್ಡಿ ಹೊಲಯ ಭರಮನ ಮಗಳು ನೀಲವ್ವನನ್ನು ಇದೇ ರೀತಿ ಒತ್ತಾಯಪೂರ್ವಕವಾಗಿ ಜೋಗತಿಯನ್ನಾಗಿ ಮಾಡಲಾಗುತ್ತದೆ. ಸುಂದರ ಸಂಸಾರಿಕ ಜೀವನದ ಕನಸುಗಳನ್ನು ಹೊಂದಿದ್ದ ನೀಲವ್ವ ತನ್ನ ಕೇರಿಯಲ್ಲಿಯೇ ಇದ್ದ ತುಕಾರಾಮನನ್ನು ಪ್ರೀತಿಸಿರುತ್ತಾಳೆ. ಆದರೆ ತಂದೆ ತಾಯಿಯರ, ಪೂಜಾರಿ ಮತ್ತು ಊರಿನ ಸಾಹುಕಾರನ ಮಗನ ಬಲವಂತಕ್ಕೆ ಒಳಗಾಗಿ ಜೋಗಣೆಯಾಗುತ್ತಾಳೆ. ಜೋಗಣೆಯಾದ ಕಾರಣಕ್ಕೆ ತುಕಾರಾಮನಿಂದ ತಿರಸ್ಕೃತಳಾಗುತ್ತಾಳೆ. ಜೀವನದಿಂದ ಜಿಗುಪ್ಸೆಗೊಂಡ ನೀಲವ್ವ ಬಾವಿಗೆ ಬಿದ್ದು ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಪ್ರೇಮ ಕಾಮಕೇಂದ್ರಿತವಾದಾಗಿನ

ಅಪಾಯಗಳು ಹಾಗೂ ಒತ್ತಾಯಪೂರ್ವಕವಾಗಿ ಜೋಗತಿಯಾಗಬೇಕಾದವರ ಬದುಕಿನ ದುರಂತಗಳನ್ನು ಇಲ್ಲಿ ತಿಳಿಸುತ್ತವೆ. ಈ ಸನ್ನಿವೇಶದ ಹಿನ್ನೆಲೆಯಲ್ಲಿ ಕೆಳಜಾತಿಯ ಹೆಣ್ಣುಮಕ್ಕಳೆ ಜೋಗತಿಯರಾಗುವುದನ್ನು ಮಲ್ಲವ್ವ ಪ್ರಶ್ನಿಸುವ ರೀತಿ ವಿವೇಚನೆಯಿಂದ ಕೂಡಿದೆ. "...ನನಗ್ಯಾಕೊ ಸಂಶ ಬರ್‍ತದ ನೋಡು.... ಆ ದೇವತೆ ಈ ಹೆಣ್ಣು ಪೋರಿಗೋಳಿಗಿ 'ಜೋಗಣಿ' ಆಗಿ ಹಾದರ ಮಾಡಂತ ಹೇಳ್ತಾಳಂತಿ? ಆಕಿನೂ ಹೆಣ್ಣಲ್ಲ? ದೇವರಾದ್ರೇನು ದೆವ್ವಾದ್ರೇನು.... ಹೆಣ್ಣು ಹೆಣ್ಣೇ ಅಲ್ಲೇನು? ಹಿಂತಾ ಹಲ್ಕಟ್ ಹರಕಿ ಮಾಡ್ರಿ ಅಂತ ಹೇಳ್ತಾಳೇನು ದೇವಿ.... ಮತ್ತ ಹಿಂತಾ ಹರಕಿ, ಅದೇ ಕೆಳಜಾತಿ ಮಂದಿನೇ ಮಾಡ್ತಾರ.... ಮ್ಯಾಲಿನ ಜಾತಿ ಮಂದಿ ತಮ್ಮ ಹೆಂಗಸರಿಗಿ ಹಿಂಗ್ ಜೋಗಣಿ ಬಿಡ್ತಾರಾ ಎಂದರೆ? ಅವರಿಗಿಲ್ಲದ ಹರಕಿ ಇವರಿಗ್ಯಾಕೋ.. ಇದರ ಹಿಂದ ಏನರೆ, ನಮಗ ತಿಳೀಲಾರ್‍ದ ಮಸಲತ್ತ ಗಿಸಲತ್ತ ಅದಾನೋ ಏನೋ ಅಂತ... (ಗೀತಾ ನಾಗಭೂಷಣ; ೨೦೦೧; ಪುಟ : ೬೭) ಎಂದು ಮಲ್ಲಪ್ಪನನ್ನು ಕೇಳುವ ಮಲ್ಲವ್ವನ ಮಾತುಗಳಲ್ಲಿ ಈ ಜೋಗತಿ ಪದ್ಧತಿಯು ಕೆಳಜಾತಿಯವರಿಗೆ ಮಾತ್ರ ಹೇರಲ್ಪಟ್ಟಿರುವ ಪದ್ಧತಿಯೆಂಬುದನ್ನು ಸಾರ್ವತ್ರಿಕವಲ್ಲದ ಈ ಪದ್ಧತಿಯ ಹಿಂದೆ ಇರಬಹುದಾದ ಮೇಲ್ವರ್ಗದ ಕೈವಾಡವನ್ನು ಅರಿತುಕೊಳ್ಳುವ ಕಡೆಗೆ ಸ್ತ್ರೀಯರನ್ನು ಯೋಚನೆಗೆ ಈಡುಮಾಡುತ್ತವೆ. ಈ ರೀತಿಯ ಅಮಾನವೀಯ ಆಚರಣೆಗಳನ್ನು ಹೇರಿದವರ ವಿರುದ್ಧ ವಿರೋಧವನ್ನು ವ್ಯಕ್ತಪಡಿಸುವುದು ಇದರಲ್ಲಿ ತಿಳಿದುಬರುತ್ತದೆ.

ಮಾನಿಂಗಪ್ಪ ಮತ್ತು ಮಾಳವ್ವ ದಂಪತಿಗಳು ಚುಂಚೂರು ಮಾಪುರ ತಾಯಿಯಲ್ಲಿ ಹುಟ್ಟಿದ ಚೊಚ್ಚಲು ಹೆಣ್ಣು ಮಗುವನ್ನು ಜೋಗಣಿಯಾಗಿ ನಿನ್ನ ಸೇವೆಗೆ ಬಿಡುತ್ತೇವೆಂದು ಹರಕೆ ಹೊರುತ್ತಾರೆ. ಕಾಕತಾಳೀಯವೆಂಬಂತೆ ಚೊಚ್ಚಲು ಹೆರಿಗೆಯಲ್ಲಿ ಅವಳಿ-ಜವಳಿ ಹೆಣ್ಣು ಮಕ್ಕಳು ಹುಟ್ಟುತ್ತವೆ. ದೇವಿಯ ಹರಕೆ ತೀರಿಸಲು ಯೌವ್ವನಾವಸ್ಥೆಗೆ ಬಂದ ದುರ್ಗಿ-ಮುರ್ಗಿ ಎಂಬ ಈ ಎರಡೂ ಹೆಣ್ಣು ಮಕ್ಕಳನ್ನು ಜೋಗತಿಯರನ್ನಾಗಿ ಮಾಡಿ ದೇವಿ ಸೇವೆಗೆ ಬಿಡುತ್ತಾರೆ. ತಾವಾಗಿಯೆ ಈ ರೀತಿ ಹರಕೆ ತೀರಿಸುವ ನೆಪದಲ್ಲಿ ಜೋಗಣಿಯರನ್ನು ಬಿಡುವ ಪದ್ಧತಿ ಕೇರಿ ಜನರಲ್ಲಿದೆ. ಯಾವ ರೀತಿಯಿಂದ ಜೋಗತಿಯಾದರೂ ಅಂತಿಮವಾಗಿ ಆಕೆ ಊರಿನ ವೇಶ್ಯೆಯಾಗಿ ಬದುಕನ್ನು ಕಳೆಯಬೇಕೆ ವಿನಃ ಬೇರೆ ಆಯ್ಕೆಗಳಿಲ್ಲ. ಯಾರದೋ ಮನೆಯಲ್ಲಿ ನಡೆಯುವ ದೇವತಾಕಾರ್ಯಗಳಲ್ಲಿ ಇಂತಹ ಜೋಗಣಿಯರಿಗೆ 'ನಿತ್ಯ ಮುತ್ತೈದೆ'ಯರೆಂದು ಊಟಕ್ಕೆ ಆಹ್ವಾನಿಸಿ ಇವರಿಗೆ ಪ್ರಾಧಾನ್ಯತೆಯನ್ನು ಕೊಡುತ್ತಾರೆ. ಆದರೆ ಇದು ತಾತ್ಕಾಲಿಕವಾಗಿ ಇವರ ಬದುಕಿಗೆ ಸಿಗುವ ಸೌಲಭ್ಯವೇ ಹೊರತು ಆರ್ಥಿಕ ಭದ್ರತೆ ಇವರ ಜೀವನದುದ್ದಕ್ಕೂ ಸಿಗುವುದಿಲ್ಲ.

ಈ ರೀತಿಯ ಸಂಪ್ರದಾಯಗಳಿಗೆ ಒಳಗಾಗಿ ತಮ್ಮ ಬದುಕಿಗೆ ತಾವೇ ಅಂತ್ಯವನ್ನು ಬರೆದುಕೊಂಡ ಎಷ್ಟೋ ಜೋಗತಿಯರ ಬದುಕಿಗೆ ತುಳಜಾಳ ಬದುಕು ಹೊಸ ಆಯಾಮವನ್ನು ನೀಡುತ್ತದೆ. ಜೋಗತಿಯಾಗಿ ತನಗೆ ಇಷ್ಟವಿಲ್ಲದ ಬದುಕನ್ನು ತುಳಜಾ ಒಪ್ಪಿಕೊಂಡಿರುತ್ತಾಳೆ. ಹುಸೇನಪ್ಪನಿಂದ ವೈವಾಹಿಕ ಜೀವನವನ್ನು ಕಾಣಲು ಸಾಧ್ಯವಾದ ತುಳಜಾಳ ಬದುಕು ಊರಿಗೆ ಮಾದರಿಯಾಗಿದ್ದ ಸಂದರ್ಭದಲ್ಲಿ ಮೇಲ್ವರ್ಗದವರ ಹಾಗೂ ಪುಜಾರಿಯ ಕುಯುಕ್ತಿಯಿಂದ ತುಳಜಾಳ ತವರು ಮನೆಗೆ ಬೆಂಕಿ ಬಿದ್ದು

ಅನಾಹುತವಾಗುತ್ತದೆ. ಪಂಚಾಯ್ತಿ ತುಳಜಾಳನ್ನು ಬಹಿಷ್ಕೃತಗೊಳಿಸುವ ಮುನ್ನ ಆಕೆಯೇ ಪಂಚಾಯ್ತಿಯನ್ನು ಧಿಕ್ಕರಿಸಿ ತಂದೆ ತಾಯಿಗಳೊಂದಿಗೆ ಪಟ್ಟಣ ಸೇರುತ್ತಾಳೆ.

ಇಡೀ ಕಾದಂಬರಿಯಲ್ಲಿ ತಳಸಮುದಾಯದ ಅಮಾನವೀಯ ಸಾಂಪ್ರದಾಯಿಕ ಆಚರಣೆಗಳ ವಿವಿಧ ನೆಲೆಗಳು ತಿಳಿದು ಬರುತ್ತವೆ. ಅಸಹಾಯಕತೆಯಲ್ಲಿ ಸತ್ತ ನೀಲವ್ವ, ಸಂಪ್ರದಾಯಕ್ಕೆ ಶರಣಾದ ದುರ್ಗಿ-ಮುರ್ಗಿಯರ ಜೀವನ, ವ್ಯವಸ್ಥೆಯನ್ನು ವಿರೋಧಿಸಿ ಬದುಕನ್ನು ರೂಪಿಸಿಕೊಂಡ ತುಳಜಾ, ಹೀಗೆ ಸಮುದಾಯದೊಳಗಿನ ಜೋಗತಿಯರ ಬದುಕಿನ ಚಲನೆಯನ್ನು ಈ ಪಾತ್ರಗಳು ಪ್ರತಿನಿಧಿಸುತ್ತವೆ. ಸಂಪ್ರದಾಯದ ಶರಣಾಗತಿ ಒಂದು ಕಾಲಘಟ್ಟದ ವಿಚಾರ. ನಂತರದಲ್ಲಿ ಈ ರೀತಿ ಸೂಚಿತ ಬದುಕಿನ ಎಲ್ಲಾ ಮಿತಿಗಳನ್ನು ಮೀರಿ ಜೀವನ ಸಾಗಿಸವ ಧೈರ್ಯವನ್ನು ತೋರಿಸುವ ಜೋಗತಿಯರು ಇಂತಹ ಸಂಪ್ರದಾಯಗಳನ್ನು ವಿರೋಧಿಸಿ ನಡೆವ ಹೊಸ ಜವಾಬ್ದಾರಿಗೆ ತೆರೆದುಕೊಂಡಿರುವುದು ಇಲ್ಲಿ ತಿಳಿದು ಬರುತ್ತದೆ.

'ಮಾಪುರ ತಾಯಿಯ ಮಕ್ಕಳು' (ಗೀತಾ ನಾಗಭೂಷಣ) ಕಾದಂಬರಿಯ ಸಿಂಗಾರಿಯ ಬದುಕು ಜೋಗತಿ ಸಂಪ್ರದಾಯದಿಂದ ದುರಂತಕ್ಕೀಡಾಗುತ್ತದೆ. ಸೋದರ ಮಾವನೊಂದಿಗೆ ವಿವಾಹವಾಗಲಿಚ್ಛಿಸಿ ಆತನಲ್ಲಿ ಮನಸ್ಸಿಟ್ಟಿದ್ದ ಸಿಂಗಾರಿಯ ಕನಸುಗಳು ನನಸಾಗುವುದಿಲ್ಲ. ಜ್ವರದಿಂದ ಬಳಲುತ್ತಿದ್ದ ಸಿಂಗಾರಿ ಬದುಕುಳಿಯಬೇಕಾದರೆ ಆಕೆ ಜೋಗತಿಯಾಗಬೇಕೆಂದು ಪೂಜಾರಿ ಮೈಯಲ್ಲಿ ಬಂದ ಮಾಪುರ ತಾಯಿ ಆಜ್ಞೆ ಮಾಡುತ್ತಾಳೆ. ಸಿಂಗಾರಿಯನ್ನು ಈ ಕುತಂತ್ರದಿಂದ ಪಾರುಮಾಡಲು ಹೋದ ಆಕೆಯ ಸೋದರ ಮಾವ ಶಿವರುದ್ರನನ್ನು ಗೌಡ, ಕುಲಕರ್ಣಿಯ ಆಳುಗಳು ಕೊಲ್ಲುತ್ತಾರೆ. ತಮ್ಮ ಭೋಗಕ್ಕೆ ಸಿಂಗಾರಿಯನ್ನು ಬಳಸಿಕೊಂಡ ಗೌಡ, ಕುಲಕರ್ಣಿ ಆಕೆಯನ್ನು ಮುಂಬೈಯ ವೇಶ್ಯಾಗೃಹಕ್ಕೆ ಮಾರಾಟ ಮಾಡುತ್ತಾರೆ. ಚಮೇಲಿಬಾಯಿ ಹೆಸರಿನ ಸಿಂಗಾರಿ ಚಮನಲಾಲ್ ಎಂಬ ಶೇಠನಿಗೆ ಮಾಲೀಕಳಿಂದ ಮಾರಾಟವಾಗುತ್ತಾಳೆ. ಚಮನಲಾಲ್‌ನ ಮರಣಾನಂತರ ಸಿಕ್ಕ ಹಣದಿಂದ ಊರಿಗೆ ಮರಳುವ ಸಿಂಗಾರಿ ಶಿವರುದ್ರನ ತೋಟದಲ್ಲಿ ಮನೆ ಮಾಡಿಕೊಂಡು ಇರುತ್ತಾಳೆ. ಮಾದೇವಿ ಜೋಗಣಿಯಾಗುವುದನ್ನು ತಡೆದ ಸಿಂಗಾರಿ ಆಕೆಯ ಇಚ್ಛೆಯಂತೆ ಶಂಕ್ರುನೊಂದಿಗೆ ವಿವಾಹ ಮಾಡುತ್ತಾಳೆ. ಮಾದೇವಿಯನ್ನು ಜೋಗಣಿಯನ್ನಾಗಿ ಮಾಡಿ ಹತ್ತು ಸಾವಿರ ರೂಪಾಯಿ ಪಡೆಯಬೇಕೆಂದಿದ್ದ ದಲ್ಲಾಳಿಗಳ ಆಸೆ ಸಿಂಗಾರಿಯಿಂದ ಮಣ್ಣು ಪಾಲಾಗುತ್ತದೆ. ಇದೇ ಸಿಟ್ಟಿನಲ್ಲಿ ದಲ್ಲಾಳಿಗಳು ಸಿಂಗಾರಿಯನ್ನು ಇರಿದು ಕೊಲ್ಲುತ್ತಾರೆ. ಬಾಲಚಂದ್ರ ಜಯಶೆಟ್ಟಿಯವರ 'ಎಲ್ಲಮ್ಮನ ಸೇವೆ' ಕತೆಯ ಚೆನ್ನಿ, ಕೆಳವರ್ಗದ ಅನಿಷ್ಟ ಸಂಪ್ರದಾಯಗಳಿಗೆ ಬದುಕನ್ನು ಕಳೆದುಕೊಂಡಿರುವ ಸ್ತ್ರೀಸಂವೇದನೆಯನ್ನು ಬಿಂಬಿಸುತ್ತಾಳೆ.

ಈ ಸಮುದಾಯದಲ್ಲಿ ಕಂಡುಬರುವ ಇನ್ನೊಂದು ಅನಿಷ್ಟ ಪದ್ಧತಿ ಎಂದರೆ 'ಛಾಜಾ' ಪದ್ಧತಿ. ಊರಿಗೆ ಹೊಸದಾಗಿ ಬಾಳುವೆ ಮಾಡಲು ಬರುವ ಸೊಸೆಯನ್ನು ಮೊದಲ ರಾತ್ರಿಯ ಕಾರ್ಯ ಮಾಡುವ ಮೊದಲೇ ಊರಿನ ಗೌಡ ಅಥವಾ ಕುಲಕರ್ಣಿಯ ಬಳಿ ಮಲಗಲು ಕಳಿಸಬೇಕು. ಅವರು ಉಂಡು ಬಿಟ್ಟ ನಂತರವೇ ಆಕೆ ಗಂಡನೊಂದಿಗೆ ಜೀವನ ಸಾಗಿಸಬೇಕು. ಇಂತಹ ಪದ್ಧತಿಯಿಂದ ಮನನೊಂದಿದ್ದ ಈ

ಸಮುದಾಯದ ಸ್ತ್ರೀ ಹಾಗೂ ಪುರುಷರ ನೋವು ಇಲ್ಲಿನ ಕಥನ ಸಾಹಿತ್ಯದಲ್ಲಿ ಕಂಡುಬರುತ್ತದೆ. 'ಹಸಿಮಾಂಸ ಮತ್ತು ಮತ್ತು ಹದ್ದುಗಳು' (ಗೀತಾ ನಾಗಭೂಷಣ) ಕಾದಂಬರಿಯಲ್ಲಿ ಫಕೀರಪ್ಪ ಥಾಜಾ ಪದ್ಧತಿಯನ್ನು ವಿರೋಧಿಸುತ್ತಾನೆ. ಕುಲಕರ್ಣಿ ಫಕೀರಪ್ಪನನ್ನು ಕರೆದು ಆತನ ಹೆಂಡತಿಯನ್ನು ಥಾಜಾ ಪದ್ಧತಿಯ ಪ್ರಕಾರ ತನಗೊಪ್ಪಿಸುವಂತೆ ಆಜ್ಞಾಪಿಸುತ್ತಾನೆ. ತನ್ನ ಹೆಂಡತಿ ಇನ್ನೂ ಋತುಮತಿ ಆಗಿಲ್ಲವೆಂದು ಸುಳ್ಳು ಹೇಳಿ ಜಾರಿಕೊಳ್ಳುವ ಫಕೀರಪ್ಪ ಹೆಂಡತಿಯನ್ನು ಕಟ್ಟಿಕೊಂಡು ಊರು ಬಿಟ್ಟು ಹೋಗುತ್ತಾನೆ. ಮಕ್ಕಳಾದ ನಂತರ ಊರಿಗೆ ಬಂದು ಜೀವನ ನಡೆಸಲು ಪ್ರಾರಂಭಿಸುತ್ತಾನೆ.

'ಉಡುಕಿ' ಪದ್ಧತಿ ಕೆಳವರ್ಗದ ಸ್ತ್ರೀಯರಿಗೆ ಒಂದು ಬಗೆಯ ಸ್ವಾತಂತ್ರವನ್ನು ನೀಡಿರುವ ಸಂಪ್ರದಾಯ. ಆದರೆ ಇದರ ಸಮಸ್ಯೆಗಳನ್ನು ಈ ಪ್ರದೇಶದ ಕಥನ ತಿಳಿಸುತ್ತದೆ. ಕುರುಮಯ್ಯ ಮತ್ತು ಅಂಕುಶದೊಡ್ಡಿ (ಜಂಬಣ್ಣ ಅಮರಚಿಂತ) ಕಾದಂಬರಿಯಲ್ಲಿ ಬರುವ ಬುಡ್ಡಮ್ಮ, 'ತಾಯಿ ಸಾಕೀಬಾಯಿ' (ಬಿ.ಟಿ. ಲಲಿತಾನಾಯಕ್) ಕತೆಯ ಸಾಕೀಬಾಯಿ, 'ಉಡುಕಿ' (ಭಾಲಚಂದ್ರ ಜಯಶೆಟ್ಟಿ) ಕತೆಯ ಶಿವಮ್ಮ, ಮಮತೆಯ ಕೊಲೆ' (ಲಲಿತಾದೇಮಶೆಟ್ಟಿ) ಕತೆಯ ಚಂದ್ರಿ, ಉಡುಕಿ ಪದ್ಧತಿಯಿಂದ ತಮ್ಮ ಬದುಕಿಗೆ ನೆಲೆ ಕಂಡುಕೊಳ್ಳಬಯಸಿದವರು. ಮಗುವಿನ ಮಮತೆಯಿಂದ ಅದನ್ನು ಬಿಟ್ಟು ಕೊಡಲಾಗದೆ ಮಗು ಸಮೇತ ಸಾಯುವ ಬುಡ್ಡಮ್ಮ ದುರಂತವನ್ನು ಅನುಭವಿಸುತ್ತಾಳೆ. ಕೊರವ ಜನಾಂಗಕ್ಕೆ ಬುಡ್ಡಮ್ಮನ ಬದುಕು ದಿಗ್ಭ್ರಮೆಯನ್ನುಂಟುಮಾಡುತ್ತದೆ. 'ತಾಯಿ ಸಾಕೀಬಾಯಿ' (ಬಿ.ಟಿ. ಲಲಿತಾನಾಯಕ್) ಕತೆಯ ಸಾಕೀಬಾಯಿಯ ಉಡುಕಿ ಪದ್ಧತಿಗೆ ಆಕೆಯ ಬೆಳೆದ ಮಕ್ಕಳೇ ತಡೆಯುತ್ತಾರೆ. 'ಉಡುಕಿ' (ಭಾಲಚಂದ್ರ ಜಯಶೆಟ್ಟಿ) ಕತೆಯ ಶಿವಮ್ಮ ತನ್ನ ಮೊದಲನೇ ಗಂಡನಿಂದ ಪಡೆದಿದ್ದ ಮಗುವಿನಿಂದ ಸಮಸ್ಯೆಯನ್ನು ಎದುರಿಸಬೇಕಾಗುತ್ತದೆ. ಶಿವಮ್ಮನನ್ನು ಉಡುಕಿ ಮಾಡಿಕೊಳ್ಳಲು ಒಪ್ಪುವ ಖಂಡಪ್ಪ ಆಕೆಯ ಮಗುವನ್ನು ತಿರಸ್ಕರಿಸುತ್ತಾನೆ. ಶಿವಮ್ಮನ ತಾಯಿ ತನ್ನ ಮಕ್ಕಳೊಂದಿಗೆ ಶಿವಮ್ಮನ ಉಡುಕಿ ವಿಚಾರವಾಗಿ ಕೂಲಂಕುಷವಾಗಿ ಚರ್ಚಿಸದೆ ದುಡುಕಿ ಖಂಡಪ್ಪನೊಂದಿಗೆ ಉಡುಕಿ ಮಾಡಿರುತ್ತಾಳೆ. ಉಡುಕಿ ನಂತರ ಖಂಡಪ್ಪ ಶಿವಮ್ಮನ ಮೊದಲನೆ ಮಗುವಿಗೆ ಸಂಬಂಧಿಸಿದಂತೆ ನ್ಯಾಯ ತೆಗೆಯುತ್ತಾನೆ. ಈ ನ್ಯಾಯಕ್ಕೆ ಪಂಚಾಯಿತಿಯಲ್ಲೂ ತೀರ್ಮಾನ ಸಿಗುವುದಿಲ್ಲ. ಕೊನೆಗೆ ಶಿವಮ್ಮ ಮಗುವನ್ನು ಬಿಟ್ಟು ಗಂಡನೊಂದಿಗೆ ಹೊರಟು ಹೋಗುತ್ತಾಳೆ.

'ಮಮತೆಯ ಕೊಲೆ' (ಲಲಿತಾದೇಮಶೆಟ್ಟಿ) ಕತೆಯಲ್ಲಿ ಚಂದ್ರಿ ಗಂಡನ ಸಾವಿನ ನಂತರ ಆತನಿಂದ ಪಡೆದ ಮಗು ಬೆಳ್ಳಿಯನ್ನು ನೋಡಿಕೊಂಡು ಜೀವನ ಸಾಗಿಸಲು ಇಚ್ಛಿಸುವುದಿಲ್ಲ. ಆಕೆಯನ್ನು ಬಳಸಿಕೊಳ್ಳಲು ಹವಣಿಸುವ ಕಾಮುಕ ಪುರುಷರ ಕೈಗೆ ಸಿಗಲು ಆಕೆ ಇಚ್ಛಿಸುವುದಿಲ್ಲ. ಹಮಾಲರ ಹನುಮನೊಂದಿಗೆ ಉಡುಕಿ ಮಾಡಿಕೊಳ್ಳಲು ಬಯಸುವ ಚಂದ್ರಿಗೆ ಮಗಳು ಬೆಳ್ಳಿಯದೆ ಸಮಸ್ಯೆಯಾಗುತ್ತದೆ. ಹನುಮ ಚಂದ್ರಿಯನ್ನು ಇಷ್ಟಪಡುತ್ತಾನೆ. ಆಕೆ ಹೆತ್ತ ಮಗುವನ್ನಲ್ಲ. ಉನ್ನತ ಸ್ಥಿತಿಯಲ್ಲಿದ್ದ ಕತೆಯ ನಿರೂಪಕಿಯಲ್ಲಿಗೆ ಚಂದ್ರಿ ತನ್ನ ಮಗುವನ್ನೊಪ್ಪಿಸಲು ಬರುತ್ತಾಳೆ. ಅದನ್ನು ತಿರಸ್ಕರಿಸಿ ನಿರೂಪಕಿ ಉಪದೇಶ

ಮಾಡುತ್ತಾಳೆ. ಯಾವ ಉಪದೇಶದಿಂದಲೂ ಪರಿಹಾರ ಕಾಣದ ಚಂದ್ರಿ ತನ್ನ ಮಗುವನ್ನು ಕೊಂದು ಅದರ ನೆನಪಲ್ಲೇ ಹುಚ್ಚಿಯಾಗುತ್ತಾಳೆ.

ಇಂತಹ ಪದ್ಧತಿಗಳು ತಳವರ್ಗದ ಸ್ತ್ರೀಯರಿಗೆ ಅನುಕೂಲವಾಗಿವೆ ಎಂಬುದಕ್ಕಿಂತ ಸಮಸ್ಯಾತ್ಮಕವಾಗಿ ಪರಿಣಮಿಸಿರುವುದನ್ನು ಇಲ್ಲಿನ ಕಥನ ಸಾಹಿತ್ಯದ ಸಂವೇದನೆಗಳು ತಿಳಿಸುತ್ತವೆ.

ಸಂಪ್ರದಾಯ, ಪದ್ಧತಿಗಳ ನೋವು-ನಿರಾಸೆಯ ಜೊತೆಗೆ ಇಲ್ಲಿನ ಉತ್ತಮ ಆಚರಣೆಗಳಿಂದ ಅನುಭವಿಸಿದ ಸಂಭ್ರಮದ ಸಂವೇದನೆಗಳನ್ನು ಇಲ್ಲಿನ ಕಥನ ಸಾಹಿತ್ಯ ತಿಳಿಸಿಕೊಡುತ್ತದೆ. ಆಚರಣೆಗಳ ಹೆಸರಲ್ಲಿ ಕೆಳವರ್ಗದ ಸ್ತ್ರೀಯ ಶೀಲವನ್ನು ಹಾಳು ಮಾಡುವ ಅಮಾನವೀಯ ಕೃತ್ಯ ಕಂಡು ಬರುತ್ತದೆ. ಇದಲ್ಲದೆ ಇಂತಹ ಆಚರಣೆಗಳ ಆಚೆಗೂ ಈ ಸಮುದಾಯದ ಸ್ತ್ರೀಯರು ತಮ್ಮ ಶೀಲವನ್ನು ಕಾಯ್ದುಕೊಳ್ಳಲು ಜೀವನದುದ್ದಕ್ಕೂ ಹೋರಾಡುತ್ತಾರೆ. ಮದುವೆಯ ಹಂಬಲದಲ್ಲಿ ಮೋಸಕ್ಕೀಡಾಗುವ ಗಂಗಿಯ ಬದುಕು 'ಸೋಲು' (ಲಲಿತಾದೇಮಶೆಟ್ಟಿ) ಕತೆಯಲ್ಲಿ ವ್ಯಕ್ತವಾಗಿದೆ. ಗಂಗಿ ಉಚ್ಚ ಕುಲದ ಹಾವಪ್ಪನ ಮನಸ್ಸನ್ನು ಅರಿಯದೆ ಆತನೊಂದಿಗೆ ಮದುವೆಯಾಗುತ್ತಾಳೆ. ಸಿರಿ ಸಂಪತ್ತಿನ ಬದುಕಿನಲ್ಲಿ ಸಂತೋಷವನ್ನು ಪಡುತ್ತಾಳೆ. ಆದರೆ ಕೊನೆಗೊಂದು ದಿನ ಹಾವಪ್ಪ ಗಂಗಿಯನ್ನು ಬಾಂಬೆಗೆ ಕರೆದೊಯ್ದು ವೇಶ್ಯಾಗೃಹಕ್ಕೆ ಮಾರುತ್ತಾನೆ. ಬದುಕನ್ನು ಕಂಡುಕೊಳ್ಳಬಯಸಿದರಿಗೆ ಉಂಟಾಗುವ ಮೋಸ ಅಮಾನವೀಯವಾದುದು. ಇಟ್ಟುಕೊಂಡವನಲ್ಲಿ ಬದ್ಧತೆಯನ್ನು ತೋರಿ ಗರತಿಯಂತೆ ಬಾಳಿದವರು ಇಲ್ಲಿ ಕಂಡುಬರುತ್ತಾರೆ. 'ಒತ್ತೆ' (ಅಮರೇಶ ನುಗಡೋಣಿ) ಕತೆಯ ದೇವಕಿ ರಾಚಪ್ಪನಿಗಾಗಿ ತೇಯ್ದ ಬದುಕು ಅನೈತಿಕವೆನ್ನಲಾರದಂತಹ ನಿಷ್ಠೆಯಿಂದ ಕೂಡಿದ್ದು. 'ಬದುಕು' (ಗೀತಾ ನಾಗಭೂಷಣ) ಕಾದಂಬರಿಯ ಬೆಳ್ಳಿ ಪಾತ್ರ ತನ್ನ ಶೀಲ ಮನೆತನದ ಘನತೆಯನ್ನು ಪುನಃ ಕಟ್ಟಿಕೊಳ್ಳುವುದರಲ್ಲಿ ಶ್ರಮಿಸಿ ಯಶಸ್ವಿಯಾಗುತ್ತಾಳೆ. ಇವು ತಳಸಮುದಾಯದ ಮಹಿಳೆಯರಲ್ಲಿನ ಉನ್ನತ ಬದುಕಿನ ಯೋಗ್ಯತೆಗಳನ್ನು, ವಾಸ್ತವ ಬದುಕಿನಲ್ಲಿ ಅವರಿಗಾದ ಅನ್ಯಾಯವನ್ನು ತಿಳಿಸುತ್ತವೆ. ನಿಜವಾದ ಜೀವನ ಪ್ರೀತಿಯುಳ್ಳ ಈ ಮಹಿಳೆಯರು ಜಾತಿ ಕಾರಣದಿಂದಾಗಿ ವಿವಾಹ ಸಂಬಂಧಗಳನ್ನು ಅನುಭವಿಸದೆ ಹೋದ ಅಮಾನವೀಯತೆಯನ್ನು, ಕ್ರೂರ ಸಾಮಾಜಿಕ ವ್ಯವಸ್ಥೆಯನ್ನು ಸಮುದಾಯವೊಂದರ ನೆಲೆಯಿಂದ ಮಾತ್ರವಲ್ಲದೆ ಅದರಾಚೆಗೂ ಒಪ್ಪಿಕೊಳ್ಳಲಾಗದು.

### ಕುರುಬ ಸಮುದಾಯ ಹಾಗೂ ಬೆಳ್ಳನ ಬದುಕು

ಕುರುಬ ಸಮುದಾಯದ ಬದುಕಿನ ಆಚರಣೆ, ನಂಬಿಕೆಗಳು ಅನ್ಯ ಸಮುದಾಯಗಳಿಗಿಂತ ವಿಶಿಷ್ಟವಾಗಿವೆ ಎಂಬುದು ಈ ಕಾದಂಬರಿಯಲ್ಲಿ ತಿಳಿದುಬರುತ್ತದೆ. ಮದುವೆಯ ಸಾಂಪ್ರದಾಯಿಕ ಆಚರಣೆಗಳ ವಿವರಗಳೊಂದಿಗೆ ಕಾದಂಬರಿ ಆರಂಭಗೊಳ್ಳುತ್ತದೆ. ಮಾಲ್ಗತ್ತಿ ಬೀರಪ್ಪನ ಮಗಳು ಬಸವ್ವನ ಮದುವೆಯ ಸಂಭ್ರಮದ ಸಿದ್ಧತೆಯನ್ನು ವರ್ಣಿಸುತ್ತ ಅವರು ತಪ್ಪದೇ ಪಾಲಿಸಿಕೊಂಡು ಬಂದ ಸಂಪ್ರದಾಯಿಕ ಆಚರಣೆಯೊಂದನ್ನು ತಿಳಿಸುತ್ತಾರೆ. "ನಾಳಿಗಕ್ಕಿಕಾಳ್, ಇವತ್ತಿರಡ್ಯಾನ್ಗಂಗಸ್ತಾನ್

ಬೆಳ್ಯಾನ ಬದುಕು ಮಾಳವ್ವತ್ತಿ, ಬೀರಪ್ಪ ಮಾವನ ವಾತ್ಸಲ್ಯದಲ್ಲಿ ಅರಳುತ್ತದೆ. ಹೆಂಡತಿ ಬಸಮ್ಮನಿಂದ ಬೆಳ್ಯಾನಿಗೆ ಸುಖದ ದಾಂಪತ್ಯ ಸಿಗುತ್ತದೆ. ಊರಲ್ಲಿ ಪೋಲಿಸಗೌಡನಿಗೆ ಹಾಗೂ ಶರಣಪ್ಪಗೌಡನಿಗೆ ವೈರತ್ವವಿರುತ್ತದೆ. ಶರಣಪ್ಪಗೌಡ, ಶೇಕಪ್ಪ ಕುಲಕರ್ಣಿ ಹಾಗೂ ಶಂಕ್ರಪ್ಪಗೌಡ ಮೂವರು ಒಂದಾಗಿ ಪೋಲಿಸಗೌಡನ ಮೇಲೆ ತಮ್ಮ ವೈರತ್ವ ಸಾಧಿಸಲು ಸಿದ್ಧರಾಗುತ್ತಾರೆ. ಈ ಸಂದರ್ಭಕ್ಕೆ ಸರಿಯಾಗಿ ಬೀರಪ್ಪನಿಗೂ ಮತ್ತು ಆತನ ತಂಗಿ ಕುಂಟ ಶಂಕ್ರವ್ವಳೊಂದಿಗೆ ಜಗಳ ಪ್ರಾರಂಭವಾಗುತ್ತದೆ. ತಂದೆಯಿಂದ ಪಡೆದ ನಾಲ್ಕು ಕೂರಿಗೆ ಹೊಲ ಹಾಗೂ ಇರಲು ಕೊಟ್ಟಿದ್ದ ಜಾಗ ಬಿಟ್ಟು ಕೊಡಲು ಕುಂಟಶಂಕ್ರವ್ವ ಒಪ್ಪುವುದಿಲ್ಲ. ತಂದೆ ಮರಣ ಕಾಲದಲ್ಲಿ ಮಗಳಿಗೆ ಕೊಟ್ಟಿದ್ದ ಆ ಆಸ್ತಿಯನ್ನು ಬಿಟ್ಟುಕೊಡಲು ಬೀರಪ್ಪ ಕೇಳಿದಾಗಲೆಲ್ಲ ಅವರಿಬ್ಬರ ಮಧ್ಯೆ ಜಗಳ ಸಂಭವಿಸುತ್ತಿತ್ತು. ಈ ಜಗಳದಲ್ಲಿ ಪೋಲಿಸ್‌ಗೌಡ ಕುಂಟಶಂಕ್ರವ್ವನ ಪರವಹಿಸಿ ಮಾತಾಡಿ ಬೀರಪ್ಪನ ಬಾಯಿ ಮುಚ್ಚಿಸುತ್ತಿದ್ದ. ಈ ವಿಷಯ ತಿಳಿದ ಕುಲಕರ್ಣಿ, ಶರಣಪ್ಪಗೌಡ, ಶಂಕ್ರಪ್ಪಗೌಡ ಪರಿಸ್ಥಿತಿಯ ಲಾಭ ಪಡೆಯುತ್ತಾರೆ. ಊರ ಪ್ರಮುಖರ ಜಗಳಕ್ಕೆ ದಾಳವಾಗುವ ಬೀರಪ್ಪ ಮತ್ತು ಕುಂಟಶಂಕ್ರೆವ್ವರ ಕೌಟುಂಬಿಕ ವಿಚಾರ ಅವರ ಜೀವನವನ್ನು ನಾಶ ಮಾಡುತ್ತದೆ. ಈ ಕಾರಣ ಬೀರಪ್ಪನ ಕೊಲೆಯಾಗುತ್ತದೆ. ಇನ್ನಾವುದೊ ಜಗಳದಲ್ಲಿ ಬೆಳ್ಯಾನನ್ನು ಮೋಸದಿಂದ ಜೈಲಿಗೆ ಹಾಕಲಾಗುತ್ತದೆ. ಇದೆಲ್ಲದರಿಂದ ನೊಂದ ಮಾಳವ್ವ ಕೊನೆಯುಸಿರೆಳೆಯುತ್ತಾಳೆ. ಒಬ್ಬಂಟಿಗಳಾದ ಬಸಮ್ಮನ ಮೇಲೆ ಸಂಬಂಧಿಕನೇ ಆಗಿದ್ದ ಸಂಗ್ಯಾ ಅತ್ಯಾಚಾರ ಮಾಡುತ್ತಾನೆ. ಆಕೆಯನ್ನು ತನ್ನ ಕಾಮುಕತನಕ್ಕೆ ಬಳಸಿಕೊಳ್ಳುತ್ತಲೇ ಬರುವ ಸಂಗ್ಯಾನ ದ್ರೋಹ ಜೈಲಿನಿಂದ ಹೊರಬಂದ ಬೆಳ್ಯಾನಿಗೆ ತಿಳಿಯುತ್ತದೆ. ಆತನಿಗೆ ಹುಟ್ಟಿದ ಮಗುವಿಗೆ ತಂದೆಯಾಗಿ ತನ್ನಂತೆ ತಬ್ಬಲಿಯಾಗಿದ್ದ ಬಸಮ್ಮನ ಜೀವನವನ್ನು ಬೆಳ್ಯಾ ನೋಡಿಕೊಳ್ಳುತ್ತಾನೆ. ಇನ್ನೇನು ಅವರ ಜೀವನ ಸರಿಯಾಗಿ ಸಾಗಿರುವಾಗ ಕರಿಹರಿಯುವುದನ್ನು ಮಗುವಿನೊಂದಿಗೆ ನೋಡುತ್ತಾ ನಿಂತಿದ್ದ ಬಸಮ್ಮನನ್ನು ಮಗು ಸಮೇತ ಶಾಮರಾಯಗೌಡನ ಆಳುಮಕ್ಕಳು ಹೊತ್ತುಕೊಂಡು ಹೋಗುತ್ತಾರೆ. ಮತ್ತೆ ಫ್ಯೂಡಲ್‌ಗಳ ಜಗಳದಲ್ಲೆ ಇವರ ಬದುಕು ವಿನಾಶವಾಗುತ್ತದೆ. ಇಡೀ ಸಂಸಾರದಿಂದಲೇ ದೂರಾಗಬೇಕೆಂದು ನಿರ್ಧರಿಸಿದ ಬೆಳ್ಯಾ, ಗೌಡನ ಹಿಡಿತದಿಂದ ಪಾರಾಗಿ ಬಂದ ಹೆಂಡತಿಯೊಂದಿಗೆ ಸಂಸಾರ ಮಾಡದೆ ದೂರ ಹೋಗಬೇಕೆಂದು ನಿರ್ಧರಿಸುತ್ತಾನೆ. ತನ್ನಿಂದ ತಿಳಿದೂ ತಿಳಿದು ಕುಲಕರ್ಣಿ ಮಗಳೊಂದಿಗೆ ಜರುಗಿದ ಅನೈತಿಕ ಸಂಬಂಧವನ್ನು ನೆನೆದು ತನಗೆ ತಾನೆ ವ್ಯಥೆ ಪಡುತ್ತಾನೆ. ಬಸಮ್ಮನ ಬಗೆಗಿನ ಪ್ರೀತಿ, ಹಿರಿಯರು ಆತನ ಬಗ್ಗೆ ಇಟ್ಟಿದ್ದ ನಂಬಿಕೆಯ ಕಾರಣ ಬೆಳ್ಯಾ ಮನೆಗೆ ಹಿಂತಿರುಗುತ್ತಾನೆ. ತನ್ನ ಹಾಗೂ ಅನ್ಯ ಸಮುದಾಯದವರಿಂದ ಉಂಟಾದ ಶೋಷಣೆಯನ್ನು ಅನುಭವಿಸಿ ನರಳಿದ ಇಲ್ಲಿನ ಮುಗ್ಧ ಬದುಕು ಮತ್ತೆ ಬಾಳಲು ನಿರ್ಧರಿಸುವುದು ಅದರ ಜೀವನ ಪ್ರೀತಿಯನ್ನೇ ತಿಳಿಸುತ್ತದೆ.

### ಪ್ರಕೃತಿ ಮನುಷ್ಯ ಸಂಬಂಧದ ಮೂಲಕ ಸಮುದಾಯಗಳ ಸಂವೇದನೆಯ ಅಭಿವ್ಯಕ್ತಿ

ಸಂವೇದನೆಯೊಂದರ ಅಭಿವ್ಯಕ್ತಿಗೆ ಪ್ರಕೃತಿ ವ್ಯಾಪಾರವನ್ನು ಬಳಸಿಕೊಳ್ಳುವುದು ಒಂದು ಕ್ರಮ. ಇದರಂತೆ ಪ್ರಕೃತಿ ವ್ಯಾಪಾರದಲ್ಲಿ ಮನುಷ್ಯ ಬದುಕಿನ ಭಾವನೆಗಳನ್ನು ಕಂಡುಕೊಳ್ಳುವುದು ಸಾಧ್ಯವೆಂಬುದು

ಕಥನ ಸಾಹಿತ್ಯದ ಬರವಣಿಗೆಯಲ್ಲಿ ಕಂಡುಬರುತ್ತದೆ. ಪ್ರಕೃತಿ ಮತ್ತು ಮನುಷ್ಯ ಸಂಬಂಧದಲ್ಲಿ ಅವಿನಾಭಾವದ ಅನನ್ಯ ರೂಪವಿದೆ. ಪ್ರಕೃತಿಯು ಮನುಷ್ಯ ಬದುಕಿಗೆ ಗಟ್ಟಿತನ, ಸಂತೋಷ, ದುಃಖ, ಆವೇಷ, ಕ್ರೌರ್ಯ ಭಯ, ವಿನಾಶ, ಸರಸ ಯಾವೆಲ್ಲ ಭಾವಗಳನ್ನು ತನ್ಮೂಲಕ ಪ್ರವಹಿಸುವ ಶಕ್ತಿಯನ್ನು ಪಡೆದಿರುತ್ತದೆ. ಪ್ರಕೃತಿಯ ವಿದ್ಯಮಾನಗಳಲ್ಲಿ ಮನುಷ್ಯ ಕಂಡುಕೊಳ್ಳಬಹುದಾದ ಭಾವನೆಗಳನ್ನು ಗ್ರಹಿಸಿ ಅದನ್ನು ಬದುಕಿಗೆ ಅನ್ವಯಿಸುವಂತೆ ವರ್ಣಿಸುವ ಕಾರ್ಯ ಬರಿ ಕಾವ್ಯಕ್ಕೆ ಸೀಮಿತವಾದುದ್ದಲ್ಲ. ಪ್ರಕೃತಿಯ ಭವ್ಯತೆಯೆದುರು ಕುಬ್ಜಗೊಳ್ಳುವ ಮನುಷ್ಯನ ಬದುಕು, ಹಾಗೆಯೇ ಪ್ರಕೃತಿ ವ್ಯಾಪಾರದಲ್ಲಿ ದಿವ್ಯಶಕ್ತಿಯನ್ನು ಪಡೆದು ಬದುಕಿಗೆ ಅಣಿಯಾಗುವ ಮನುಷ್ಯನ ಚೈತನ್ಯ ಎಲ್ಲವನ್ನೂ ಕಾವ್ಯದಂತೆ ಕಥನ ಸಾಹಿತ್ಯವೂ ಅಭಿವ್ಯಕ್ತಿಸುತ್ತಿದೆ. ಕಥನ ಶೈಲಿಯಲ್ಲಿ ಕಂಡುಬರುವ ಪ್ರಕೃತಿಯ ವರ್ಣನೆ ಪ್ರಾದೇಶಿಕತೆಯನ್ನು, ಭೌಗೋಳಿಕ ವಿಶಿಷ್ಟತೆಗಳನ್ನು ತಿಳಿಸುತ್ತದೆ. ತನ್ನ ಅನುಭವಕ್ಕೆ ದಕ್ಕುವ ಪ್ರಕೃತಿಯ ವಿದ್ಯಮಾನಗಳ ಮೂಲಕ ಮನುಷ್ಯ ಬದುಕಿನ ಸಂವೇದನೆಗಳನ್ನು ತಿಳಿಯುವುದು ಇಲ್ಲವೆ ಮುಂದಿನ ಬದುಕಿಗೆ ಅಗತ್ಯವಾದ ಸೂಕ್ಷ್ಮತೆಗಳನ್ನು ಅರಿಯುವುದು ಬರವಣಿಗೆಯ ಆಚೆಗೂ ಸಾಧ್ಯವಿದೆ. ಆದರೆ ಇವುಗಳ ಸೂಕ್ತ ಸಂಯೋಜನೆಯನ್ನು ಕಥನ ಸಾಹಿತ್ಯದ ಸಂವೇದನೆಗಳ ವಿಭಿನ್ನ ಅಭಿವ್ಯಕ್ತಿಗೆ ಬಳಸಿಕೊಳ್ಳುವುದು ಸಾಹಿತ್ಯದ ಕಲಾತ್ಮಕತೆಯನ್ನು ತಿಳಿಸುತ್ತದೆ.

ನವೋದಯ ಸಂದರ್ಭದಲ್ಲಿ ಕುವೆಂಪು, ಕಾರಂತರ ಕಾದಂಬರಿಗಳು ಪ್ರಕೃತಿ ವರ್ಣನೆಯ ಮೂಲಕ ಶಕ್ತಿಯುತವಾದವು. ಪಾಶ್ಚಾತ್ಯ ಸಾಹಿತ್ಯದ ಪ್ರಭಾವ ಇವರ ದರ್ಶನಾತ್ಮಕ ನೆಲೆಯ ಪ್ರಾಕೃತಿಕ ವರ್ಣನೆಯ ಹಿಂದಿನ ಪ್ರೇರಕ ಶಕ್ತಿಯಾಗಿದ್ದರೂ ಸ್ಫೂರ್ತಿ ನೀಡಿದ ಪ್ರಕೃತಿ ಮಲೆನಾಡಿನದೆ, "ನಮ್ಮಲ್ಲಿ ನಮ್ಮವರ ಜೀವನವನ್ನು ಸರಸವಾಗಿ, ಹೃದಯ ವಿದ್ರಾವಕವಾಗಿ, ವಿವರವಾಗಿ, ಉತ್ತಮ ಕಲಾಪೂರ್ಣವಾಗಿ ಚಿತ್ರಿಸಿರುವ ಕಾದಂಬರಿಗಳು ಬಹಳ ಕಡಿಮೆ. ಸೊನ್ನೆ ಎಂದರೂ ಎನ್ನಬಹುದು. ಟಾಲ್‌ಸ್ಟಾಯ್, ಥಾಮಸ್ ಹಾರ್ಡಿ, ವಿಕ್ಟರ್ ಹ್ಯಾಗೋ ಮೊದಲಾದವರ ಕಾದಂಬರಿಗಳನ್ನು ನೆನೆದಾಗಲೆಲ್ಲ ಕನ್ನಡದಲ್ಲಿಯೇ ಅಂತಹ ಕಾದಂಬರಿಗಳು ಎಂದು ಹುಟ್ಟುತ್ತವೆಯೋ ಎಂದು ನನ್ನೆದೆ ಉತ್ಕಂಠಿತವಾಗುತ್ತದೆ" (ಕುವೆಂಪು; ೧೯೬೧; ಪುಟ ೩೯). ಪಾಶ್ಚಾತ್ಯ ಸಾಹಿತ್ಯ ಕುವೆಂಪುರವರನ್ನು ಪ್ರಭಾವಿಸುವ ಮಟ್ಟದ ಓದು ಅವರಿಗೆ ಸಾಧ್ಯವಾಗಿತ್ತು. ಇಂತಹ ಪಾಶ್ಚಾತ್ಯ ಪ್ರೇರಣೆಗೆ ಅಭಾವ ಹೊಂದಿರುವ ಹೈದರಾಬಾದ್ ಕರ್ನಾಟಕದ ಬರಹಗಾರರಲ್ಲಿ ಪ್ರಕೃತಿಯ ವರ್ಣನೆ ವಿಶಿಷ್ಟವಾಗಿದೆ. ಪ್ರಾದೇಶಿಕವಾಗಿ ವಿಶಿಷ್ಟ ಪ್ರಾಕೃತಿಕ ಸನ್ನಿವೇಶಗಳನ್ನು ತಿಳಿಸುತ್ತದೆ.

ಹೈದರಾಬಾದ್ ಕರ್ನಾಟಕದ ಆರಂಭ ಘಟ್ಟದ ಕಥನ ಸಾಹಿತ್ಯದಲ್ಲಿ ಮನುಷ್ಯ ಬದುಕಿನ ಭಾವನೆಗಳ ಅಭಿವ್ಯಕ್ತಿಗೆ ಪ್ರಕೃತಿಯ ವ್ಯಾಪಾರವನ್ನು ಅಷ್ಟಾಗಿ ಬಳಸಿಕೊಂಡಿಲ್ಲ. 'ಸಣ್ಣಗೌಡಸಾನಿ' (ಶಾಂತರಸ) ಕಾದಂಬರಿಯಲ್ಲಿ ಇಂತಹ ಪ್ರಾಕೃತಿಕ ಚಿತ್ರಣ ಕಥನದಲ್ಲಿ ಕಂಡುಬಂದಿಲ್ಲ. 'ಸುಳಿಗಾಳಿ', 'ಹಾಲುಜೇನು' (ಜಯತೀರ್ಥ ರಾಜಪುರೋಹಿತ) ಕಾದಂಬರಿಗಳಲ್ಲಿ ಅಲ್ಲಲ್ಲಿ ಪ್ರಕೃತಿಯ ಬಗೆಗೆ ಕೆಲ ವಿವರಗಳು ಸಿಗುತ್ತವೆಯೇ ವಿನಹ ಅದನ್ನು ಮನುಷ್ಯ ಸಂವೇದನೆಗೆ ಪೂರಕವಾಗುವಂತಹ ಇಲ್ಲವೆ ದರ್ಶನಾತ್ಮಕ

ನೆಲೆಯಲ್ಲಿ ಚಿತ್ರಿಸಲಾಗಿಲ್ಲ. ಇಂತಹ ಮಿತಿಗಳೇ ಈ ಪ್ರದೇಶದ ಕಥನದ ವಿಶಿಷ್ಟತೆಯನ್ನು ತಿಳಿಸುತ್ತವೆ. ಅನ್ಯಸಾಹಿತ್ಯಿಕ ಓದು, ಪ್ರೇರಣೆಯಂತಹ ಅವಕಾಶಗಳ ಶೂನ್ಯತೆಯಲ್ಲಿಯಾದರೂ ಇವು ಪ್ರಾದೇಶಿಕತೆಯನ್ನು ತೆರೆದಿಡುತ್ತವೆ. ತಮ್ಮದೇ ಆದ ದಾಟಿಯಲ್ಲಿ ಇಲ್ಲಿನ ಬದುಕನ್ನು ತೆರೆದಿಡಲು ಪ್ರಯತ್ನಿಸಿವೆ.

'ಬೆಳ್ಯಾ' (ಚೆನ್ನಣ್ಣ ವಾಲೀಕಾರ) ಕಾದಂಬರಿಯಲ್ಲಿ ಬರುವ ಕಾಗಿಣ ಹೊಳಿ ಜೀವನದಲ್ಲಿ ಜಿಗುಪ್ಸೆ ಹೊಂದಿದ್ದ ಬೆಳ್ಯಾನಲ್ಲಿ ಜೀವ ಚೈತನ್ಯ ತುಂಬಿರುತ್ತದೆ. ಅಂತಹ ನದಿಯನ್ನು ಬಿಟ್ಟು ಬಂದಂತೆನಿಸಿದಾಗ ಬೆಳ್ಯಾ ತನ್ನ ಬದುಕಿಗೆ ಜೀವಚೈತನ್ಯ ತಂದುಕೊಂಡನು. ನೆಲಕ್ಕೆ ಜೀವಶಕ್ತಿಯನ್ನು ತುಂಬುವ ಹೊಳೆ ಇಲ್ಲಿ ಬದುಕಿಗೂ ಜೀವಚೈತನ್ಯವನ್ನು ತುಂಬುವ ಮಹಾನದಿಯಂತೆ ಕಂಡುಬರುತ್ತದೆ.

ಗೀತಾ ನಾಗಭೂಷಣ ಅವರ ಬರಹದಲ್ಲಿ ಪ್ರಕೃತಿ ಚಿತ್ರಣ ಬೆರೆತಿದೆ. ಸಂಭವಿಸುವ ಘಟನೆಯ ಮುನ್ಸೂಚಕಗಳೆಂಬಂತೆ ಪ್ರಕೃತಿ ಚಿತ್ರಣವನ್ನು 'ಬದುಕು' ಕಾದಂಬರಿಯಲ್ಲಿ ನೀಡುತ್ತಾರೆ. ಸೂರ್ಯನ ಉದಯ ಅಸ್ತಗಳ ನಡುವಿನ ಮನುಷ್ಯ ಬದುಕಿನ ಚಟುವಟಿಕೆಗಳನ್ನು ತಿಳಿಸುತ್ತಾರೆ. ಕಾಶಿ ಗೌಡನ ಮಗನನ್ನು ಪ್ರೀತಿಸಿದ್ದಕ್ಕಾಗಿ ಅದರಿಂದುಂಟಾದ ಕೆಟ್ಟ ಹೆಸರಿನಿಂದಾಗಿ ಮಲ್ಲಪ್ಪ ಜರ್ಜರಿತನಾಗಿದ್ದ. ಕಾಶಿಯನ್ನು ಪಟ್ಟಣದಲ್ಲಿದ್ದ ಆಕೆಯ ಅಕ್ಕ ಹಾಗೂ ಮಾವ ಹಾಲಪ್ಪನಿಗೆ ಒಪ್ಪಿಸಿ ಆಕೆಯನ್ನು ತಿದ್ದುವಂತೆ ಮಲ್ಲಪ್ಪ ಕೇಳುತ್ತಾನೆ. "ಕಸವು ಕಳೆದುಕೊಂಡ ಬಿಸಿಲು ಮೆತ್ತಗಾಗುತ್ತಿತ್ತು. ಸಿಂದಿ ಕುಡಿದವನಂತೆ ಸೂರ್ಯ ಮಾರಿ ಕೆಂಪಗೆ ಮಾಡಿಕೊಂಡು ಝೋಲಿ ಹೊಡೆಯುತ್ತ ಮೆಲ್ಲಗೆ ಪಡುವಣ ದಿಕ್ಕಿನ ಕಡೆಗೆ ನಡೆದಿದ್ದ" (ಗೀತಾ ನಾಗಭೂಷಣ; ೨೦೦೧; ಪುಟ : ೨೧೨). ಮುಪ್ಪಿನೆಡೆಗೆ ಸರಿಯುತ್ತಿದ್ದ ಮಲ್ಲಪ್ಪನ ಜೀವನ ಯಾವುದೊ ಅವ್ಯಕ್ತ ಮತ್ತಿನಲ್ಲಿ ಕ್ಷಣ ನೆಮ್ಮದಿಗೆ ಸರಿಯುವುದನ್ನು ಇದು ತಿಳಿಸುತ್ತದೆ. ಆದರೆ ಇಡಿಯಾದ ಕಥನದ ಸಾರವನ್ನೇ ಒಳಗೊಂಡ ಪ್ರಕೃತಿಯ ವರ್ಣನೆ ಇಲ್ಲಿ ಕಂಡುಬರುವುದಿಲ್ಲ. ಕಾದಂಬರಿಯ ಉದ್ದಕ್ಕೂ ಇಂತಹ ಹಗಲು-ರಾತ್ರಿಯ ವರ್ಣನೆ ಬದುಕಿನ ಏರಿಳಿತಗಳೊಂದಿಗೆ ಕಂಡುಬರುತ್ತದೆ.

'ಕುಡಾಲ ಕಾಡು ಸೋಸಿದ' (ಕುಂ. ವೀರಭದ್ರಪ್ಪ) ಕತೆಯಲ್ಲಿ ಕಂಡುಬರುವ ಪ್ರಾಕೃತಿಕ ವರ್ಣನೆ ಇಡೀ ಕತೆಯ ಸ್ವರೂಪವನ್ನೇ ತೆರೆದಿಡುತ್ತದೆ. ಸಿದ್ಧಪ್ಪನೆಂಬ ಚೇರಮನ್ನು ವಸಾಹತೀಕರಣದ ವ್ಯಾಪಾರಿ ಮನೋಭಾವವನ್ನು ರೂಪಿಸಿಕೊಂಡಿದ್ದ. ಕಾಡು ಸೋಸಿ ಹೆಣ ತೆಗೆಯುವ ವಿಷಯದಲ್ಲಿ ಒಂಟಿ ಮಲ್ಲಜ್ಜ ಹಾಗೂ ಶಿವಪೂಜೆ ಗೌಡರಲ್ಲಿದ್ದ ಭಿನ್ನಾಭಿಪ್ರಾಯಗಳನ್ನು ದೂರ ಮಾಡಿದ ಸಿದ್ಧಪ್ಪ ಕಾಡು ಸೋಸಲು ಕುಡಾಲನೆಂಬ ನಿರ್ಗತಿಕನ ಮನಸ್ಥಿತಿಯನ್ನು ಗಟ್ಟಿಗೊಳಿಸಿದ. ಕೆಳವರ್ಗದ ಬಡವರ ಹಸಿವನ್ನು ಬಂಡವಾಳವಾಗಿಸಿಕೊಂಡ ಸಿದ್ಧಪ್ಪ, ಒಂಟಿ ಮಲ್ಲಜ್ಜ, ಶಿವಪೂಜೆಗೌಡ ಎಲ್ಲರೂ ಶೋಷಕರೆ. ಇವರ ಶೋಷಣೆಯ ಕಾವು ತನ್ನ ಬದುಕಿಗೆ ತಂದೊಡ್ಡಿದ ಅಪಾಯವನ್ನು ಕುಡಾಲ ಅನುಭವಿಸುತ್ತಾನೆ.

"ಉರಿವುರಿವ ಸೂರ್ಯನ ಕಡೆಯಿಂದ ಕೀಚಗುಟ್ಟುತ್ತ ಹಾರಿ ಬಂದ ರಣಹದ್ದುಗಳು ಎಮ್ಮೆಯ ಗರ್ಭದಿಂದ ಎಳೆಗರುವನ್ನು ಹೊರ ಎಳೆಯುತ್ತಿದ್ದ ನಾಯಿಗಳ ಮೇಲೆ ನೇರಧಾಳಿ ಆರಂಭಿಸಿದವು. ಬಲಿಷ್ಠ ನಾಯಿಗಳಿಗೂ, ದೈತ್ಯ ಹದ್ದುಗಳಿಗೂ ಜಟಾಪಟಿ ಗಂಡಾಗುಂಡಿ ನಡೆಯಿತು. ಅವು ಗೆಲ್ಲಲ್ಲೂ ಇಲ್ಲ,

ಸೋಲಲೂ ಇಲ್ಲ. ಅವುಗಳ ನಡುವೆ ಒಪ್ಪಂದ ಏರ್ಪಟ್ಟಿತು. ಅವು ಎಲ್ಲ ಒಟ್ಟಾಗಿ ಏರಿ ಪಕ್ಕೆಲುಬುಗಳಲ್ಲಿ ಇರುಕಿದ್ದ ಕರುವನ್ನು ಹೊರ ಎಳೆಯುವಲ್ಲಿ ಯಶಸ್ವಿಯಾದವು. ಅಷ್ಟೇ ಅಲ್ಲದೆ, ನೋಡು ನೋಡುವಷ್ಟರಲ್ಲಿ ಆ ಕಳೇಬರವನ್ನು ಇರಕೊಂಡು ತಿಂದು ಮುಗಿಸಿದವು. ಅವುಗಳ ದೃಷ್ಟಿ ಬಿತ್ತು ಅಂದರೆ ಏಳುತ್ತಿದ್ದ ಅಂದರೆ ಏಳುತ್ತಿತ್ತು. ಅಂದರೆ ಬೀಳುತ್ತಿದ್ದ ಹಸುವಿನ ಕಡೆ ಹರಿಯಿತು. ಸುತ್ತ ನೆರೆದವು. ಮತ್ತೊಮ್ಮೆ ಕುಸಿದು ಏಳಬೇಕೆನ್ನುವಷ್ಟರಲ್ಲಿ ಗಬಕ್ಕನೆ ಮುತ್ತಿದವು. ಮೂರು ನಾಯಿಗಳು ಅದರ ಮುಖಕ್ಕೆ ಒಂದು ಕಣ್ಣು ಎಳೆದರೆ ಮತ್ತೊಂದು ಕಚ್ಚಿ ಎಳೆದದ್ದು ಅವರ ನಾಲಿಗೆಯನ್ನು. ಹೀಗೆ ಚಣಾರ್ಥದಲ್ಲಿ ಅದೂ ಖಾಲಿಯಾಗಿ ಬಿಟ್ಟಿತು. ನಿರಂತರ ಬಿಸಿಲಿನ ವಸಾಹತಿನಲ್ಲಿ ನಾಯಿ ಹದ್ದುಗಳೇ ಸರ್ವಾಧಿಕಾರಿಗಳು. ತಮಗಿಂಥದೊಂದು ಛಾನ್ಸು ಕೊಟ್ಟಿರುವ ಸೂರ್ಯಪರಮಾತುಮನ ಕಡೆ ಮುಖಮಾಡಿ ತಮ್ಮದೇ ಆದ ರೀತಿಯಲ್ಲಿ ಊಳಿಟ್ಟು ಅಭಿನಂದಿಸಿದವು. ಅವುಗಳ ಅಭಿನಂದನೆಗೆ ನಿಜಕ್ಕೂ ಅರ್ಹನಾಗಿದ್ದ ಸೂರ್ಯ ದಿಗ್ಭ್ರಮೆಗೊಂಡಿದ್ದ ಕುಡಾಲನ ಕಡೆ ನೋಡಿ ಕಣ್ಣು ಮಿಟುಕಿಸಿದ. ಚಾಣಾಕ್ಷ ನಾಯಿಗಳು ಅರ್ಥಮಾಡಿ ಕೊಂಡವು. ಬೊಗಳುತ್ತ ಅವನತ್ತ ಧಾವಿಸಿದ್ದವು" (ಕುಂ. ವೀರಭದ್ರ; ೨೦೦೪; ಪುಟ : ೭೬, ೭೭). ಪ್ರಕೃತಿಯೊಳಗೆ ಮನುಷ್ಯ ಬದುಕಿನ ಮೇಲೆ ನಡೆಯುವ ಶೋಷಣೆಯನ್ನು ಹಾಗೂ ಅದನ್ನು ಅನುಭವಿಸುವ ಅಸಹಾಯಕ ಪರಿಸ್ಥಿತಿಯನ್ನು ಗುರುತಿಸಲಾಗುತ್ತದೆ.

ಅಮರೇಶ ನುಗಡೋಣಿಯವರ ಬರವಣಿಗೆಯ ಶೈಲಿಯಲ್ಲಿಯೂ ಪ್ರಾಕೃತಿಕ ಸನ್ನಿವೇಶಗಳ ಮೂಲಕ ಮನುಷ್ಯ ಬದುಕಿನ ಸಂವೇದನೆಗಳು ಅಭಿವ್ಯಕ್ತಗೊಂಡಿರುವುದು ಕಂಡುಬರುತ್ತದೆ. 'ಹೊತ್ತು ಮೂಡುವ ಸಮಯ' (ಅಮರೇಶ ನುಗಡೋಣಿ) ಕತೆಯಲ್ಲಿ ಅಕ್ಕಮ್ಮನ ಬದುಕು ಒಂದು ನಿರ್ಣಾಯಕ ಸ್ಥಿತಿಗೆ ಬರುವುದನ್ನು ಇಲ್ಲಿನ ಒಂದು ಸನ್ನಿವೇಶ ಕಟ್ಟಿಕೊಡುತ್ತದೆ. "...ಮಾಳಿಗೆ ಏರಿ ಬಂದಳು ಅಕ್ಕಮ್ಮ. ಬೆಳದಿಂಗಳೇನೋ ಇತ್ತು. ಆದರೆ ಆಕಾಶ ತುಂಬ ಅಲ್ಲಲ್ಲಿ ಕರಿ ಮೋಡಗಳು ತುಂಬಿದ್ದವು. ಒಳಗಿನಿಂದ ಹೊರಗೆ ಬಂದಾಗ ಸೆಕೆಯಿಂದ ತೊಯ್ದ ಮೈಮನಸ್ಸು ಗಾಳಿಗೆ ಹಿತವೆನಿಸಿತು" (ಅಮರೇಶ ನುಗಡೋಣಿ; ೧೯೯೧; ಪುಟ ೫೪). ವ್ಯವಸ್ಥೆಯ ಇಕ್ಕಟ್ಟಿನಿಂದ ಹೊರಬಂದ ಆಕೆಯ ಮೈಮನಸ್ಸು ಯಾವುದೋ ನಿರ್ಧಾರದಿಂದ ಸಂತೋಷಪಡುತ್ತದೆ. ಸೂಕ್ಷ್ಮವಾಗಿ ತಿಳಿದುಬರುವ ಈ ಸಂಗತಿಯು ಕಥನಕ್ಕೆ ನೈಜತೆಯನ್ನು ಕೊಡುತ್ತದೆ. 'ತಮಂಧದ ಕೇಡು' (ಅಮರೇಶ ನುಗಡೋಣಿ) ಕತೆಯಲ್ಲಿ ಇಡೀ ತನ್ನ ಬದುಕೇ ಉಳ್ಳವರ ಬದುಕಿಗೆ ಉಪಯೋಗವಾಗುವ ವಸ್ತುವಾಗಿರುವುದನ್ನು ಅರಿತು ತನ್ನ ಬದುಕಿಗೆ ತಾನೇ ಅತ್ತ ದುರುಗನ ಕಣ್ಣೀರು ಲೋಕಕ್ಕೆ ತಿಳಿಯದೆ ಹೋಗುತ್ತದೆ. ದುರಗನ ಬದುಕಿಗಾದ ಅನ್ಯಾಯವನ್ನು ಪ್ರತಿನಿಧಿಸುವ ರೀತಿ ಗೌಡನ ಹೊಸ ಬಂಡಿ ಪೂಜೆ ಮಾಡುವ ಸಂದರ್ಭದಲ್ಲಿ ಕಂಡು ಬರುತ್ತದೆ. ತನ್ನ ಬದುಕಿಗೆ ಉಸಿರಾಗಿದ್ದ, ನೆನಪಿನಂಗಳದಲ್ಲಿ ಉಳಿದಿದ್ದ ಹೆಂಡತಿಯ ಕಣ್ಣಾಸರೆಯಲ್ಲಿ ಬೆಳೆದಿದ್ದ ದುರಗಪ್ಪನ ಮನೆಯಂಗಳದಲ್ಲಿ ಬೆಳೆದಿದ್ದ ಎರಡು ಮರಗಳನ್ನು ಗೌಡ ಕಡಿಸುತ್ತಾನೆ. "ರಸೂಲಸಾಬು ಮರಗಳ ಸಾವಿರಾರು ತುಂಡುಗಳನ್ನು ಲಾರಿಯಲ್ಲಿ ಸಾಗಿಸಿಕೊಂಡು ಹೋಗಿ, ಆರು ತಿಂಗಳ ಮ್ಯಾಲೆ ಎರಡು ಎತ್ತಿನ ಬಂಡಿಗಳನ್ನೆ. ಜತಿಗೆ ಕೂರಿಗೆ, ಕುಂಬಿ, ಮಡಿಕೆ, ಸಣ್ಣಪುಟ್ಟ ಗಳೇವುದ ಸಾಮಾನುಗಳನ್ನು ಬಿಗುದು

ಲಾರಿಯಲ್ಲಿ ಹೇರಿಕೊಂಡು ತಂದು ಶಾಂತಗೌಡನ ಮನೆ ಮುಂದ ಕುಂದ್ರಿಸಿದ. ಊರು ಕೇರಿ ಮೊದಲು ಮಾಡಿ, ಪಶುಪಕ್ಷಿ ಕಡೆಯಾಗಿ ನಿಂತು ನೋಡಿ ಬೆರಗಾಗಿ ಕಣ್ಣು ತುಂಬ ತುಂಬಿಕೊಂಡವು. ಶಾಂತಗೌಡ ಒಂದು ಬಂಡಿಯನ್ನು ತನ್ನ ಅಕ್ಕ ರುದ್ರಮ್ಮನಿಗೆ ಕಳಿಸಿದ. ಬಸ್ವನ ಜಯಂತಿಗೆ ದುರುಗನೇ ಬಂಡಿನ್ನ ತೊಳೆದು ಇಬತ್ತಿ ಹಚ್ಚಿ, ಕುಂಕಮದ ಬೊಟ್ಟಿಟ್ಟು, ಊದಿನಕಡ್ಡಿ ಬೆಳಗಿ, ತೆಂಗಿನಕಾಯಿ ಒಡೆದು, ನೈವೇದ್ಯ ಹಿಡಿದು ಸಣ ಮಾಡಲು ಬಗ್ಗಿ, ಸಣ ಮಾಡಿ ಅಂಗೇ ಬಂಡಿಗೆ ಹಣೆಹಚ್ಚಿ ದುಕ್ಕಿಸಿದ್ದುದು ನರ ಮನುಷ್ಯರಿಗೆ ಗೊತ್ತಾಗಲಿಲ್ಲ? (ಅಮರೇಶ ನುಗಡೋಣಿ; ೨೦೦೮; ಪುಟ ೬). ದುರುಗನ ಬದುಕು, ಮರದ ಪರಿಸ್ಥಿತಿ ಎರಡಲ್ಲದ ಒಂದೇ ಭಾವದ ಅಭಿವ್ಯಕ್ತಿಗಳಾಗಿವೆ.

'ಲೂಟಿ' (ಬಿ.ಟಿ. ಲಲಿತಾ ನಾಯಕ್) ಕತೆಯಲ್ಲಿ ರಾಮಿ ಧೈರ್ಯವಂತಳು. ಎಷ್ಟೇ ಧೈರ್ಯ ವಂತಾಳದರೂ ಸಾಮಾಜಿಕ ವ್ಯವಸ್ಥೆಯೆಂಬ ದಟ್ಟ ಅರಣ್ಯದಲ್ಲಿ ಎದುರಾಗುವ ಕ್ರೂರ ಮೃಗಗಳೆಂಬ ಪುರುಷರ ದಬ್ಬಾಳಿಕೆಯಿಂದ ಪಾರಾಗಲು ಸಾಧ್ಯವಾಗುವುದಿಲ್ಲ. ಭಯ ಹುಟ್ಟಿಸುವ ದಟ್ಟ ಅರಣ್ಯದಲ್ಲಿ ಕಾಡುಮೃಗಗಳು ಇರುವುದನ್ನರಿತು ಸಹ ರಾಮಿ ಕೊಡಲಿ ಕೈಯಲ್ಲಿಡಿದು ಮುನ್ನುಗ್ಗುತ್ತಾಳೆ. ಅದು ಆಕೆಗೆ ಅನಿವಾರ್ಯವಾಗಿದ್ದ ಪರಿಸ್ಥಿತಿ. ದಟ್ಟಡವಿಯಲ್ಲಿ ಸಿಕ್ಕ ಕಟ್ಟಿಗೆಯಿಂದ ಸಂತೋಷಪಡುತ್ತಾಳೆ. ಆದರೆ ಕರಡಿ ಆಕೆಯನ್ನು ಅಟ್ಟಿಸಿಕೊಂಡು ಬರುತ್ತದೆ. ದಾರಿ ಹೋಕನ ಸಹಾಯದಿಂದ ಆಕೆ ವಿಷಮ ಪರಿಸ್ಥಿತಿಯಿಂದ ಪಾರಾಗುತ್ತಾಳೆ. ಕಾಡು ಪ್ರಾಣಿಗಳಿಂದ ಪಾರಾದರೂ ಕಾಮುಕ ಪುರುಷರಿಂದ ಪಾರಾಗಲು ಸಾಧ್ಯವಾಗದ ಆಕೆಯ ಅಸಹಾಯಕ ಪರಿಸ್ಥಿತಿಯನ್ನು ಪ್ರಾಣಿಗಳಿಗಿಂತ ಕ್ರೂರವಾದ ಸಮಾಜವನ್ನು ಲೇಖಕಿ ತೆರೆದಿಡುತ್ತಾಳೆ.

ಇಂತಹ ಪ್ರಾಕೃತಿ ಅಂಶಗಳು ಬೇರೆ ಬೇರೆ ಪ್ರದೇಶಗಳಲ್ಲಿ ಕಂಡು ಬರುತ್ತವೆ. ಹುಟ್ಟುವ ಸೂರ್ಯ, ಬೆಳಂದಿಗಳು ಎಲ್ಲಾ ಪ್ರದೇಶದಲ್ಲಿಯೂ ಕಂಡು ಬರುವ ಪ್ರಾಕೃತಿಕ ಅಂಶಗಳು. ಆದರೆ ಅವುಗಳನ್ನು ಆಶಯಕ್ಕೆ ಅನುಗುಣವಾಗಿ ಬಳಸಿಕೊಂಡ ಕಲಾತ್ಮಕತೆ ಇಲ್ಲಿನ ಕಥನ ಸಾಹಿತ್ಯದಲ್ಲಿದೆ.

### ಬರಗಾಲ ಮತ್ತು ವಿವಿಧ ಸಂವೇದನೆಗಳು

ಭೌಗೋಳಿಕವಾಗಿ ಪ್ರತಿಯೊಂದು ಪ್ರದೇಶ ತನ್ನದೇ ಆದ ವಿಶಿಷ್ಟತೆಯನ್ನು ಪಡೆದಿರುತ್ತದೆ. 'ಬರಗಾಲ'ವನ್ನು ಈ ಪ್ರದೇಶದ ಭೌಗೋಳಿಕ ವಿಶಿಷ್ಟತೆಯೆಂದು ನೋವಿನಿಂದಲೆ ಒಪ್ಪಬೇಕಾದ ಸ್ಥಿತಿ ಹೈದರಾಬಾದ್ ಕರ್ನಾಟಕದ ಜನತೆಗಿದೆ. ಮನುಷ್ಯ ಪ್ರಯತ್ನಗಳಿಂದ ತಡೆಯಾಲಗದ ಈ ಪ್ರಾಕೃತಿಕ ವಿಕೋಪಗಳನ್ನು ಸಮುದಾಯಗಳ ನೆಲೆಯಿಂದ ನೋಡಬೇಕಿದೆ. ಭೌಗೋಳಿಕವಾಗಿ ಕಂಡು ಬರುವ ಬಿಸಿಲು, ಬರಗಾಲದ ಸಂದರ್ಭಗಳ ಪರಿಣಾಮದ ಹಿನ್ನೆಲೆಯಲ್ಲಿ ಜಾತಿ, ಅಂತಸ್ತು, ಲಿಂಗವನ್ನಾಧರಿಸಿ ಬೇರೆ ಬೇರೆ ಪರಿಣಾಮಗಳನ್ನುಂಟುಮಾಡುವುದಿಲ್ಲ. ಆದರೆ ಇಂತಹ ಪ್ರಾಕೃತಿಕ ವೈಪರಿತ್ಯಗಳಿಂದ ಪ್ರದೇಶದಲ್ಲಿ ಉಂಟಾಗುವ ಬಿಕ್ಕಟ್ಟನ್ನು ಎದುರಿಸುವ ಶಕ್ತಿ ಜನರಲ್ಲಿ ವಿಭಿನ್ನವಾಗಿರುತ್ತದೆ. ಸ್ಥಿತಿವಂತರು, ಮಧ್ಯಮವರ್ಗದವರು, ನಿರ್ಗತಿಕರು, ತಳಸಮುದಾಯದವರು ಹೀಗೆ ಬೇರೆ ಬೇರೆ ನೆಲೆಯಲ್ಲಿ ಜನರು ಈ ಪರಿಸ್ಥಿತಿಯನ್ನು ಮೀರಲು ಪ್ರಯತ್ನಿಸುವುದು ಕಥನ ಸಾಹಿತ್ಯದಲ್ಲಿ ಕಂಡುಬರುತ್ತದೆ.

'ಸಾವು ಸತ್ತಾಗ' (ಶಾಂತರಸ) ಕತೆಯಲ್ಲಿ ಬರಗಾಲದ ಭೀಕರತೆ ಕಂಡು ಬರುತ್ತದೆ. ಜನ ಊರುಬಿಟ್ಟು ಗುಳೇ ಹೊರಟಿದ್ದರು. ಈರಣ್ಣ ತನ್ನ ತಮ್ಮ ಅತನ ಹೆಂಡತಿ ಮಕ್ಕಳನ್ನು ಕಳುಹಿಸಿಕೊಟ್ಟಿದ್ದ. ಭೂಪ ಎಂಬ ಎತ್ತಿನೊಂದಿಗೆ ಈರಣ್ಣ ಉಳಿದಿದ್ದ. ಈರಣ್ಣ ಮತ್ತು ರಷೀದ ಇಬ್ಬರೂ ಬರಗಾಲದಿಂದ ಉಂಟಾದ ಪರಿಸ್ಥಿತಿಗೆ ತತ್ತರಿಸುತ್ತಿದ್ದ ಜನರಿಗೆ ನ್ಯಾಯ ಕೊಡಿಸಲು ಮುಂದಾಗಿದ್ದರು. ಜನರನ್ನು ಒಟ್ಟುಗೂಡಿಸಿ ಸರ್ಕಾರದಿಂದ ಪರಿಹಾರ ಕೇಳಬೇಕೆಂದು ಈರಣ್ಣ-ರಷೀದ ಇಬ್ಬರೂ ಗೌಡರಿಗೆ ಎಂ.ಪಿ ಮತ್ತು ಎಂ.ಎಲ್.ಎ.ಗಳಿಗೆ ಈ ಸುದ್ದಿ ಮುಟ್ಟಿಸಿರೆಂದು ಕೇಳಿಕೊಂಡರು. ಆದರೆ ಅವರು ಈ ಮಾತುಗಳಿಗೆ ನಿರ್ಲಿಪ್ತರಾಗಿ ಉಳಿದರು. ಎಂ.ಪಿ. ಈ ವಿಷಯವನ್ನು ಎಂ.ಎಲ್.ಎ.ಗೆ ತಿಳಿಸುವೆನೆಂದು ಹೋದರು ಬೇಗ ಪರಿಹಾರ ಸಿಗಲಿಲ್ಲ. ಬರಗಾಲದ ಕಾಮಗಾರಿ ಆರಂಭವಾಗುತ್ತದೆಂಬ ಆಶ್ವಾಸನೆಗಳಿದ್ದವೆ ಹೊರತು ಯಾವ ಬದಲಾವಣೆಗಳು ಕಂಡುಬರಲಿಲ್ಲ. ಮಂತ್ರಿಗಳು ಬಂದಾಗ ಲಂಬಾಣಿ ಹೆಂಗಸರು ಕುಣಿದು ಅವರ ಮನಸ್ಸಿಗೆ ಸಂತೋಷ ನೀಡಬೇಕೆಂದು ಹೇಳಿದ ತಹಸೀಲ್ದಾರನ ಕ್ರೂರ ವರ್ತನೆಯನ್ನು ಈರಣ್ಣ ಮತ್ತು ರಷೀದ ನಯವಾಗಿ ವಿರೋಧಿಸುತ್ತಾರೆ. ಡೊಳ್ಳಿನ ಜನ ಮಂತ್ರಿ ಎದುರು ಡೊಳ್ಳು ಬಾರಿಸಲಾಗದೆ ಕುಸಿಯುತ್ತಾರೆ. ಲಂಬಾಣಿ-ಗಂಡು-ಹೆಣ್ಣುಗಳು ಬರಗಾಲ ಸಂದಭವಿಸಿದ ಎಷ್ಟೋ ದಿನದ ಮೇಲೆ ಬಂದ ಮಂತ್ರಿಯನ್ನು ಕುಕ್ಕುವಂತೆ ಹಾಡು ಹೇಳುತ್ತಾರೆ.

ಮಂತ್ರಿಗಳು ಎಂ.ಪಿ, ತಹಸೀಲ್ದಾರ, ಗೌಡ ಮತ್ತಿತರರು ಐಬಿಯಲ್ಲಿ ತಿಂದು ಮಜಾ ಮಾಡುತ್ತಾರೆ. ಕಾರ್ಯಕ್ರಮದಲ್ಲಿ ಘೋಷಿಸಿದಂತೆ ಬೆಟ್ಟಪ್ಪ ಮತ್ತು ಗೋವಿಂದಪ್ಪ ತಮ್ಮ ಹಗೆವು ತೆಗಿಸಿ ಜ್ವಾಳ ಕೊಡಲಿಲ್ಲ. ಇದರಿಂದ ಕುಪಿತರಾದ ರಷೀದ ಮತ್ತು ಈರಣ್ಣ ಜನರನ್ನು ಕಟ್ಟಿಕೊಂಡು ಹಗೆವು ತೆಗೆದು ಜ್ವಾಳ ಹಂಚಬೇಕೆನ್ನುವಷ್ಟರಲ್ಲಿ ಪೋಲಿಸರಿಗೆ ಬಲಿಯಾಗುತ್ತಾರೆ. ಹಸಿವು ಜೊತೆಗೆ ಪೋಲಿಸರ ಹೊಡೆತಗಳಿಂದ ಜನಸಾಮಾನ್ಯರು ತತ್ತರಿಸಿ ಹೋಗುತ್ತಾರೆ. ರಷೀದ ಊರು ಬಿಟ್ಟು ಹೋಗುತ್ತಾನೆ. ಈರಣ್ಣ ತನ್ನ ಭೂಪ ಎತ್ತನ್ನು ಕಟುಕರಿಗೆ ಮಾರಿಕೊಳ್ಳದೆ ಅಡವಿಗೆ ಬಿಟ್ಟು ಬಂದಿರುತ್ತಾನೆ. ಆದರೆ ಭೂಪ ಮತ್ತೆ ಬಂದು ಈರಣ್ಣನ ಮನೆ ಸೇರುತ್ತದೆ. ಸಾಯಬೇಕೆಂದು ಯೋಚಿಸಿದ್ದ ಈರಣ್ಣ ಬದುಕಿನ ಬಗ್ಗೆ ಪ್ರೀತಿ ತಂದುಕೊಂಡದ್ದು ಪವಾಡದಂತೆಯೇ ಕಂಡುಬರುತ್ತದೆ.

'ಯಾತನಾ ಶಿಬಿರ' (ಚಂದ್ರಕಾಂತ ಕುಸನೂರು) ಕಾದಂಬರಿಯಲ್ಲಿಯೂ ಚಂದನಕೇರಿ ಎಂಬ ಊರು ಭೀಕರ ಬರಗಾಲ ಹಾಗೂ ಕ್ಷಾಮಕ್ಕೆ ತುತ್ತಾಗುತ್ತದೆ. ಊರಿನಲ್ಲಿ ದೀಕ್ಷಿತರ ಹಾಗೂ ಬಸವಂತಗೌಡರ ಮನೆತನಗಳನ್ನು ಹೊರತುಪಡಿಸಿ ಉಳಿದಂತೆ ಎಲ್ಲರೂ ರೈತಾಪಿ ಜನರು, ದಿನಗೂಲಿಗೆ ಹೋಗುವವರೇ ಆಗಿದ್ದಾರೆ. ಆಸ್ತಿ ಇಲ್ಲದ ದುಡಿದುಣ್ಣುವ ಜನ ಊರುಬಿಟ್ಟು ಹೋಗುತ್ತಾರೆ. ಜಮೀನು, ಮನೆ, ದನಕರುಗಳಿದ್ದವರು ಊರು ಬಿಡಲಾಗದೆ, ಅಲ್ಲೆ ಉಳಿಯಲಾಗದೆ ನರಳುತ್ತಾರೆ. ಸ್ಥಿತಿವಂತರಾದ ಕೃಷ್ಣಾ ದೀಕ್ಷಿತ ಹಾಗೂ ಬಸವಂತಗೌಡರು ಬರಗಾಲವನ್ನು ತಾಳಿಕೊಳ್ಳುವ ಪರಿಸ್ಥಿತಿಯನ್ನು ಹೊಂದಿದ್ದರು. ಆದರೆ ಬರಗಾಲ ಮತ್ತು ಪ್ಲೇಗ ರೋಗ ಎರಡೂ ಸೇರಿದ ಮೇಲೆ ದಿನೇ ದಿನೇ ಊರು

ಸ್ಮಶಾನವಾಗತೊಡಗಿತು. ಗೌಡನ ಮನೆಯವರು ಬರಗಾಲ ಪ್ಲೇಗಿನ ಭಯಕ್ಕೆ ಊರುಬಿಟ್ಟು ಹೋಗುತ್ತಾರೆ. ಮುಲ್ಲಾಸಾಬನ ಇಡೀ ಸಂಸಾರ ದಿಕ್ಕು ದೆಸೆ ಇಲ್ಲದೆ ಊರುಬಿಟ್ಟು ಹೊರಡುತ್ತದೆ. ಎತ್ತಿನಗಾಡಿಯಲ್ಲಿ ಕುಳಿತು ಹೋಗುತ್ತಿದ್ದ ಈ ಕುಟುಂಬದ ಪಯಣ ಗುರಿಯಿಲ್ಲದೆ, ನಿತ್ರಾಣವಾಗಿ ಮಂದಗತಿಯಲ್ಲಿ ಊರುಬಿಟ್ಟಿತು.

ಜನರನ್ನು ಊರುಬಿಟ್ಟು ಹೋಗದಂತೆ ತಡೆದು ನಿಲ್ಲಿಸಲು ಪ್ರಯತ್ನಿಸುತ್ತಿದ್ದ ದೀಕ್ಷಿತ ತನ್ನ ಪ್ರಯತ್ನದಿಂದ ಹಿಂತೆಗೆಯುವುದಿಲ್ಲ. ತನ್ನ ಹೆಂಡತಿಯನ್ನು ಕಳೆದುಕೊಂಡರೂ ಊರಲ್ಲೇ ಉಳಿಯುತ್ತಾನೆ. ಸಂಭವಿಸಬಹುದಾದ ಎಲ್ಲಾ ದುರ್ಘಟನೆಗಳು ಘಟಿಸಿದ ಮೇಲೆ ಬರುವ ಸರಕಾರದ ಬರಗಾಲ ಪರಿಹಾರ ಕಾಮಗಾರಿಯಲ್ಲಿಯೂ ಇಲ್ಲಿನ ಜನರಿಗೆ ನ್ಯಾಯ ದೊರಕುವುದಿಲ್ಲ. ಬರಗಾಲ ಕಾಮಗಾರಿಕೆಯಲ್ಲಿ ದುಡಿದು ಅನ್ನ ಉಣ್ಣುವ ಗುಂಪಿಗೆ ದೀಕ್ಷಿತನು ಸೇರುತ್ತಾನೆ. ಆದರೆ ದೀಕ್ಷಿತನಿಗೆ ಕೆಲಸವೂ ಸಿಗುವುದಿಲ್ಲ. ಅನ್ನವೂ ಸಿಗುವುದಿಲ್ಲ. ಇಂತಹ ಬರಗಾಲದ ಪರಿಸ್ಥಿತಿ ರಾಜಕಾರಣಿಗಳಿಗೆ, ಪರಿಹಾರದ ಕಾಮಗಾರಿಕೆಯ ಉಸ್ತುವಾರಿ ಹೊತ್ತ ಸರಕಾರಿ ಅಧಿಕಾರಿಗಳಿಗೆ, ಟಿ.ವಿ. ಪತ್ರಿಕಾ ಮಾಧ್ಯಮಗಳಿಗೆ ವರವಾಗಿ ಪರಿಣಮಿಸುವುದು ವಾಸ್ತವದ ದುರಂತ.

ಲಿಂಗಬಸ್ಯ ಶಂಕ್ರವ್ವನ ಭಿಕ್ಷೆ ಬೇಡುವ ಅವಸ್ಥೆ ಕಂಡು ಮರುಗುತ್ತಾನೆ. 'ಅವನ ಕರೆ ಬರತನಕ ಬದುಕಿರಬೇಕು. ಭಿಕ್ಷಾ ಬೇಡಿಕೊಂತ ಕುಂತೀನಿ. ಅದು ಬಂತೂ ಅಂದ್ರಾಯ್ತು ನೋಡು, ಈ ಭಿಕ್ಷಾದ ಜೋಳ್ಗಿ, ಈ ಕೋಲು, ಆ ಶಿವನ ಕೈಯಾಗೇ ಕೊಟ್ಟು ನಾ ಪಾರ ಹೋಗಿ ಬಿಡ್ತೀನಿ. ಅಂವ ನಂಗ ಈಗ ಭಿಕ್ಷಾ ಬೇಡ್ಲಿಕ್ಕೆ ಹಚ್ಚ್ಯಾನ. ನಾ ಎಂದೆಂದೂ ಇಂಥಾ ಕೆಲ್ಸ ಮಾಡಿದಾಕ್ಯಲ್ಲ. ಈಗ ಅಂವ ನನ್ಗ ಈ ಪರಿಸ್ಥಿತಿ ತಂದಾನ. ತರ್ಲಿ ತರ್ಲಿ, ನೋಡ್ತೀನಿ. ನಾನೂ, ತಾನ್ ಹುಟ್ಟಿಸಿದ್ದ ಮಕ್ಕಳಿಗಿ ಭಿಕ್ಷಾ ಬೇಡಾಕ ಹಚ್ಯಾನ ಆ ಸೂಳಿಮಗಾ ...ಬರ್ಲಿ ಅವ್ನಿಗೇ ಭಿಕ್ಷಾ ಬೇಡಾಕ ಹಚ್ಚಿಲ್ಲಾಂದ್ರ ನನ್ನ ಹೆಸ್ರು ಶಂಕರಮ್ಮಲ್ಲಾಂತ ತಿಳಿ.... (ಚಂದ್ರಕಾಂತ ಕುಸನೂರ; ೧೯೭೫; ಪುಟ : ೬೭). ಸ್ವಾಭಿಮಾನವನ್ನು ಬಿಡಬೇಕಾದ ತನ್ನ ಅಸಹಾಯಕ ಪರಿಸ್ಥಿತಿಯ ಆಳದ ನೋವುನ್ನು ಶಂಕ್ರವ್ವ ಇಲ್ಲಿ ನುಡಿಯುತ್ತಾಳೆ. ಪ್ರಕೃತಿ ತಂದೊಡ್ಡಿದ ಅಸಹಾಯಕತೆಯನ್ನು ಮೀರಿ ನಿಲ್ಲುವ ಶಕ್ತಿಯನ್ನು ಶಂಕ್ರವ್ವ ಪಡೆದುಕೊಂಡಿದ್ದಾಳೆ. ಪ್ರಕೃತಿ ತಂದೊಡ್ಡಿದ ಪರಿಸ್ಥಿತಿಯಿಂದಲೇ ಗಟ್ಟಿಗೊಂಡಿದ್ದಾಳೆ. 'ನೀರು ಮತ್ತು ನೆತ್ತರು' (ಗೀತಾ ನಾಗಭೂಷಣ) ಕತೆಯಲ್ಲಿ ಬರಗಾಲದಿಂದ ಜನ ಬದುಕುವ ಅಸಹನೀಯವಾಗುತ್ತದೆ. ಜನರು ಹಾಗೂ ದನಕರುಗಳು ಕುಡಿಯಲು ನೀರಿಲ್ಲದಂತಾಗಿ ಪರಿತಪಿಸುತ್ತಾರೆ. ಕೇರಿಯಲ್ಲಿದ್ದ ಬಾವಿ ಬತ್ತಿ ಹೋದಾಗ ಕೇರಿಯ ಜನರು ಆತಂಕಕ್ಕೀಡಾಗುತ್ತಾರೆ. ಕೆಳವರ್ಗದ ಜನ ಮಠದ ನೀರು ಪಡೆಯಲು ಪ್ರಯತ್ನಿಸುತ್ತಾರೆ. ಮೇಲ್ವರ್ಗದವರು ಹಾಗೂ ಮಠದ ಸ್ವಾಮಿಗಳ ಕೆಳವರ್ಗದವರ ಬೇಡಿಕೆಯನ್ನು ಒಪ್ಪಿಕೊಳ್ಳುವುದಿಲ್ಲ. ಕೆಳವರ್ಗದವರೆಲ್ಲ ಒಂದಾಗಿ ಮಠದಿಂದ ನೀರು ತರಬೇಕೆನ್ನುವ ಒಪ್ಪಂದ ಮಾಡಿಕೊಳ್ಳುತ್ತಾರೆ. ರಾತ್ರಿ ಮಠದಿಂದ ಕೇರಿಯ ಜನ ನೀರು ತೆಗೆದುಕೊಂಡು ಹೋಗುತ್ತಾರೆ. ಇದರ ಪರಿಣಾಮ ಈ ಕಾರ್ಯಕ್ಕಾಗಿ ಮುಖಂಡತ್ವ ವಹಿಸಿದ್ದ ಕೇರಿಯ ನಿಂಗನ ಕೊಲೆಯಾಗುತ್ತದೆ. ಮೇಲ್ವರ್ಗದವರ ಬಾವಿಯನ್ನು ಮುಟ್ಟಿದ್ದಕ್ಕೆ ರಕ್ತಕಾರಿ ಸತ್ತ

ಎಂದು ಹೇಳಿ ಆದ ಅನ್ಯಾಯಗಳನ್ನು ಮುಚ್ಚಿಹಾಕುತ್ತಾರೆ. ಭೌಗೋಳಿಕ ವೈಪರೀತ್ಯಗಳು ಕೆಳವರ್ಗವನ್ನು ನೋವಿಗೆ ಈಡುಮಾಡಬೇಕೆಂದು ಸಂಭವಿಸುವುದಿಲ್ಲ. ಜಾತಿ ಕೇಂದ್ರಿತ ಶ್ರೇಷ್ಠತೆಯನ್ನು ಕಾಯ್ದುಕೊಳ್ಳ ಬಯಸುವ ಮೇಲ್ವರ್ಗದವರಿಗೆ ಧರ್ಮ ಅನ್ಯಾಯಗಳನ್ನು ಎಸೆಗುವ ಅಸ್ತ್ರವಾಗುತ್ತಿರುವುದು ದುರಂತದ ಸಂಗತಿ.

ಭೌಗೋಳಿಕವಾಗಿ ಕಂಡುಬರುವ ಈ ಬರಗಾಲಕ್ಕಿಂತ ಮನುಷ್ಯರಲ್ಲಿ ಮಾನವೀಯತೆಯ ಬರಗಾಲವಿರುವುದನ್ನು ಸರಕಾರಿ ಅಧಿಕಾರಿಗಳ ವರ್ತನೆ ಸೂಚಿಸುತ್ತದೆ. ಸಾಮೂಹಿಕ ಸಹಕಾರ, ಸೂಕ್ತ ರೀತಿಯ ಸರಕಾರದ ನೆರವಿನಿಂದ ಪ್ರಾಕೃತಿಕ ವಿಕೋಪಗಳನ್ನು ಮೀರಿ ನಿಲ್ಲುವುದು ಕಷ್ಟದ ಕೆಲಸವಾಗಲಾರದು. ಆದರೆ ಇಂತಹ ಉದಾತ್ತ ಭಾವನೆಗಳಿಲ್ಲದ ಮನುಷ್ಯರ ಸ್ವಾರ್ಥದಿಂದಲೇ ಬದುಕು ಅಸಹನೀಯ ವಾಗುತ್ತಿರುವುದು ಇಲ್ಲಿ ತಿಳಿದು ಬರುತ್ತದೆ. ಪ್ರಕೃತಿಯು ತಂದೊಡ್ಡಿದ ವಿಷಮ ಪರಿಸ್ಥಿತಿಯು ಕೃಷ್ಣಾ ದೀಕ್ಷಿತನನ್ನು ಹಾಗೂ ಈತನಿಗೆ ತದ್ವಿರುದ್ಧವಾದ ಸ್ವಾರ್ಥ ಅಧಿಕಾರಿಗಳನ್ನು ಪರಿಚಯಿಸುತ್ತದೆ.

ಪ್ರಾದೇಶಿಕ ವೈಶಿಷ್ಟ್ಯಗಳು ಮನುಷ್ಯ ಬದುಕಿನ ಸಂವೇದನೆಯೊಂದಿಗೆ ಪ್ರಾಮುಖ್ಯತೆಯನ್ನು ಪಡೆಯುತ್ತವೆ. ಮನುಷ್ಯ ಹಾಗೂ ಪ್ರಕೃತಿಯೊಂದಿಗಿನ ಅವಿನಾಭಾವ ಸಂಬಂಧ ಕಥನ ಸಾಹಿತ್ಯದಲ್ಲಿ ಕಲಾತ್ಮಕವಾಗಿ ರೂಪುಗೊಂಡಿದೆ. ಇದು ಕೇವಲ ಹೈದರಾಬಾದ್ ಕರ್ನಾಟಕದ ಕಥನ ಸಾಹಿತ್ಯದಲ್ಲಿ ಕಂಡುಬರುವ ವಿಷಯವಾಗಿರದೆ ಪ್ರದೇಶದಾಚೆಗಿನ ಕಥನ ಸಾಹಿತ್ಯದಲ್ಲಿಯೂ ಕಂಡುಬಂದಿರುವಂತಹ ವಿಚಾರ. ಪ್ರದೇಶಕ್ಕನುಗುಣವಾಗಿ ಭಿನ್ನವಾಗಿರುವ ಭೌಗೋಳಿಕತೆ, ಮನುಷ್ಯ ಬದುಕು ಸ್ಥಿತ್ಯಂತರಗೊಳ್ಳುವ ಕಾಲಘಟ್ಟದೊಂದಿಗೆ ಬದಲಾವಣೆಗಳಿಗೆ ತೆರೆದುಕೊಳ್ಳುತ್ತಲೇ ಸಾಗಿದೆ. ಪ್ರಾದೇಶಿಕ ವೈಶಿಷ್ಟ್ಯಗಳನ್ನು ಮುನ್ನೆಲೆಗೆ ತರುವಿಕೆ, ಅವುಗಳ ವಿಸ್ಮೃತಿಗೆ ಆತಂಕಗೊಳ್ಳುವಿಕೆ ಎಲ್ಲವನ್ನೂ ಮನುಷ್ಯ ಬದುಕಿನಲ್ಲಾಗುತ್ತಿರುವ ಬದಲಾವಣೆಗಳಿಗೆ ಅನುಗುಣವಾಗಿಯೇ ತಿಳಿಯುವುದು ಸಾಧ್ಯವಿದೆ. ಒಂದು ವಿಶಿಷ್ಟ ಸಮುದಾಯದಲ್ಲಿ ಪರಿಚಿತ ವಲಯಕ್ಕೆ ಬರದಿರುವ ಎಷ್ಟೋ ವಿಚಾರಗಳನ್ನು ಕಥನಸಾಹಿತ್ಯ ಮುನ್ನೆಲೆಗೆ ತರುತ್ತದೆ. ಮೇಲ್ವರ್ಗವೆಂಬ ಸಮುದಾಯಗಳಲ್ಲಿ ಇರುವ ಸಂಪ್ರದಾಯ, ಆಚರಣೆ, ನಂಬಿಕೆಗಳನ್ನು ಮುನ್ನೆಲೆಗೆ ತರುವುದು ಈಗಾಗಲೇ ಎಲ್ಲಾ ಪ್ರದೇಶದ ಕಥನ ಸಾಹಿತ್ಯದಲ್ಲಿ ಕಂಡುಬಂದಿರುತ್ತದೆ. ಪ್ರದೇಶಕ್ಕನುಗುಣವಾದ ಪ್ರಾಧಾನ್ಯತೆಯನ್ನು ಈ ಸಮುದಾಯದ ಬದುಕಿನ ರೀತಿ, ಆಚರಣೆಗಳು ಪಡೆದುಕೊಳ್ಳುತ್ತವೆ. ಮೇಲ್ವರ್ಗ ದಲ್ಲಿ ಮುನ್ನೆಲೆಗೆ ಬರದೆ ಇರುವ ವಿಚಾರಗಳನ್ನು ಕಥನಸಾಹಿತ್ಯ ತಿಳಿಸಿಕೊಡುತ್ತದೆ. ಪ್ರಾದೇಶಿಕವಾಗಿ ಯಜಮಾನ ಸ್ಥಾನ ಪಡೆದಿರುವ ಮೇಲ್ವರ್ಗದ ಫ್ಯೂಡಲ್ ವ್ಯವಸ್ಥೆಯ ಅನ್ಯಾಯಗಳು ಭಿನ್ನ ಸ್ವರೂಪದಲ್ಲಿ ಮುಂದುವರೆಯುತ್ತಲೇ ಇರುವುದು ಮಾತ್ರ ಬದಲಾಗದ ವಿಚಾರವಾಗಿದೆ.

ವಿಶಿಷ್ಟ ಸಮುದಾಯಗಳೆನಿಸಿದ ಜಾತಿಗಾರರ, ಪಾತ್ರದವರ ಬದುಕನ್ನು ಮುನ್ನೆಲೆಗೆ ತರುವ ಕಥನ ಸಾಹಿತ್ಯ ಅವುಗಳ ಭವಿಷ್ಯ ಬದುಕಿಗೆ ಸಂಬಂಧಿಸಿದಂತೆ ಅಳಿವು-ಉಳಿವಿನ ನಿರ್ಧಾರಕ ಅಂಶಗಳನ್ನು

ತಿಳಿಸಿಕೊಡುತ್ತದೆ. ಹಬ್ಬದ ಆಚರಣೆಗಳ ಹಿನ್ನೆಲೆಯಲ್ಲಿ ಕಂಡುಬರುವ ಸಾಮುದಾಯಿಕ ರೀತಿ-ನೀತಿಗಳು ಕಾಲಘಟ್ಟದ ಪರಿವರ್ತನೆಯಲ್ಲಿ ಬದಲಾಗುವ ಸಾಧ್ಯತೆಗಳಿವೆ. ವಿಶಿಷ್ಟ ಆಚರಣೆಗಳು ಮುಂದೊಂದು ದಿನ ಈ ಪ್ರದೇಶಕ್ಕೆ ಹಾಗೂ ಸ್ವತಃ ಆ ಸಮುದಾಯಕ್ಕೆ ಅಪರಿಚಿತವಾಗುವ ಅಪಾಯಗಳನ್ನು ಎದುರಿಸದೆ ಇರವು ಎಂದು ಹೇಳಲಾಗದು. ಇಲ್ಲಿ ಸಮುದಾಯದ ಆಚರಣೆಗಳನ್ನು ಅಂಧಶ್ರದ್ಧೆಯಿಂದ ಒಪ್ಪಿಕೊಂಡು ಉಳಿಸಿಕೊಳ್ಳಬೇಕೆಂಬ ಅಭಿಪ್ರಾಯವಿಲ್ಲ. ಪರಿಷ್ಕೃತ ರೂಪದಲ್ಲಿ ಅವುಗಳ ಮುಂದುವರಿಕೆ ಮನುಷ್ಯ ಬದುಕಿಗೆ ಅಪಾಯ ತರಲಾರದೆಂದು ತಿಳಿದುಕೊಳ್ಳಲಾಗಿದೆ.

ಗೌಡನ ಕ್ರೌರ್ಯ, ತಮ್ಮ ಹೆಂಡತಿಯರ ಶೀಲ ಹಾಳಾಗುತ್ತಿರುವುದನ್ನು ಕಂಡು ಕಾಣದಂತೆ ಬಾಯಿಸತ್ತವರಾದ ದಲಿತರನ್ನು ಹಾಗೂ ವಿರೋಧಿಸಿ ಅಸಹಾಯಕರಾದವರನ್ನು ಇಲ್ಲಿನ ಕಥನ ಸಾಹಿತ್ಯ ಬಿಂಬಿಸುತ್ತದೆ. ಕರಿ ಹರಿಯುವಲ್ಲಿ, ಹಂತೀಪದ ಹಾಡುವುದರಲ್ಲಿ ಗೌಡನ ಮನೆಯ ಜೀತವನ್ನು ಮೈಬಗ್ಗಿಸಿ ಒಪ್ಪಿಕೊಳ್ಳುವುದರಲ್ಲಿ ಇಂತವರು ಪಡೆದ ಚೈತನ್ಯ ಶೋಷಣೆಯನ್ನು ಹೀಗಳಿದಿದೆ. ಇವರು ತಮ್ಮವಲ್ಲದ ಮಕ್ಕಳ ಏಳಿಗೆಗೆ ಜೀವವನ್ನು ತೇಯ್ದವರು, ಹರಕೆಹೊತ್ತು, ದಿಂಡ ನಮಸ್ಕಾರ ಹಾಕಿ ಬಲಿ ಕೊಡುವಲ್ಲಿ ತಮ್ಮ ನೋವಿಗೆ ತಾವೇ ಸ್ಥೈರ್ಯ ತಂದುಕೊಂಡವರು. ಅನ್ಯರ ಹಬ್ಬಹರಿದಿನದ ಸಂಭ್ರಮವನ್ನು ಮೈಲಿಗೆಯಾಗಿಸದೆ ದೂರದಲ್ಲಿ ನಿಂತು ನೋಡಿ ಉಗುಳು ನುಂಗಿದವರು. ವಿಶೇಷ ಹಬ್ಬಗಳಾದ ಯುಗಾದಿ, ದಸರಾ, ದೀಪಾವಳಿ ಇತ್ಯಾದಿಗಳನ್ನು ಎಲ್ಲಾ ಸಮುದಾಯದವರು ಸಂಭ್ರಮದಿಂದ ಆಚರಿಸುತ್ತಾರೆ ಎನ್ನುವಲ್ಲಿ ಇಂತಹ ಸಮುದಾಯಗಳು ಮುಂದಿಡುವ ಪ್ರಶ್ನೆಗಳಿಗೆ ಉತ್ತರಿಸಲಾಗದು. ಒಂದು ಹೊತ್ತಿನ ಊಟದ ತೃಪ್ತಿಯನ್ನು ಹಬ್ಬದ ಸಂಭ್ರಮವೆಂದು ಭಾವಿಸುವ ಈ ಸಮುದಾಯಗಳ ಸಂವೇದನೆ ಯಾರ ಜಪ್ತಿಗೂ ಸಿಗುವಂತಹದ್ದಲ್ಲ. ಸತ್ತ ಎತ್ತಿಗೆ, ಉಳ್ಳವರ ಹೆಣ ಹೂತಾಗ ಸಿಗುವ ಇನಾಮಿನ ದುಡ್ಡಿಗೆ ಅಂಗಲಾಚಿ ಸೋತ ಇವರ ಕೈಗಳಿಗೆ ಸಂವೇದನೆಗಳನ್ನು ಬರೆಯುವುದೇ ನ್ಯಾಯವಾಗಲಾರದು. ಇಂತಹ ಸಂವೇದನೆಗಳನ್ನು ಕಥನ ಸಾಹಿತ್ಯದಲ್ಲಿ ಕಾಣಿಸಿ ವಾಸ್ತವದ ಜಾಗೃತಿಯನ್ನುಂಟು ಮಾಡುವ ಬರಹಗಾರರಿಗೆ ಇದರ ತುರ್ತು ಮನದಟ್ಟಾದದ್ದು ಕೇವಲ ಸೃಜನಶೀಲತೆಯ, ಕೃತಿ ಶ್ರೇಷ್ಠತೆಯ ಭ್ರಮೆಯಾಗದಿರಲಿ. ಪ್ರದೇಶದಲ್ಲಿ ಕಂಡುಬಂದ ಇಂತಹ ಸಮುದಾಯಗಳ ನಾಡಿಮಿಡಿತಗಳಿಗೆ ಜೀವಕಳೆಯನ್ನು ತುಂಬಿದ ಸಾರ್ಥಕತೆ ಮುಖ್ಯವಾದಾಗಲೇ ಇಂತಹ ಸಮುದಾಯಗಳ ಸಂವೇದನೆಯ ಅಭಿವ್ಯಕ್ತಿ ಅರ್ಥಪೂರ್ಣವಾಗುತ್ತದೆ.

**ಅಡಿಟಿಪ್ಪಣಿಗಳು**

೧. ಆಣೀ ಪೀಣೀ ಅಥವಾ ಅಂಟಿಗೆ-ಪಂಟಿಗೆ ಎಂಬ ಜನಪದ ಪ್ರದರ್ಶನ ಕಲೆಯ ಹಾಡಿನ ಕೊನೆಯಲ್ಲಿ ಈ ಮೇಲಿನ ಸಾಲು ಕಂಡು ಬರುತ್ತದೆ. "ಉತ್ತರ ಕರ್ನಾಟಕದ ಅಂಟಿಗೆ-ಪಂಟಿಗೆ ಮೇಳವು ಹಿರಿಯರಿಗೆ ಸೀಮಿತವಾದದ್ದು. ಹಿರಿಯರು ಮೇಳಕಟ್ಟಿಕೊಂಡು ಮನೆ ಮನೆಗೆ ಹೋಗಿ ಕಲಾ ಪ್ರದರ್ಶನ ಮಾಡಿ ಕಾಣಿಕೆ ಪಡೆಯುತ್ತಾರೆ. ಈ ಕಲೆ ಪ್ರದರ್ಶನಕ್ಕನುಗುಣವಾಗಿ ೨-೪-೫ ದಿನಗಳವರೆಗೆ ಆಚರಿಸಲ್ಪಡುತ್ತದೆ. ಅಂಟಿಗೆ-ಪಂಟಿಗೆಯಲ್ಲಿ ಹಾಡಿನ ಕೊನೆಗೆ 'ದೀಪ ದೀಪೋಳ್ಗೊ' ಎಂದು ಕೂಗಿದರೆ, ಉತ್ತರ ಕರ್ನಾಟಕದ ಪದ್ಯಗಳ ಕೊನೆಯಲ್ಲಿ ಅಣೀ ಪೀಣೀ ಜಾವಂತ್ರ್ಯೋ ನಮ್ಮ ಎತ್ಗೋಳ ಪೀಡಾ (ದನಗಳ) ಹೋಳಿ

ಆಚ್ಯಾಕೋ ಎಂದು ಕೂಗಿ ಮುಕ್ತಾಯ ಮಾಡುತ್ತಾರೆ (ಡಾ. ಎಚ್.ಟಿ. ಪೋತೆ; ೨೦೦೦; ಪುಟ ೧೦೪). ಕಾದಂಬರಿಯಲ್ಲಿ ಕಂಡುಬರುವ ದೀಪಾವಳಿ ಆಚರಣೆಯ ಪದ್ಧತಿಯಲ್ಲಿ ಈ ವಾಕ್ಯ ಕಂಡುಬರುವುದು. ಮೇಳದವರು ಬಂದು ಹೇಳುವ, ಇಲ್ಲವೇ ಮನೆಯ ಹಿರಿಯರೇ ಈ ರೀತಿ ಹೇಳಿಕೊಂಡು ದನಕರುಗಳಿಗೆ ಕೇಡಾಗದಿರಲೆಂದು ಆಶಿಸುವ ಎರಡೂ ಮಾದರಿಗಳು ಇರುವ ಸಾಧ್ಯತೆಗಳು ತಿಳಿದುಬರುತ್ತವೆ. ಈ ರೀತಿಯ ಭಿನ್ನತೆಗಳು ಸಮುದಾಯ, ಪ್ರದೇಶಗಳನ್ನಾಧರಿಸಿರುವುದು ಮುಖ್ಯ ಅಂಶವಾಗಿದೆ.

೨. ಕೋಲಂಬಗುಳ್ಳಿ : ವಿವರಿಸಲಾದ ದೀಪಾವಳಿ ಆಚರಣೆಯ ಪದ್ಧತಿಗಳಲ್ಲಿ ಕೋಲಂಬಗುಳ್ಳಿಯೂ ಒಂದು. ಪ್ರಾದೇಶಿಕ ವಿಶಿಷ್ಟತೆಯಾದ ಈ ಪದ್ಧತಿ. ನಿರ್ದಿಷ್ಟ ಪ್ರದೇಶದಲ್ಲಿಯೇ ಭಿನ್ನತೆಯನ್ನು ಪಡೆಯುವ ಸಾಧ್ಯತೆಯಿದೆ.

೩. ಕಂಬಾರರ 'ನವಿಲೇ ನವಿಲೇ' ಕಾವ್ಯವು ಈ ರೀತಿಯ ವಿವಾಹ ಬಾಹಿರ ಸಂಬಂಧದಿಂದ ಗೌಡತಿಯ ಬಂಜೆತನ ನೀಗುವುದನ್ನು ತಿಳಿಸುತ್ತದೆ. ನವಿಲಿನೊಂದಿಗೆ ಸಂಬಂಧ ಬೆಳೆಸುವುದನ್ನು ಗೌಡ ಮತ್ತು ಲೋಕ ಅನೈತಿಕವೆನ್ನುತ್ತದೆ. ಆದರೆ ಈ ಘಟನೆಗೆ ಬರಗಾಲ ಪೀಡಿತವಾಗಿದ್ದ ಊರಿಗೆ ಮಳೆ ಸುರಿಸುವ ಮೂಲಕ ಪ್ರಕೃತಿ ಹಾರೈಸುತ್ತದೆ. ಗೌಡನ ಮನೆತನದ ಉದ್ಧಾರ ಹಾಗೂ ಸಮಾಜಕ್ಕೆ ತನ್ನ ಸ್ತ್ರೀತನದ ಸಾಬೀತಿಗಾಗಿ ಈ ಕಾರ್ಯ ಗೌಡತಿಗೆ ಅನಿವಾರ್ಯವಾಗುತ್ತದೆ. ಕಾಮುಕತನ ಕೇಂದ್ರಿತವಲ್ಲದ ಈ ರೀತಿಯ ಸ್ವಾತಂತ್ರ್ಯ ಆಯ್ಕೆ ಸ್ತ್ರೀಗೆ ಇನ್ನೊಂದು ಬಗೆಯ ಶೋಷಣೆ, ಅಪಾಯವನ್ನೇ ಸೂಚಿಸುತ್ತದೆ. ಇಂತಹ ಬದುಕಿನ ಸಂದಿಗ್ಧಗಳನ್ನು ಪುರುಷ ನೆಲೆಯಿಂದ ಮಾನ್ಯ ಮಾಡುವ, ಸ್ತ್ರೀ ನೆಲೆಯಿಂದ ಹಾದರವೆನ್ನುವ ಅನ್ಯಾಯ ಒಪ್ಪಿತವಾದುದಲ್ಲ.

•••

# ಅಧ್ಯಾಯ ಐದು

# ಕಥನ ಸಾಹಿತ್ಯದಲ್ಲಿ ಸಾಂಸ್ಕೃತಿಕ ಸಂಘರ್ಷದ ಸ್ವರೂಪ

---

# ಅಧ್ಯಾಯ ಐದು

# ಕಥನ ಸಾಹಿತ್ಯದಲ್ಲಿ ಸಾಂಸ್ಕೃತಿಕ ಸಂಘರ್ಷದ ಸ್ವರೂಪ

ಮನುಷ್ಯ ಬದುಕಿನ ನಡೆ-ನುಡಿ(ಒಳಿತು-ಕೆಡಕು)ಯನ್ನು ಪ್ರತಿನಿಧಿಸುವ ಪದವೇ 'ಸಂಸ್ಕೃತಿ' ಸಂಘರ್ಷರಹಿತ ಸಂಸ್ಕೃತಿಯನ್ನು ಕಲ್ಪಿಸುವುದು ಮನುಷ್ಯ ಜೀವನದ ಜಡತ್ವವನ್ನೇ ತಿಳಿಸುತ್ತದೆ. ಸಂಸ್ಕೃತಿ ಕಾಲಘಟ್ಟದ ನಡೆಯಲ್ಲಿ ಬದಲಾವಣೆಗಳನ್ನು ಕಂಡುಕೊಳ್ಳುತ್ತಲೇ ಸಾಗಿದೆ. ಪ್ರದೇಶವು ವಿಶಿಷ್ಟ ಸಾಂಸ್ಕೃತಿಕ ಸಂಘರ್ಷವನ್ನು ತನ್ನೊಡಲೊಳಗೆ ಇಟ್ಟುಕೊಂಡೆ ಸಾಗಿರುತ್ತದೆ. ಸಾಂಸ್ಕೃತಿಕ ಸಂಘರ್ಷವೂ ಕೇವಲ ನಕಾರಾತ್ಮಕ ಅರ್ಥವನ್ನು ಹೊಂದಿರುವಂತಹದ್ದಲ್ಲ. ಸಕರಾತ್ಮಕವಾದ ಅರ್ಥವ್ಯಾಪ್ತಿಯನ್ನೂ ಪಡೆದು ಕೊಂಡಿರುವಂತಹದ್ದು. ಸಂಘರ್ಷ ನಿರ್ದಿಷ್ಟವಾದ ಸಮುದಾಯದ, ಬದುಕಿನ ನಂಬಿಕೆ, ಇತ್ಯಾದಿಗಳ ಅಂತ್ಯವನ್ನು ಮಾತ್ರವೇ ಸೂಚಿಸುವುದಿಲ್ಲ. ಸಾಂಸ್ಕೃತಿಕ ಸಂಘರ್ಷದಲ್ಲಿ ಅವನತಿ, ಉತ್ಕರ್ಷ, ಕಳೆದುಕೊಳ್ಳುವಿಕೆಯ ವಿರುದ್ಧದ ಹೋರಾಟ ಯಾವೆಲ್ಲ ಅರ್ಥಗಳನ್ನು ಪಡೆಯಲು ಸಾಧ್ಯವೋ ಆ ಎಲ್ಲ ನೆಲೆಗಳೂ ಸೇರಿವೆ.

'ಸಂಸ್ಕೃತಿ' ಎಂಬುದಕ್ಕೆ ಏಕಮುಖವಿಲ್ಲ. ಬಹುಮುಖದ ವಿಭಿನ್ನ, ವೈವಿಧ್ಯತೆಗಳಿರುವ ಸಂಸ್ಕೃತಿಯ ಯಾವುದೊ ಒಂದು ಭಾಗವನ್ನು ಸಂಸ್ಕೃತಿಯ ಒಟ್ಟಾರೆ ರೂಪವೆಂದು ಚರ್ಚಿಸಲಾಗದು. ಶಿಷ್ಟ ಜೀವನಕ್ಕೆ ಸಂಬಂಧಿಸಿದ ರೀತಿ-ನೀತಿಗಳೇ ಒಟ್ಟಾರೆ ಪ್ರದೇಶದ ಸಂಸ್ಕೃತಿಯನ್ನು ಬಿಂಬಿಸಲಾರವು. ಯಾವುದೋ ಒಂದು ಸಮುದಾಯದ ಹಿನ್ನೆಲೆಯಲ್ಲಿ ಸಂಸ್ಕೃತಿಯ ಏಳು-ಬೀಳುಗಳನ್ನು ಗುರುತಿಸುವ ಸೀಮಿತ ಚೌಕಟ್ಟು ಇಲ್ಲಿನದಲ್ಲ. ಮುನ್ನೆಲೆಗೆ ಬರಬಯಸುವ, ವಿಶಿಷ್ಟವಾದ ಸಾಂಸ್ಕೃತಿಕ ವಿಚಾರಗಳೆಲ್ಲವೂ ಇಲ್ಲಿ ಪ್ರಾಮುಖ್ಯತೆಯನ್ನು ಪಡೆಯುತ್ತವೆ. ಇಡೀ ಪ್ರದೇಶಕ್ಕೆ ಸಂಬಂಧಿಸಿದಂತೆ ಹಾಗೂ ಪ್ರದೇಶದ ಹೊರಗೆ ಸಂಸ್ಕೃತಿಯೊಂದರ ವಿನಾಶಕ್ಕೆ ಇಲ್ಲಿನ ಸಾಹಿತ್ಯ ಪ್ರತಿಕ್ರಿಯಿಸುತ್ತದೆ. ಮುಖ್ಯನೆಲೆಗೆ ಬರಬೇಕಾದಂತಹ ಕಡೆಗಣಿಸಲಾಗಿದ್ದ ಕೆಳವರ್ಗದ ಸಂಸ್ಕೃತಿಯಲ್ಲಿನ ಏಳುಬೀಳಿಗೂ ಇಲ್ಲಿನ ಕಥನ ಸಾಹಿತ್ಯದಲ್ಲಿ ಪ್ರಾಧಾನ್ಯತೆ ದೊರೆತಿದೆ. ಉನ್ನತ ವರ್ಗಕ್ಕೆ ಪ್ರತಿಯಾಗಿ ಪ್ರತಿಸಂಸ್ಕೃತಿಯನ್ನು ಕಟ್ಟಿಕೊಳ್ಳುವವರಲ್ಲಿ ಸಾಂಸ್ಕೃತಿಕ ಸಮಾನತೆಯ ಅಪೇಕ್ಷೆ ಇಲ್ಲವೆಂದು ಹೇಳಲಾಗದು. ಸಾಂಸ್ಕೃತಿಕ ಗುರುತಿಸಿಕೊಳ್ಳುವಿಕೆಗೆ ಹಾಗೂ ಸಂಸ್ಕೃತಿಕ

ಒಳಗೊಳ್ಳುವಿಕೆಗೆ ನಿರಂತರ ಒತ್ತಾಯಿಸುತ್ತಿರುವ ಕೆಳವರ್ಗದ ಅಪೇಕ್ಷೆಗಳು ಸಾಮಾಜಿಕ ಮುನ್ನೆಲೆಯನ್ನು ಸಾಧಿಸುವೆಡೆಗೆ ನಡೆದಿವೆ. ಅನನ್ಯತೆ ಸಾಧಿಸುತ್ತಿರುವ ಕೆಳವರ್ಗ ಹಾಗೂ ಪರಿಷ್ಕರಣೆಗೊಳ್ಳಬೇಕಾದ ಮೇಲ್ವರ್ಗದ ಸಾಂಸ್ಕೃತಿಕ ಬದುಕಿನ ಹಿತಾಸಕ್ತಿಗಳೆರಡೂ ಇಲ್ಲಿನ ಕಥನ ಸಾಹಿತ್ಯದಲ್ಲಿ ಕಂಡುಬರುತ್ತವೆ.

ಪ್ರಾದೇಶಿಕವಾಗಿ ವಿಸ್ಮೃತಿಗೆ ಸರಿಯುತ್ತಿರುವ ಸಾಂಸ್ಕೃತಿಕ ಅಂಶಗಳಿಗೆ ಸಂಬಂಧಿಸಿದಂತೆ ಈ ಎರಡೂ ಸಮುದಾಯಗಳ ಪ್ರತಿಕ್ರಿಯೆಗಳೂ ಪ್ರಧಾನವಾಗಿ ನಿಲ್ಲುತ್ತವೆ. ನವವಸಾಹತುಶಾಹಿ ಸಂದರ್ಭದಿಂದ ಕಂಡುಬರುತ್ತಿರುವ ಬದಲಾವಣೆಗಳಿಗೆ ಪ್ರಾದೇಶಿಕ ಹಿನ್ನೆಲೆಯಲ್ಲಿ ದೊರೆಯುತ್ತಿರುವ ಪ್ರತಿಕ್ರಿಯೆಗಳು ವಿಶಿಷ್ಟವಾಗಿವೆ. ಪ್ರಾದೇಶಿಕತೆಯ ಸೀಮಿತ ವಲಯದಿಂದ ವಸಾಹತೋತ್ತರ ಸಂದರ್ಭದ ಸಾಂಸ್ಕೃತಿಕ ಸಂಘರ್ಷವನ್ನು ಗ್ರಹಿಸಲಾಗುತ್ತಿದೆ ಎಂಬ ಅಭಿಪ್ರಾಯಗಳನ್ನು ಮೀರಿ ಬೇರೆ ಬೇರೆ ಪ್ರದೇಶಗಳಲ್ಲಿ ಕಂಡು ಬಂದ ಸಾಂಸ್ಕೃತಿಕ ಸಂಘರ್ಷದ ಅಧ್ಯಯನಕ್ಕೆ ಸಮಗ್ರತೆಯನ್ನು ತಂದುಕೊಡುವಲ್ಲಿ ಇಲ್ಲಿನ ಅಧ್ಯಯನವೂ ಮುಖ್ಯ ಸೇರ್ಪಡೆಯಾಗುತ್ತದೆ ಎಂದರೆ ತಪ್ಪಾಗದು.

'ಸಂಘರ್ಷ'ಕ್ಕೆ ಪ್ರೇರಿತರಾದವರು ಶಿಕ್ಷಿತರು ಮಾತ್ರವಲ್ಲ, ಶಿಕ್ಷಿತ ಹಾಗೂ ಅಶಿಕ್ಷಿತ ಪ್ರಜ್ಞಾವಂತರೆಲ್ಲರೂ ಪ್ರೇರಿತರಾಗಿ ಪ್ರಜ್ಞಾವಂತರು ಸಾಂಸ್ಕೃತಿಕವಾಗಿ ತರಬಯಸುವ ಬದಲಾವಣೆಗಳು ಪಾರಂಪರಿಕ ಆಲೋಚನೆಗಳನ್ನು ಪ್ರಶ್ನಿಸುತ್ತವೆ ಹಾಗೂ ಸಮಕಾಲೀನ ಹೊಸ ಆಲೋಚನೆಗಳಿಗೆ ಆಕಾರ ಕೊಡಬಯಸುತ್ತವೆ. ಈ ರೀತಿಯ ಸಂಘರ್ಷಕ್ಕೆ ಇಳಿಯುವವರು ಪಾರಂಪರಿಕ ಜಡತ್ವದಿಂದ ವಿರೋಧವನ್ನು ಎದುರಿಸುವ ಅಪಹಾಸ್ಯಕ್ಕೀಡಾಗುವ ಅಪಾಯಕ್ಕೆ ಒಳಗಾಗುತ್ತಾರೆ. ಶಿಕ್ಷಿತರಿಂದಲೇ ಕೆಲವೇಳೆ ಸಮುದಾಯಗಳ ಸಾಂಸ್ಕೃತಿಕ ಅನನ್ಯತೆಗಳು ನಾಶವಾಗುತ್ತಿರುವುದು ಇಂತಹ ವಿರೋಧದ ಕಾರಣಗಳಲ್ಲೊಂದಾಗುತ್ತದೆ. ತಮ್ಮ ಸಂಸ್ಕೃತಿಗೆ ವಿಮುಖರಾಗಿ ಬದುಕ ಬಯಸುವ ಶಿಕ್ಷಿತರಿಂದ ಕೆಲವೇಳೆ ಪ್ರಗತಿ ಕಂಡು ಬರುವುದಿಲ್ಲ. 'ಸಾಂಸ್ಕೃತಿಕ ಸಂಘರ್ಷ'ವೆಂಬುದು ಜವಾಬ್ದಾರಿಯುತವಾದ ಸಾಮಾಜಿಕ ವಿಮರ್ಶೆಗೆ ತೊಡಗುವಂತಹ ಪ್ರಕ್ರಿಯೆಯಾಗಿದೆ. ಇದರ ಉದ್ದೇಶವೂ ಪರಂಪರಾಗತ ಆಲೋಚನೆಗಳ ಪರಿಷ್ಕರಣೆ ಹಾಗೂ ಸಾಂಸ್ಕೃತಿಕ ಮುಂದುವರಿಕೆಯ ಹೊಸ ಮಾರ್ಗಗಳನ್ನು ಕಂಡುಕೊಳ್ಳುವುದೇ ಆಗಿದೆ.

### ೫.೧. ಮತೀಯ ಹಿನ್ನೆಲೆಯ ಸಾಂಸ್ಕೃತಿಕ ಸಂಘರ್ಷ

ಸಂಪ್ರದಾಯವನ್ನು ಒಪ್ಪಿಕೊಂಡ ಬದುಕು ಈ ಪ್ರದೇಶದ ಆರಂಭ ಘಟ್ಟದ ಕಥನದಲ್ಲಿ ಕಂಡು ಬರುತ್ತದೆ. ಮತೀಯ ಸೌಹಾರ್ದತೆಗಳು ಇದ್ದಂತೆ ತಾರತಮ್ಯಗಳು ಅಭಾದಿತವಾಗಿಯೇ ಉಳಿದುಕೊಂಡದ್ದು ಇಲ್ಲಿನ ಕಥನದಿಂದ ತಿಳಿದು ಬರುತ್ತದೆ ರಜಾಕಾರರ ಹಾವಳಿಯಂತಹ ಬಿಕ್ಕಟ್ಟಿನ ಸಂದರ್ಭಗಳಲ್ಲಿಯೂ ಕಂಡು ಬರುವ ಸೌಹಾರ್ದತೆ ಈ ನೆಲದ ವಿಶಿಷ್ಟ ಗುಣವಾಗಿದೆ. ಮದುವೆ ಮುಂಜಿಗೆ ಬ್ರಾಹ್ಮಣರಿಂದ ಮುಹೂರ್ತ ಕೇಳುವ ಮುಸ್ಲಿಂರು, ತಮ್ಮ ಜೀವನ ಭವಿಷ್ಯವನ್ನು ಜಂಗಮರಲ್ಲಿ ಕೇಳಿ ತಿಳಿಯುವ ಅಮೀನ ಸಾಹೇಬರು ಇರುವಂತೆ ಅಲಾವಿಕುಣಿತಕ್ಕೆ ಹೆಜ್ಜೆ ಹಾಕುವ ಹಿಂದೂಗಳೂ ಇದ್ದಾರೆ. ಮಸೀದಿಗಳಿಗೆ, ದರ್ಗಾಗಳಿಗೆ ಸಕ್ಕರೆ ಓದಿಸಿಕೊಂಡು ಬರುವವರಲ್ಲಿ ಹಿಂದೂಗಳು ಕಂಡು ಬರುತ್ತಾರೆ. 'ಹಾಲುಜೇನು'

(ಜಯತೀರ್ಥ ರಾಜಪುರೋಹಿತ) ಕಾದಂಬರಿಯಲ್ಲಿ ರಾಯಚೂರು ಜಿಲ್ಲೆಯಲ್ಲಿ ಪ್ರಸಿದ್ಧವಾಗಿದ್ದ ಮುದಗಲ್ ಮೊಹರಂ ಹಬ್ಬ ಸಾಂಸ್ಕೃತಿಕ ಸಾಮರಸ್ಯಕ್ಕೆ ನಿದರ್ಶನವಾಗುತ್ತದೆ. "ರಾತ್ರಿಯೆಲ್ಲ ಉರಿವ ಅಲಾವಿ ಕುಣಿಯ ಬೆಂಕಿಯಲ್ಲಿ ಹಾಗುವವರಲ್ಲಿ ಮುಜಾವರರಿಂದಾರಂಭಿಸಿ ವೀರಭದ್ರದೇವರ ಪೂಜಾರಿ ಶರಭಣ್ಣನನ್ನೂ ನೋಡಬಹುದು. ಅಲಂಗಳಿಗೆ ಸೆಹರಾ (ಹೂವಿನದಂಡಿ) ಹಾಕುವವರಲ್ಲಿ ಮೊದಲ ಗೌರವಗಳು ಅಲ್ಲಿಯ ದೇಸಾಯಿ ದೇಶಪಾಂಡೆ ಮನೆತನಗಳಿಗೆ" (ಜಯತೀರ್ಥ ರಾಜಪುರೋಹಿತ; ೧೯೬೭; ಪುಟ : ೧೦೪) ಸಲ್ಲುತ್ತವೆ. ಇದರಂತೆ ಹಿಂದೂ ದೈವಗಳಿಗೆ ನಡೆದುಕೊಳ್ಳುವ ಮುಸ್ಲಿಂ ಧರ್ಮೀಯರು ಇದ್ದಾರೆ. 'ಮಟದಯ್ಯ ಮತ್ತು ಧರ್ಮ' (ಗೀತಾ ನಾಗಭೂಷಣ) ಕತೆಯ ಖಾಸಿಮ ಮಠದ ಭಕ್ತನಾಗಿ ಅದಕ್ಕೆ ನಡೆದುಕೊಳ್ಳುವುದು ಈ ಭಾಗದಲ್ಲಿನ ಸೌಹಾರ್ದತೆಯನ್ನೇ ತಿಳಿಸುತ್ತದೆ. ರಜಾಕಾರರ ಹಾವಳಿಯಿಂದ ಕದಡಿದ ಇಲ್ಲಿನ ಸೌಹಾರ್ದಯುತ ಬದುಕು ಅನೇಕ ತಿರುವುಗಳನ್ನು ಪಡೆದುಕೊಂಡಿತು. ಕೆಳವರ್ಗದವರು ತಾತ್ಕಾಲಿಕ ಉದ್ದೇಶ ಸಾಧನೆಗೆ ಮತಾಂತರ ಹೊಂದಿದರು, ಈ ಕಾರಣಕ್ಕಾಗಿಯೇ ನವಮುಸಲ್ಮಾನರು ಅಥವಾ ಭಾಗವಾನರೆನಿಸಿಕೊಂಡರು. ಒತ್ತಾಯದ ಮತಾಂತರದಲ್ಲಿ ಹಿಂದೂ ಗಂಡಸರಿಗೆ 'ಸುಂತಿ' ಮಾಡಿಸುವ ಮುಸ್ಲಿಂ ಧಾರ್ಮಿಕ ವಿಧಿಯನ್ನು ಹೇರಲಾಯಿತು. ಇಂತಹ ಗೊಂದಲದ ಪರಿಸ್ಥಿತಿಯು 'ಸಂಬಂಧ' (ಶ್ರೀಕಾಂತ ಪಾಟೀಲ) ಕತೆಯ ಮಾಸ್ತರನಂತಹ ಪ್ರಜ್ಞಾವಂತರಲ್ಲಿ ಅಂತರ್‌ಜಾತಿಯ ವಿವಾಹವನ್ನು ಪ್ರೇರೇಪಿಸಿತು. ಕಾಲಘಟ್ಟದ ಒತ್ತಡಗಳಲ್ಲಿ ರೂಪಿತವಾಗುವ ಸಾಂಸ್ಕೃತಿಕ ಸಾಮರಸ್ಯಗಳು, ಒತ್ತಾಯದ ಹೇರಿಕೆಗಳೆರಡೂ ಕಾಲಾಂತರದ ಸಾಂಸ್ಕೃತಿಕ ಬದುಕಿಗೆ ಸೂಕ್ತ ಮಾರ್ಗದರ್ಶಕಗಳಾಗಬೇಕು. ಮತಾಂಧರಿಂದ ಆಗುವ ಗಲಭೆಗಳು ಸಾಮಾಜಿಕ ಬದುಕಿನ ಅವ್ಯವಸ್ಥೆಯನ್ನೇ ತಿಳಿಸುತ್ತವೆ. 'ಗೋಹರಜಾನ್ ಮಾಲತಿ ಮತ್ತು ನಾನು' (ಚಂದ್ರಕಾಂತ ಕುಸನೂರ) ಕಾದಂಬರಿಯ ಗೋಹರಜಾನ್ ತನಗೆ ಸಂಗೀತ ಪಾಠ ಹೇಳಿಕೊಡುತ್ತಿದ್ದ ಕೃಷ್ಣಕಾಂತ ಉಪಾಧ್ಯಾಯರ ಮಗ ಗುರುಚರಣನನ್ನು ಪ್ರೀತಿಸುತ್ತಾಳೆ. ಗುರುಚರಣ ಹಿಂದೂ ಆಗಿದ್ದರಿಂದ ಮುಸ್ಲಿಂ ಸಮುದಾಯದವರು ಗೋಹರಜಾನಳ ಮನೆಯಲ್ಲಿ ಆತನನ್ನು ಕೊಂದು ಸುಟ್ಟು ಹಾಕುತ್ತಾರೆ. 'ಕೊರಡು ಕೊನರುವ ಪರಿ' (ಅಮರೇಶ ನುಗಡೋಣಿ) ಕತೆಯ ಸಾಯಿಬಣ್ಣ ಮುಸ್ಲಿಂ ಸಮುದಾಯದ ಅಸಹಾಯಕತೆಯನ್ನೇ ತಿಳಿಸುತ್ತಾನೆ. ಊರಿನ ಮಠದಲ್ಲಿ ಉಚಿತ ಮದುವೆಯ ಸುದ್ದಿ ತಿಳಿದಾಗ ಬಡಬಗ್ಗರು ತಮ್ಮ ಮಕ್ಕಳಿಗೆ ಮದುವೆ ಮಾಡಲು ಯೋಚಿಸಿ ಮಠಕ್ಕೆ ಬಂದು ಅವಕಾಶ ಪಡೆಯಲು ಹಲಬುತ್ತಾರೆ. ಅನೇಕರಿಗೆ ನಿರಾಶೆಯಾಗುತ್ತದೆ. ಮಠದ ಉಚಿತ ಮದುವೆಗೆ ಮುಸ್ಲಿಂ ಮಂದಿಗೆ ಅವಕಾಶವಿಲ್ಲವೆಂದು ತಿಳಿದ ಸಾಯಿಬಣ್ಣ ಸಂಕಟಕ್ಕೀಡಾಗುತ್ತಾನೆ. ಹುಸೇನಪ್ಪ, ಫಕೀರವ್ವ ಎಲ್ಲರೂ ತಮ್ಮ ಜಾತಿಯವರಿಗೆ ಮಠದಲ್ಲಿ ಉಚಿತ ಮದುವೆಯ ಅವಕಾಶ ಸಿಗಲಿಲ್ಲವೆಂಬ ಕಾರಣಕ್ಕೆ ಪರಿತಪಿಸುತ್ತಾರೆ. ಮಠಕ್ಕೆ ದೇಣಿಗೆ ಸಲ್ಲಿಸುವ ಭಕ್ತರಲ್ಲಿ ಒಂದಾಗುವ ಮುಸ್ಲಿಂ ಜನರಿಗೆ, ಸಾಮೂಹಿಕ ಮದುವೆಯಂತಹ ಸಂದರ್ಭಗಳಲ್ಲಿ ನಿಮ್ಮ ರೀತಿ ರಿವಾಜು ಬೇರೆಯಾಗುತ್ತದೆ ಎಂದು ಹೊರಗುಳಿಸುತ್ತಾರೆ. ಮಠದ ಗದ್ದುಗೆ ಏರಿದ್ದ ಚೆನ್ನಬಸವ ಸ್ವಾಮಿ ಜಾತಿಭೇದವನ್ನು, ತಾರತಮ್ಯವನ್ನು ಮಾಡುವುದು ಜನರಲ್ಲಿ ಬೇಸರವುಂಟುಮಾಡಿತ್ತು. ದೇಣಿಗೆ ಹಣ ಪಡೆಯುವಾಗ ಭೇದ ತೋರದ ಮಠದ ಸ್ವಾಮಿ ಮದುವೆ

ಕಾರ್ಯಕ್ಕೆ ಸಂಬಂಧಿಸಿದಂತೆ ದೂರ ಇಡುತ್ತಿರುವುದು ಮುಸ್ಲಿಂ ಸಮುದಾಯದ ನೋವು ನಿರಾಶೆಗೆ ಕಾರಣವಾಗುತ್ತದೆ. ಸಿದ್ಧಪ್ಪನಂತಹ ಪ್ರಜ್ಞಾವಂತರಿಂದಲೂ ಇವರಿಗೆ ನ್ಯಾಯ ದೊರಕಿಸಿಕೊಡಲಾಗುವುದಿಲ್ಲ. ನರಸವ್ವನಿಗೆ ತನ್ನ ಮೊಮ್ಮಗಳು ಚುಕ್ಕಿ ಮದುವೆ ಕ್ರೂರಿಯಾದ ಶಿವರಾಜನೊಂದಿಗೆ ನಡೆಯುವುದು ಇಷ್ಟವಿರಲಿಲ್ಲ. ಚುಕ್ಕಿ ವಿದ್ಯಾವಂತೆ, ಜಾಣೆ, ಕೆಳವರ್ಗದ ಈ ಹುಡುಗಿಯ ಬದುಕು ಹಾಳಾಗದಂತೆ ನರಸವ್ವ ಕಾಳಜಿಯಿಂದಲೇ ಕಾಪಾಡಿದ್ದಳು. ಚುಕ್ಕಿಯ ಮನದಾಳದ ಇಂಗಿತ ಹಜರೇಶನನ್ನು ಮದುವೆಯಾಗುವುದಾಗಿತ್ತು. ಸಿದ್ಧಪ್ಪನ ಎದುರು ಇರುವ ವಿಷಯವನ್ನು ಹೇಳುವ ಚುಕ್ಕಿಗೆ ಆಯ್ಕೆಯ ಪ್ರಜ್ಞೆ ಬೆಳೆದಿತ್ತು. "ನಿನ್ನಂಥವರ ಆಸೆಯನ್ನು ಕೈಗೂಡಿಸುವಷ್ಟು ನಮ್ಮ ಜನ ಬೆಳೆದಿಲ್ಲ, ಸಮಾಜ ಬೆಳೆದಿಲ್ಲ. ಈ ರಿಸ್ಕ್ ತೆಗೆದುಕೊಳ್ಳುವುದು ಅಂದ್ರ ಅದೊಂದು ಯುದ್ಧವೇ ಸರಿ. ಛೇ ಛೇ ನಾನು ನಿನ್ನಂಥ ಕೂಸಿನ ಮುಂದೆ ಹೀಗೆ ಹೇಳುವ ಸ್ಥಿತಿ ಬಂತು ನೋಡು. ಈಗ ಈ ದೇಶದ ಚುಕ್ಕಾಣಿ ಹಿಡಿದ ಪಕ್ಷದವರು ನಿನ್ನ- ಹಜರೇಶನ ಸಂಬಂಧ ಕೇಳಿದ್ರೆ ಸಾಕು, ಕತ್ತಿಗಳನ್ನೇ ಝಳಪಿಸುತ್ತಾರೆ ಎಂದು ಸಿದ್ಧಪ್ಪ ಅಸಹಾಯತೆಯಿಂದ ಚಡಪಡಿಸಿದ" (ಅಮರೇಶ ನುಗಡೋಣಿ) ಪರಿಸ್ಥಿತಿಯ ಒತ್ತಡಗಳು ಕಾಲಘಟ್ಟದಿಂದ ಕಾಲಘಟ್ಟಕ್ಕೆ ವ್ಯತ್ಯಾಸ ಹೊಂದುತ್ತವೆ. ಸಾಂಸ್ಕೃತಿಕ ತಾರತಮ್ಯವನ್ನು ಎಣಿಸುವ ಮಠದ ಸ್ವಾಮಿಯ ವರ್ತನೆಯನ್ನು, ಹಿಂದೂ-ಮುಸ್ಲಿಂ ಗಲಾಟೆಗಳ ಭಯದ ವಾತಾವರಣಗಳನ್ನು ಸಿದ್ಧಪ್ಪ ಅರಿತಿದ್ದ. ಪರಿಸ್ಥಿತಿಯ ಒತ್ತಡಗಳು ವಿಭಿನ್ನ ರೂಪಗಳಲ್ಲಿ ಭಯಾನಕವಾಗುತ್ತಲೇ ನಡೆದಿರುವಾಗ ಸಾಂಸ್ಕೃತಿಕ ಸಾಮರಸ್ಯ, ಮಾನವೀಯತೆಯ ಬದುಕು ಮರೀಚಿಕೆಯಾಗುತ್ತಲೇ ಸಾಗಿದೆ. ಶಿವರಾಜನಿಂದ ಬಿಡಿಸಿಕೊಂಡು ಚುಕ್ಕಿ ಬೀಸಿ ಒಗಿದ ತಾಳಿ ಹಜರೇಶನಿಗೆ ಬಿದ್ದದ್ದು ಆಕೆಯಲ್ಲಿ ಸಂತೋಷವನ್ನುಂಟುಮಾಡುತ್ತದೆ. ಕೊರಡಾದ ಸಾಮಾಜಿಕ ಪರಿಸ್ಥಿತಿಯ ಕೊನರುವಿಕೆಯ ಜೀವಂತ ಶಕ್ತಿಗಳಾಗಿ ಹೊಸತಲೆಮಾರಿನ ಮನಸ್ಥಿತಿಗಳು ರೂಪುಗೊಳ್ಳುತ್ತಿರುವುದು ಕತೆಯಲ್ಲಿ ಮನದಟ್ಟಾಗುತ್ತದೆ. ಕೊರಡೊಂದರಿಂದ ಹೊಸ ವಿಚಾರದ ಹುಟ್ಟು ಸಹಿಸಬೇಕಾದ ಎಲ್ಲ ಪ್ರಯಾಸಗಳು ಇಲ್ಲಿ ಕಂಡುಬರುತ್ತವೆ. ದೈವಿಕ ನೆಲೆಯ ಮಹತ್ವದ ರಕ್ಷೆ ಚುಕ್ಕಿಯಂತವರನ್ನು ಅನೈತಿಕತೆಯಿಂದ ಕಾಯುವ ಪರಿಕಲ್ಪನೆಯೂ ಹೊಸ ಸಾಂಸ್ಕೃತಿಕ ಬದುಕಿನ ಉದಯವನ್ನೇ ಆಶಿಸುತ್ತದೆ.

'ಏ ದಿಲ್ ಮಾಂಗೆ ಮೋರ್' (ಅಮರೇಶ ನುಗಡೋಣಿ) ಕತೆಯ ಖಾಜಾವಲಿ ಸಾಂತಿ ಮತ್ತು ಗೋವಿಂದರ ಪ್ರೀತಿಯ ಸಹಾಯಕನಾಗಿರುತ್ತಾನೆ. ಸಾಂತಿಯನ್ನು ಖಾಜಾವಲಿಯೇ ಓಡಿಸಿಕೊಂಡು ಹೋಗಿದ್ದಾನೆಂಬ ಸುದ್ದಿಯಿಂದ ಊರಲ್ಲಿ ಹುಡುಕಾಟ ಪ್ರಾರಂಭವಾಗುತ್ತದೆ. ಸಾಂತಿಯನ್ನು ಮದುವೆ ಮಾಡಿಕೊಳ್ಳಬಯಸಿದ ಆಕೆಯ ಮಾವ ವಿರೂಪಾಕ್ಷಿ ಗಿರೀಶ ಮತ್ತಿತರರೊಂದಿಗೆ ಹುಸೇನವ್ವನ ಹೋಟೆಲ್‌ಗೆ ನುಗ್ಗುತ್ತಾರೆ. ಹುಸೇನವ್ವನ ಮನೆಯಲ್ಲಿಯೇ ಸಾಂತಿ ಇರುವುದು ತಿಳಿದು ಎಲ್ಲರೂ ಕಿಡಿಕಾರುತ್ತಾರೆ. ಈ ಮಧ್ಯೆ ಖಾಜಾವಲಿಯ ಮೇಲೆ ಹರಿಹಾಯುವ ಗಿರೀಶ ಮತ್ತಿತರರು ಹಿಂದೂ-ಮುಸ್ಲಿಂ ಗಲಾಟೆಯನ್ನು ಕ್ರಿಕೆಟಿಗರ ನಡುವೆ ಹಾಗೂ ನಡೆಯುತ್ತಿರುವ ಕಾರ್ಗಿಲ್ ಯುದ್ಧದೊಂದಿಗೆ ತಳುಕು ಹಾಕಿ ಮಾತಿಗಿಳಿಯುತ್ತಾರೆ. ತಮ್ಮ ನೆಲದಲ್ಲೇ ಇರುವ, ಎಲ್ಲರೊಂದಿಗೆ ಬೇಕಾದವನಾಗಿದ್ದ ಖಾಜಾವಲಿಯು

ಇದ್ದಕ್ಕಿದ್ದಂತೆ ಪರಕೀಯನಾಗುವ, ಪಾಕಿಸ್ತಾನದ ವ್ಯಕ್ತಿಯಾಗಿ ಕಂಡು ಬರುವ ಇಲ್ಲಿನ ಕ್ರೌರ್ಯ ಜಾತ್ಯಾತೀತವಾಗಿ ವಿಸ್ತಾರಗೊಳ್ಳದ ಸಂಕುಚಿತ ಮನಸ್ಥಿತಿಗಳನ್ನೇ ತಿಳಿಸುತ್ತದೆ. ಹಿಂದೂ-ಮುಸ್ಲಿಂ ಎಂಬ ಪ್ರತ್ಯೇಕೀಕರಣ ಮತ್ತು ಅದರೊಂದಿಗಿನ ಜಾತಿ ರಾಜಕಾರಣಗಳು ಸಾಂಸ್ಕೃತಿಕ ಪ್ರಗತಿಗೆ ಮಾರಕ ನಾಗುವಂತವುಗಳು. ಪರಸ್ಪರ ಧಾರ್ಮಿಕ ಗೌರವಗಳನ್ನು ಸಲ್ಲಿಸುವ ವಿಶಾಲ ಮನೋಭಾವಗಳು, ಧರ್ಮಾತೀತವಾಗಿ ಬೆಳೆಯಬೇಕಾದ ಮನುಷ್ಯತ್ವದ ನೆಲೆಗಳು ಇಲ್ಲವಾಗುತ್ತಿರುವುದರ ನೋವು ಕಥನದ ಕೇಂದ್ರ ವಿಷಯಗಳಲ್ಲೊಂದಾಗಿದೆ.

ಕೆಳಸಮುದಾಯಗಳು ಕೆಲವು ಆಚರಣೆಗಳನ್ನು, ರೀತಿ-ನೀತಿಗಳನ್ನು ರೂಢಿಸಿಕೊಂಡಿವೆ. ಆದರೆ ತಮ್ಮದೆಂದು ನಂಬುವ ಕೆಲವು ಸಾಂಪ್ರದಾಯಿಕ ಆಚರಣೆಗಳು, ಬದುಕಿನ ರೀತಿಗಳು ಮೇಲ್ ಸಮುದಾಯದ ಹೇರಿಕೆಗಳೆಂಬ ತಿಳುವಳಿಕೆ ಬರುವ ಮುಂಚಿನ ಕಾಲವನ್ನು ಸಾಂಸ್ಕೃತಿಕ ದಾಸ್ಯವೆಂದು ಕರೆದರೆ ತಪ್ಪಾಗದು. ಸಾಂಸ್ಕೃತಿಕವಾಗಿ ಇವರನ್ನು ಅವಲಂಬಿತರನ್ನಾಗಿಸುವ ಮೇಲ್ವರ್ಗವೇ ಪ್ರಧಾನ ಸಂಸ್ಕೃತಿಯೆಂಬ ಹಿರಿಯಪಟ್ಟವನ್ನು ಪರಂಪರೆಯಿಂದಲೂ ಪಡೆದುಕೊಂಡು ಬಂದಿದೆ. ಪ್ರದೇಶವೊಂದರ ಸಂಸ್ಕೃತಿಯೆಂಬುದು ಪ್ರಧಾನ ಸಂಸ್ಕೃತಿಯೊಂದರ ವಿಕೇಂದ್ರೀಕರಣದಿಂದ ಗುರುತಿಸುವಂತಾಗಬೇಕು. ಸಾಂಸ್ಕೃತಿಕ ದಾಸ್ಯದಡಿ ತಮ್ಮ ಮೇಲಿನ ಹೇರಿಕೆಗಳನ್ನು ವಿಮರ್ಶಿಸದೆ ಒಪ್ಪಿಕೊಳ್ಳುತ್ತಿದ್ದ ಜನಸಮುದಾಯ ಹೊಸ ಪ್ರಜ್ಞೆಗೆ ಜಾಗೃತರಾದದ್ದು ತಮ್ಮ ಬದುಕಿಗಾದ ಅನ್ಯಾಯಗಳಿಂದ. ಜನಸಮುದಾಯದ ತಿಳುವಳಿಕೆಗೆ ಪ್ರೇರಣೆ ನೀಡಿದ ಇಂತಹ ಅಂಶಗಳಲ್ಲಿ ಶಿಕ್ಷಣವೂ ಸೇರಿಕೊಳ್ಳುತ್ತದೆ. ಹಸಿವಿನ, ಅಜ್ಞಾನದ ಅಸಹಾಯಕತೆಯಲ್ಲಿಯೇ ಉಳಿಯಬಹುದಾಗಿದ್ದ ಇವರ ಬದುಕಿಗೆ ಚಲನಶೀಲತೆ ಸಾಧ್ಯವಾಗುತ್ತಿರುವುದನ್ನು ಆರಂಭಘಟ್ಟದ ಕಥನ ತಿಳಿಸುತ್ತದೆ. ಶಾಂತರಸರ ಅನೇಕ ಕತೆಗಳಲ್ಲಿ ಪ್ರಜ್ಞೆ ಇದ್ದು ಹಿಂದುಳಿಯುವ ಕೆಳವರ್ಗದವರ ಅಸಹಾಯಕತೆಗಳು ಕಂಡು ಬರುತ್ತವೆ. ರಜಾಕಾರರ ಹಾವಳಿ ತಂದೊಡ್ಡಿದ ಹೊಸ ಅವಕಾಶಗಳಿಂದ ಸಿಕ್ಕ ಕ್ಷಣಿಕವಾದ ಆಸರೆ ಇವರನ್ನು ಸಮಸ್ಯೆಗಳಲ್ಲಿಯೇ ಉಳಿಸಿತು. ದಲಿತ ರಂಗಪ್ಪನಿಂದ ಹರಿಜನೋದ್ಧಾರ ಕಾರ್ಯಗಳು ನಡೆಯುವುದು 'ಯಾತನಾ ಶಿಬಿರ' (ಚಂದ್ರಕಾಂತ ಕುಸನೂರು) ಕಾದಂಬರಿಯಲ್ಲಿ ಕಂಡು ಬರುತ್ತದೆ. ಹರಿಜನೋದ್ಧಾರ ಕೆಳಸಮುದಾಯದವರಲ್ಲಿ ಜಾಗೃತಿ ಮೂಡಿಸುವುದು ಮಾತ್ರವಲ್ಲ ಮೇಲ್ವರ್ಗದವರಲ್ಲಿಯೂ ಬದಲಾವಣೆಗಳನ್ನು ತರುವ ಪ್ರಮುಖ ಪ್ರಕ್ರಿಯೆಯೆಂಬುದು ಇಲ್ಲಿ ತಿಳಿದು ಬರುತ್ತದೆ. ಹರಿಜನರು ಏರ್ಪಡಿಸಿದ್ದ ಕಾರ್ಯಕ್ರಮಕ್ಕೆ ಹೋದ ಗೌಡ ಹಾಗೂ ದೀಕ್ಷಿತ ಅವರು ಕೊಟ್ಟ ಫಲಹಾರ ತಿನ್ನುವ ಸಮಸ್ಯೆಗೆ ಸಿಲುಕುತ್ತಾರೆ.

ಹೊಸ ಬದಲಾವಣೆಗಳನ್ನು ದೀಕ್ಷಿತ ಒಪ್ಪಿಕೊಳ್ಳುತ್ತಾನೆ, ಆದರೆ ಗೌಡ ಒಪ್ಪಿಕೊಳ್ಳುವುದಿಲ್ಲ. ಬದಲಾದ ಕಾಲಘಟ್ಟದಲ್ಲಿ ಹರಿಜನರಿಗೂ ಉದ್ಧಾರದ ಅವಕಾಶಗಳು ದೊರೆಯುತ್ತಿರುವುದನ್ನು ದೀಕ್ಷಿತ ಒಪ್ಪಿಕೊಂಡಂತೆ ಗೌಡ ಸಹಿಸಿಕೊಳ್ಳುವುದಿಲ್ಲ. ದೀಕ್ಷಿತನ ತಿಳುವಳಿಕೆ, ಬದಲಾಗಲು ಒಪ್ಪದ ಗೌಡನ ಅಹಂಕಾರದ ಮುಂದುವರಿಕೆ ಎರಡೂ ಇಲ್ಲಿ ತಿಳಿದುಬರುತ್ತವೆ. ಹರಿಜನೋದ್ಧಾರದ ಅವಕಾಶಗಳು

ಸಮಾಜದಲ್ಲಿ ಕಂಡುಬರುತ್ತಿರುವುದನ್ನು ಕೆಳವರ್ಗದವರಲ್ಲಿ ಮನದಟ್ಟು ಮಾಡುವುದಲ್ಲದೆ, ಮೇಲ್ವರ್ಗದವರಿಗೂ ಮನವರಿಕೆ ಮಾಡಿಕೊಡುವ ಇಲ್ಲಿನ ಕಾರ್ಯಕ್ರಮ ಮುಖ್ಯವಾಗಿದೆ. ಕೇವಲ ದಲಿತರು ಮಾತ್ರವಲ್ಲ ಅವರನ್ನು ದಲಿತರನ್ನಾಗಿಸಿದವರು ಬದಲಾಗಬೇಕಿದೆ ಎಂಬುದನ್ನು ಇದು ತಿಳಿಸುತ್ತದೆ.

ಗೀತಾ ನಾಗಭೂಷಣ ಅವರು ಕೆಳವರ್ಗದ ಸ್ತ್ರೀ-ಬದುಕು ಸಾಂಪ್ರದಾಯಿಕ ಹೇರಿಕೆಗಳಿಂದ ಹೊರಬರುವ ಪ್ರಜ್ಞೆಗೆ ತೆರೆದುಕೊಂಡಿರುವುದನ್ನು ಅವರ ಕಥನದಲ್ಲಿ ಅಭಿವ್ಯಕ್ತಿಸಿದ್ದಾರೆ. ಜೋಗಣಿಯಂತಹ ಸಂಪ್ರದಾಯಗಳನ್ನು ವಿರೋಧಿಸುವ ಪ್ರಜ್ಞೆ ಜಾಗೃತವಾಗಿದ್ದಾಗ್ಯೂ ಇಲ್ಲಿನ ಸ್ತ್ರೀ ಬದುಕು ಶೋಷಣೆಯನ್ನು ಅನುಭವಿಸುತ್ತದೆ. ಆದರೆ ಸುಧಾರಣೆಯ ದಾರಿಯೊಂದು ಇಲ್ಲಿ ಸುಲಭವಾಗಿ ದಕ್ಕುವಂತಹದ್ದಲ್ಲ ಎಂಬ ವಾಸ್ತವಿಕತೆಯ ಕ್ರೌರ್ಯವನ್ನು ತಿಳಿಸಿದ್ದಾರೆ. ಸ್ತ್ರೀ ಬದುಕಿನ ಹಿನ್ನೆಲೆಯಲ್ಲಿಯೇ ಪ್ರತಿಷ್ಠಿತ ವರ್ಗದ ಹೇರಿಕೆಗಳನ್ನು ಅರ್ಥೈಸುವ, ಸಾಂಪ್ರದಾಯಿಕ ನಿಲುವನ್ನು ವಿರೋಧಿಸುವ ಇಲ್ಲಿನ ಕಥನದ ರೀತಿ ವಿಶಿಷ್ಟವಾಗಿದೆ. ಸಂಪ್ರದಾಯದ ವಿರೋಧಕ್ಕೆ ಶಿಕ್ಷಣ ಅತ್ಯವಶ್ಯಕ ಎಂಬ ನಿಲುವು ಇಲ್ಲಿನದಲ್ಲ. ಬದುಕಿನ ಕ್ರೂರ ವಾಸ್ತವದೊಳಗೆ ಗಟ್ಟಿಗೊಂಡ ಸ್ತ್ರೀಯರು ತಮಗೆ ಸಿಗುವ, ತೋಚುವ ಮಾರ್ಗದಲ್ಲಿಯೇ ಮುನ್ನುಗ್ಗಿ ಶೋಷಣೆಯನ್ನು ವಿರೋಧಿಸುತ್ತಾರೆ. 'ನೆಲನೊಂದೆ ಹೊಲಗೇರಿ ಶಿವಾಲಯಕ್ಕೆ' (ಗೀತಾ ನಾಗಭೂಷಣ) ಕತೆಯಲ್ಲಿ ವಚನ ಧರ್ಮದ ಪ್ರೇರಣೆಯಲ್ಲಿ ಬದುಕು ನಡೆಸುತ್ತಿದ್ದ ಗೌಡತಿ ಹಾಗೂ ಅದೇ ವಚನ ಧರ್ಮದ ಪರಿಪಾಲಕನಾದ ಕೆಳವರ್ಗದ ಆದಪ್ಪ ಇಬ್ಬರೂ ಕುಲವೆರೆಡಾದರೂ ನಡೆಯೊಂದೆ ಎಂಬ ಮನೋಧರ್ಮದವರಾಗಿದ್ದರು. ಕೆಳವರ್ಗದ ಆದೆಪ್ಪನ ಮಗಳನ್ನು ತನ್ನ ಮಗನೊಂದಿಗೆ ಮದುವೆ ಮಾಡಿಸುವ ಮೂಲಕ ಪ್ರಗತಿಪರವಾಗಿ ಗೌಡತಿ ನಿಲ್ಲುತ್ತಾಳೆ. ತಮ್ಮ ಮೇಲಾದ ಶೋಷಣೆ, ತಾವು ಎಂದೂ ಗೌಡನೆಂಬ ದೂರ್ತನಿಗೆ ಪತ್ನಿಯರಾಗುವುದಿಲ್ಲ ಎಂಬ ಸತ್ಯವನ್ನರಿತ ಕೆಳವರ್ಗದ ಸ್ತ್ರೀಯರು ತಮ್ಮ ಮುಂದಿನ ಪೀಳಿಗೆಯ ಬಗ್ಗೆ ದಿಟ್ಟವಾದ ನಿಲುವನ್ನು ತಾಳುತ್ತಾರೆ. 'ಬೆಳಕಿನೆಡೆಗೆ' (ಗೀತಾ ನಾಗಭೂಷಣ) ಕತೆಯ ಭವಾನಿ ತನ್ನ ಮಗಳು ತನ್ನಂತೆ ಇಟ್ಟುಕೊಂಡವನೊಬ್ಬನ ರಂಡಿಯಾಗಬಾರದೆಂದು ಯೋಚಿಸುತ್ತಾಳೆ. ಸಾಹುಕಾರನಿಂದ ಆದ ಅನ್ಯಾಯಕ್ಕೆ ಸಮಾಜದಲ್ಲಿ ತನಗೆ ಉಂಟಾದ ಅವಮಾನಗಳನ್ನು ತಾಳಿಕೊಂಡಿದ್ದ ಭವಾನಿ ತನ್ನ ಮಗಳನ್ನು ಸ್ವತಃ ಹುಟ್ಟಿಸಿದ ತಂದೆಯೇ 'ರಂಡಿ' ಮಾಡಲು ಮುಂದಾದಾಗ ಸಿಡಿದೇಳುತ್ತಾಳೆ. ಮಗಳಿಗೆ ವಿದ್ಯೆ ಕಲಿಸಿ ಆಕೆಯ ಜೀವನವನ್ನು ಸುಂದರಗೊಳಿಸಲು ಬೆಳಕಿನೆಡೆಗೆ ಸಾಗುತ್ತಾಳೆ.

'ಪುಂಡಿ ಪೂಜಾರಿಯಾದಾಗ' (ಗೀತಾ ನಾಗಭೂಷಣ) ಕತೆಯಲ್ಲಿ ಕೆಳವರ್ಗದವರಿಗೆ ಧೈರ್ಯ, ಆತ್ಮವಿಶ್ವಾಸ ಮೂಡಿಸುವ ಕಾರ್ಯ ಈಶ್ವರನಿಂದ ಕಂಡು ಬರುತ್ತದೆ. ಈಶ್ವರ ತಳಗೇರಿಯ ಮಲ್ಲಣ್ಣನ ಅಕ್ಕರೆ ಪ್ರೀತಿಯಲ್ಲಿಯೇ ಬೆಳೆದಿರುತ್ತಾನೆ. ಅಸ್ಪೃಶ್ಯತೆಯನ್ನು ಮೀರಿದ ಇವರ ಬಾಂಧವ್ಯ ಈಶ್ವರನಲ್ಲಿ ಸದಾ ಜಾಗೃತವಾಗಿರುತ್ತದೆ. ವಿದ್ಯಾವಂತನಾಗಿ, ಕಲೆಕ್ಟರ್ ಹುದ್ದೆಯನ್ನು ಪಡೆದು ಬರುವ ಈಶ್ವರ ತನ್ನೂರಿನ ಮೇಲ್ವರ್ಗದ ಲಕ್ಷ್ಮಿಗುಡಿಯ ಪೂಜಾರಿ ಕೆಲಸಕ್ಕೆ ತಳವರ್ಗದ ಪುಂಡನನ್ನೇ ಆಯ್ಕೆ ಮಾಡುತ್ತಾನೆ. ಸಂಸ್ಕೃತದಲ್ಲಿದ್ದ ಮಂತ್ರಗಳನ್ನು ಕನ್ನಡಕ್ಕೆ ಭಾಷಾಂತರಿಸಿ, ಪುಂಡನಲ್ಲಿ ನೈತಿಕ ಸ್ಥೈರ್ಯ ಇರುವುದನ್ನು

ಮನವರಿಕೆ ಮಾಡಿಕೊಡುವ ಈಶ್ವರ ಕ್ರಾಂತಿಕಾರಕ ಬದಲಾವಣೆಗೆ ಮುಂದಾಗುತ್ತಾನೆ. ಇಂತಹ ಹೊಸ ಬದಲಾವಣೆಯನ್ನು ಒಪ್ಪಿಕೊಳ್ಳುವಲ್ಲಿ ತಳಮಳಿಸುವ ಪುಂಡ, ಆತನ ಹೆಂಡತಿ, ಮನೆಯವರಲ್ಲಿ ಬಿಕ್ಕಟ್ಟಿನ, ಗೊಂದಲದ ವಾತಾವರಣ ಉಂಟಾಗುತ್ತದೆ. ಆತ್ಮಸ್ಥೈರ್ಯವನ್ನು ತಂದುಕೊಂಡ ಪುಂಡಿ ಪೂಜಾರಿಯಾಗುತ್ತಾನೆ. ಕೆಳವರ್ಗದವರಲ್ಲಿರುವ ನಿಷ್ಕಲ್ಮಶ ಭಕ್ತಿ, ನೈತಿಕತೆ, ದೈವಿಕತೆ ಬಗೆಗಿನ ಗೌರವಗಳಂತಹ ಭಾವನೆಗಳಿಗೆ ಮೂರ್ತರೂಪದಂತಿದ್ದ ಪುಂಡಿ ಪೂಜಾರಿಯಾಗುತ್ತಾನೆ. ಪೂಜಾರಿ ಪಟ್ಟವನ್ನು ಪರಂಪರೆಯಿಂದ ಪಡೆದಿದ್ದ ಆಚಾರಿ ದೇವಿ ಬಗೆಗಿನ ಗೌರವ, ಭಯ ಭಕ್ತಿ ಯಾವುದೂ ಇಲ್ಲದೆ ರಾತ್ರೋರಾತ್ರಿ ದೇವಿಯ ಆಭರಣಗಳನ್ನು ಕಟ್ಟಿಕೊಂಡು ಓಡಿ ಹೋಗುತ್ತಾನೆ. ಮೌಲ್ಯ, ನೈತಿಕತೆ ಎಂಬುದು ನಿರ್ದಿಷ್ಟ ಜನಾಂಗಕ್ಕೆ ಸೇರಿದ ಸ್ವತ್ತಲ್ಲ. ಸಾಂಸ್ಕೃತಿಕ ಚಹರೆಯನ್ನೇ ಬದಲಾಯಿಸಿ ಪಾರಂಪರಿಕ ಜಾತಿಕಾರಣದ ಒಡೆತನಗಳನ್ನು ಕಸಿದುಕೊಳ್ಳುವ ಇಲ್ಲಿನ ಜಾಗೃತಿ ಕೆಳವರ್ಗದ ಪುಂಡಿಯಲ್ಲಿ ಹೊರಗಿನ ಪ್ರೇರಣೆಯಾಗಿ ಕಂಡುಬಂದಿದ್ದರೂ ಆತನಲ್ಲಿ ಈ ಪ್ರೇರಣೆಯನ್ನು ನಿಭಾಯಿಸುವ ಶಕ್ತಿಸಾಮರ್ಥ್ಯಗಳಿದ್ದವೆಂಬುದನ್ನು ತಿಳಿಸುತ್ತದೆ. ಅನೈತಿಕತೆಯನ್ನು ಮರೆಮಾಚಿ ಜಾತಿಕಾರಣದ ಮೇಲ್ವರ್ಗದವರ ದರ್ಪ ಹುಸಿಯಾದದ್ದು. ದೈಹಿಕ, ಮಾನಸಿಕ ಶುದ್ಧಿಯನ್ನು ಪಡೆಯುವಲ್ಲಿ ಸಮರ್ಥರಿರುವ ಕೆಳವರ್ಗದವರು ಕುಡಿತ, ಮಾಂಸದೂಟಕೆ ಜಾತಿಕಾರಣದಿಂದ ಅಂಟಿಕೊಂಡವರೆ ವಿನಹ ಸ್ವತಃ ಅವರೇ ಅದನ್ನು ಕದ್ದುಮುಚ್ಚಿ ಈಡೇರಿಸಿಕೊಳ್ಳುವ ಕೃತಕತೆಗೆ ಒಳಗಾಗಿಲ್ಲ. ತಮ್ಮ ಬದುಕಿಗೆ ಅಂಟಿಕೊಂಡಿರುವ ಸಹಜ ಆಹಾರಪದ್ಧತಿ ಅವರ ನೈತಿಕತೆಯ, ಮಾನವೀಯತೆಯ ಅಂತಃಕರಣದ ಅಲ್ಲಗಳೆಯುವಿಕೆಯ ಮಾನದಂಡವಲ್ಲ.

'ರಾಚಿ' (ಭಾಲಚಂದ್ರ ಜಯಶೆಟ್ಟಿ) ಕತೆಯಲ್ಲಿ ತಮ್ಮದಲ್ಲದ ಬದುಕಿನ ರೀತಿಯನ್ನು ಅನುಸರಿಸುವ ಸಾಹಸಕ್ಕೆ ಕೆಳವರ್ಗವನ್ನು ಒಗ್ಗಿಸಿ ಅಪಹಾಸ್ಯಕ್ಕೀಡುಮಾಡುವ ಕುತಂತ್ರ ಕಂಡು ಬರುತ್ತದೆ. ಮೇಲ್‌ಜಾತಿಯ ಉತ್ತಮಿಕೆಯನ್ನು ಅಳೆಯುವ ಮಾನದಂಡಗಳೆಂದರೆ ಅವರ ಆಹಾರ ಪದ್ಧತಿ, ಮಡಿಮೈಲಿಗೆ, ಪೂಜೆ, ಸಂಯಮ ಎಂದು ಗುರುತಿಸುವ ಕತೆಯು ಅದನ್ನು ಕೆಳವರ್ಗದವರಿಗೆ ಹೇರುತ್ತದೆ. ಈ ರೀತಿ ಮೇಲ್ವವರ್ಗವು ತನ್ನ ಶ್ರೇಷ್ಠತೆಯ ಮಾನದಂಡಗಳನ್ನು ಮುಂದಿಟ್ಟು ಅದನ್ನು ಅನುಸರಿಸಿ ಯಶಸ್ವಿಯಾಗುವ ಸವಾಲನ್ನು ಕೆಳವರ್ಗಕ್ಕೆ ಹಾಕುವುದು ಇಲ್ಲಿ ಸಂಪ್ರದಾಯದ ಆಚರಣೆಯಾಗಿ ಕಂಡು ಬರುತ್ತದೆ. ಕೆಳವರ್ಗದಲ್ಲಿ ವ್ರತಾಚರಣೆಗೆ ಮುಂದಾಗುವ ಯುವಕರು ಮೇಲ್ವರ್ಗದವರು ಒಡ್ಡುವ ಆಮಿಷಗಳಲ್ಲಿ ವ್ರತಾಚರಣೆಯನ್ನು ಮರೆಯುತ್ತಾರೆ. ಆದರೆ ಎಲ್ಲಾ ರೀತಿಯ ಸವಾಲುಗಳನ್ನು ಗೆದ್ದು ನಿಲ್ಲುವ ಮಾದರಮಾದ, ಗೌಡನ ಕೆಂಗಣ್ಣಿಗೆ ಗುರಿಯಾಗಿ ಕೊಲೆಯಾಗುತ್ತಾನೆ. ಸಮಾಜದಲ್ಲಿ ಉತ್ತಮ, ಪ್ರಧಾನ ಎಂದು ಕರೆಸಿಕೊಳ್ಳುವ ಜಾತಿಯ ಸಂಸ್ಕೃತಿಯ ಮಾನದಂಡಗಳು ಅವರ ಆಹಾರ ಪದ್ಧತಿಗಳು ಮಾತ್ರ. ಆಹಾರ ಪದ್ಧತಿಯ ಆಚೆಗಿನ ಮನಸ್ಸಿನ ಸಂಸ್ಕಾರಗಳು ಸಂಸ್ಕೃತಿಯ ಭಾಗವಾಗದೆ ಇರುವುದೇ ಇಲ್ಲಿ ಪ್ರಧಾನ ಅಧೀನ ಎಂಬ ಭೇದಗಳ ಹುಟ್ಟಿಗೆ ಕಾರಣವಾಗಿ ಕಂಡು ಬರುತ್ತದೆ. ಜಾತಿಯೊಂದರ, ಸಾಂಸ್ಕೃತಿಕ ಬದುಕಿನ ಪ್ರಧಾನತೆ ಶ್ರೇಷ್ಠತೆಯನ್ನು ಅಳೆಯುವ ಮಾನದಂಡದಲ್ಲಿ ಮಾನಸಿಕವಾದ ಪರಿಶುದ್ಧತೆಗೆ ಅವಕಾಶಗಳು ದೊರೆತಿಲ್ಲ.

ಈ ಕಾರಣದಿಂದಲೇ ಆಹಾರ ಪದ್ಧತಿ, ಶುಚಿತ್ವದಂತಹ ಮೇಲ್‌ನೋಟದ ಬದುಕಿನ ರೀತಿಯೇ ಸಾಂಸ್ಕೃತಿಕ ಪ್ರಧಾನತೆಯ ನಿರ್ಧಾರಕ ಅಂಶಗಳೆಂಬುದನ್ನು ಇಲ್ಲವಾಗಿಸುವ, ಎಲ್ಲವನ್ನೂ ಪ್ರಧಾನ ನೆಲೆಗೆ ತರಬಯಸುವ ಇಲ್ಲಿನ ಕಥನ ವಿಶಿಷ್ಟವಾದದ್ದು.

ಅಮರೇಶ ನುಗಡೋಣಿಯವರ ಕತೆಗಳು ಕೆಳವರ್ಗದಲ್ಲಿ ಮೂಡಿರುವ ಹಾಗೂ ಮೂಡಬೇಕಾಗಿರುವ ಜಾಗ್ರತೆಯನ್ನು ವಿಭಿನ್ನ ಆಯಾಮಗಳಲ್ಲಿ ತಿಳಿಸಿವೆ. ಹೊಸ ಜಾಗೃತಿಯ ಪ್ರತೀಕವಾದ 'ಚೆನ್ನ' 'ತಮಂಧದ ಕೇಡು' (ಅಮರೇಶ ನುಗಡೋಣಿ) ಕತೆಯಲ್ಲಿ ಪ್ರಧಾನ ನೆಲೆಯಾಗಿದ್ದು, ಕತೆಯ ಓದಿನ ಹೊಸ ಸಾಧ್ಯತೆಗೆ ಕಾರಣವಾಗುತ್ತಾನೆ. ಸಂಪ್ರದಾಯದಿಂದ ನಡೆದುಕೊಂಡು ಬಂದ ಅಸ್ಪೃಶ್ಯತೆಯನ್ನು ಮೀರಿ ನಿಲ್ಲುವ ಪ್ರಜ್ಞೆ, ಚೆನ್ನನಲ್ಲಿ ಜಾಗೃತವಾಗಿದೆ. ಆತನ ಶಿಕ್ಷಣದಿಂದಲೂ ಇದಕ್ಕೆ ಶಕ್ತಿ ಒದಗಿದೆ. ಅಸ್ಪೃಶ್ಯತೆಯನ್ನು ಹೇರಿದ ಮತ್ತು ಅದನ್ನು ಹೊತ್ತು ನಡೆದಿರುವ ಹಳೆ ತಲೆಮಾರಿನ ಪ್ರತೀಕದಂತೆ 'ಗೌಡ' ಹಾಗೂ 'ದುರುಗ' ಕಂಡು ಬರುತ್ತಾರೆ. ಸಾಂಪ್ರದಾಯಿಕ ಆಲೋಚನೆಯಲ್ಲೇ ಮುಳುಗಿದ್ದಂತೆ ಕಂಡು ಬರುವ ದುರುಗನಲ್ಲಿಯೂ ಶೋಷಣೆಯನ್ನು ಸಹಿಸಿದ ನೋವುಗಳಿವೆ. ಆದಾಗ್ಯೂ ಆತ ಮಾತು ಕಳೆದುಕೊಂಡಿದ್ದಾನೆ. ಸಾಂಪ್ರದಾಯಿಕ ಆಲೋಚನೆಗಳನ್ನು ಮೀರಿ ನಿಲ್ಲಬೇಕೆನ್ನುವ ಹೊಸ ಬದುಕಿನ ಸಾಧ್ಯತೆಗಳನ್ನು ಕಂಡುಕೊಂಡ ಚೆನ್ನನಿಂದ ಗೌಡ ಹಾಗೂ ದುರುಗ ಇಬ್ಬರೂ ಗೊಂದಲದಲ್ಲಿ ಬೀಳುತ್ತಾರೆ. ಚೆನ್ನನ ಹೊಸ ಬದುಕನ್ನು ಪ್ರಶ್ನಿಸುವ ದುರಗ "ಇದೇನು ಬಸ್ವಣ್ಣಪ್ಪನ ಕಾಲ ಏನಲೇ? ಚಪ್ಲಿ ಹೊಲಿವ ಕೈಯಿಗೆ ಲಿಂಗ ಬರದ್ಕಾ!" ಎನ್ನುತ್ತಾನೆ. ಈ ಮಾತು ಸಾಂಸ್ಕೃತಿಕವಾಗಿ ಹಿಂದುಳಿದಿರುವಿಕೆಯನ್ನು ಬಸವಣ್ಣನ ಕಾಲದಿಂದಲೂ ಪೋಷಿಸಿಕೊಂಡು ಬರುತ್ತಿರುವ ಸಾಮಾಜಿಕ ವ್ಯವಸ್ಥೆಯನ್ನು ಹೀಯಾಳಿಸುತ್ತದೆ. ಚೆನ್ನನಲ್ಲಿ ಹಾಗೂ ಗೌಡನ ಮಗಳಲ್ಲಿ ಅಂತರ್‌ಜಾತಿಯ ವಿವಾಹಕ್ಕೆ ಮನಸ್ಸುಗಳು ಪಕ್ವಗೊಂಡಿವೆ. ಹೊಸ ರೀತಿಯ ಬದಲಾವಣೆಗಳನ್ನು ತರಬಯಸಿದ ಬಸವಣ್ಣನವರ ಆಲೋಚನೆಗಳು ಸಂಪ್ರದಾಯದ ಜಡತ್ವದೊಂದಿಗೆ ಹೋರಾಡಬೇಕಾಯಿತು. ಜಡತ್ವದಿಂದ ಹೊರಬರಬೇಕೆನ್ನುವ ಸಮಾಜ ಸುಧಾರಕರು ಮೂಲಭೂತವಾದಿ ಸಾಮಾಜಿಕ ಪರಿಸ್ಥಿತಿಯೊಂದಿಗೆ ಸಂಘರ್ಷಕ್ಕೆ ಇಳಿದು ಅಂತ್ಯ ಕಂಡಿದ್ದಾರೆ. ಇಲ್ಲಿ ಗೌಡ ಹಾಗೂ ದುರುಗ ಹೊಳೆಯಲ್ಲಿ ಕೊಚ್ಚಿ ಹೋಗುವುದು ಸಂಪ್ರದಾಯದ ಜಡತ್ವ ಹೊಸ ನೀರಿನಲೆಯ ರಭಸಕ್ಕೆ ಉಳಿಯುವುದಿಲ್ಲವೆಂಬುದನ್ನು ಸೂಚಿಸುತ್ತದೆ. ಆದರೆ ಹೊಸ ಜಾಗೃತಿಗೆ ತೆರೆದುಕೊಂಡವರನ್ನು ಪೋಷಿಸುವ ಸಾಮಾಜಿಕ ಪರಿಸ್ಥಿತಿ ರೂಪಗೊಳ್ಳಬೇಕಿದೆ. ಗೌಡನಂತವರು, ದುರುಗನಂತವರು ಕೊಚ್ಚಿ ಹೋಗದೆ ಉಳಿದುಕೊಂಡಿರುವ ಸಾಧ್ಯತೆಗಳು ಹೊಸ ತಲೆಮಾರಿನ ಆತಂಕಗಳ ನಿರಂತರತೆಗೆ ಕಾರಣವಾಗಿರುವುದು ಇವರ ಕಥೆಗಳಲ್ಲಿ ಕಂಡು ಬರುತ್ತದೆ.

'ಮೂಡಲು ಹರಿಯಿತು' (ಅಮರೇಶ ನುಗಡೋಣಿ) ಕಥೆಯ ಕೆಂಪುಗ ಕೆಳವರ್ಗದ ಪ್ರಜ್ಞಾವಂತ. ಗೌಡನ ಕಾಸಿಗೆ, ಬಿಟ್ಟಿ ಕೂಳಿಗೆ ಆಸೆ ಬಿದ್ದ ತಂದೆ ಮತ್ತು ಮಾವನ ಬಗ್ಗೆ ಕೆಂಪುಗನಿಗೆ ಜಿಗುಪ್ಸೆ ಹುಟ್ಟಿತ್ತು. ತಂದೆ ಮತ್ತು ಮಾವನನ್ನು ಒಲಿಸಿಕೊಂಡ ಗೌಡ ಕೆಂಪುಗನ ಅಕ್ಕನನ್ನು ಪಡೆದುಕೊಂಡಿದ್ದ.

ತಂದೆ, ಮಾವ, ಅಕ್ಕನನ್ನು ಮಾನವಂತರನ್ನಾಗಿಸಲು, ಸ್ವಾಭಿಮಾನಿಗಳನ್ನಾಗಿಸಲು ಕೆಂಪುಗ ಪ್ರಯತ್ನಿಸಿದ. ಮೇಲ್ವರ್ಗದ ಸಿದ್ಧಪ್ಪ ಇರುಪಣ್ಣಗೌಡನ ತಮ್ಮ. ಶರಣಪಥವನ್ನು ಸಾಂಸ್ಥಿಕ ರೂಪದಲ್ಲಿ ಒಪ್ಪಿಕೊಂಡಿದ್ದ ಇರುಪಣ್ಣನಿಗೂ, ಅದನ್ನು ಬದುಕಿನ ಸನ್ಮಾರ್ಗವೆಂದು ತಿಳಿದು ವಚನಗಳನ್ನೇ ನಡೆಯಾಗಿಸಿಕೊಂಡಿದ್ದ ಸಿದ್ಧಪ್ಪನಿಗೂ ವ್ಯತ್ಯಾಸಗಳಿದ್ದವು. ಈ ವ್ಯತ್ಯಾಸಗಳೇ ಇಬ್ಬರಲ್ಲೂ ಹೊಂದಾಣಿಕೆಗೆ ಅಡ್ಡಿಯಾಗಿದ್ದವು. ಮಾನವಂತನಾಗಿ ಬದುಕಲು ಇಚ್ಛಿಸುವ ಕೆಂಪುಗನಿಗೆ ತನ್ನ ಪಾಲಿನ ಒಂದು ಕೂರಿಗೆ ಹೊಲವನ್ನು ಕೊಡಲು ಸಿದ್ಧಪ್ಪ ಇಚ್ಛಿಸುತ್ತಾನೆ. ಆದರೆ ಇದನ್ನು ತಡೆಯುವ ಇರಪಣ್ಣ ಆ ಹೊಲವನ್ನು ಅದಾಗ ತಾನೆ ಕಟ್ಟಲಾಗಿದ್ದ ಗುಡಿ ಪೂಜಾರಿಗೆ ದಾನ ಮಾಡಿ ಊರಲ್ಲಿ ದೈವಭಕ್ತನೆಂಬ ಪ್ರಚಾರ ಪಡೆಯಲು ಮುಂದಾಗುತ್ತಾನೆ. ಗುಡಿಕಟ್ಟುವಿಕೆಯನ್ನು ವಿರೋಧಿಸುವ ಸಿದ್ಧಪ್ಪನ ವಿಚಾರಗಳು ಜನರ ಮುಂದೆ ಆತನನ್ನು ನಾಸ್ತಿಕ ನನ್ನಾಗಿಸುತ್ತವೆ. ಗುಡಿಕಟ್ಟಿದ ತಮಗೆ ಗುಡಿಯಿಂದ ದೂರ ಸರಿಯುವಂತೆ ಹೇಳುವ ಪ್ರತಿಷ್ಠಿತರ ಮಾತುಗಳು ಕೆಂಪುಗನಲ್ಲಿ ನೋವುಂಟುಮಾಡುತ್ತವೆ. ಗೌಡಕೊಟ್ಟ ಅಂಗಿ ತೊಟ್ಟ ಮಾವನನ್ನು ಹಿಡಿದು ಕೆಂಪುಗ ಸಿಟ್ಟಿನಿಂದ ಆತನ ಅಂಗಿ ಹರಿಯುತ್ತಾನೆ. ಗುಡಿ ಕಟ್ಟಿದ್ದ ಭಕ್ತರನ್ನು ಹುರಿದುಂಬಿಸಿ ಕಳಸ ಇಡಲು ಮೇಲೇರಿದ್ದ ಮಹಾಸ್ವಾಮಿಗಳು ಮೇಲಿಂದ ಬೀಳುತ್ತಾರೆ. ಜಡಗೊಂಡ ಬದುಕಿನ ವಿನಾಶವನ್ನೇ ತಿಳಿಸುವ ಈ ಸಂಗತಿಗಳು ತಮ್ಮ ತಮ್ಮ ಸಮುದಾಯದವರನ್ನು, ಸಮಾಜವನ್ನು ಪ್ರಜ್ಞಾವಂತರನ್ನಾಗಿಸುವಲ್ಲಿ ಸೋತ ಕೆಂಪುಗ ಮತ್ತು ಸಿದ್ಧಪ್ಪರಿಗೆ ಸಿಕ್ಕ ದಿಗ್ವಿಜಯದಂತೆ ಕಂಡುಬರುತ್ತವೆ. ಆದರೆ ಪ್ರಜ್ಞೆಯೊಂದರ ಜಾಗೃತಿಗೆ ಹಳೆ ತಲೆಮಾರಿನ ಅಪಾಯಕಾರಿ ಅಂತ್ಯವೇ ಪರಿಹಾರವೆಂಬುದು ಇಲ್ಲಿನ ಧ್ವನಿಯಲ್ಲ. 'ಜಾತಿ ಕೇಂದ್ರಿತ ಅಸ್ತಿತ್ವ'ವನ್ನು ರೂಪಿಸಿಕೊಂಡವರಲ್ಲಿ ಅಂತಹ ಜಾತಿ ಪ್ರಧಾನ ಅಹಂಗಳು ವಿನಾಶವಾಗಬೇಕು ಎಂಬುದು ಇಲ್ಲಿನ ನಿಲುವು. ಜಾತ್ಯಾತೀತವಾದ ಮನುಷ್ಯ ಧರ್ಮದಲ್ಲಿ ಒಂದಾಗಬೇಕೆಂದು ಹಾರೈಸುವ ವಚನಗಳು ಇಂದಿನ ಪ್ರಜ್ಞಾವಂತರ ಜಾಗೃತಿಗೆ, ಹೋರಾಟಕ್ಕೆ ಮುಖ್ಯ ಪ್ರೇರಣೆಯಾಗುತ್ತಿರುವುದು ವಿಶಿಷ್ಟವಾಗಿದೆ. ಹೊರಗಿನ ಪ್ರೇರಣೆಯಿಂದ ಮಣಿಯದ ಕೆಂಪುಗನ ತಂದೆ, ಮಾವ, ಅಕ್ಕ ಹಾಗೂ ಸಿದ್ಧಪ್ಪನ ಅಣ್ಣನಂತವರಲ್ಲಿ ಆಂತರಿಕ ಪ್ರಜ್ಞೆಯ ಜಾಗೃತಿ ಅಗತ್ಯವಾಗಿದೆ.

'ನೀರು ತಂದವರು' (ಅಮರೇಶ ನುಗಡೋಣಿ) ಕತೆಯ ಕೆಳವರ್ಗದವರಾದ ನಿಂಗ, ಕೆಂಪುಗ, ಪುರುಷೋತ್ತಮ, ಶಿವಲಿಂಗ, ನಾಗರಾಜ, ಸುದರ್ಶನ ಮೇಲ್ವರ್ಗದ ಸಿದ್ಧಪ್ಪನಿಂದ ಪ್ರೇರಿತರಾದವರು. ಶಿಕ್ಷಣದ ಅವಕಾಶ ಪಡೆದು ವಿಚಾರವಂತರಾಗಿದ್ದರು. ಸಮಾಜ ಸುಧಾರಣೆಯ ಇವರ ಪ್ರಯತ್ನಕ್ಕೆ ಫಲ ಸಿಕ್ಕು ಊರಿಗೆ ಬಸ್‌ಸ್ಟ್ಯಾಂಡ್ ಕಟ್ಟುವ ಕಾರ್ಯಕ್ಕೆ ಗುದ್ದಲಿ ಪೂಜೆ ಮಾಡಲು ಮಂತ್ರಿಗಳು ಆಗಮಿಸಿದರು. ಇವರ ಏಳಿಗೆ ಸಹಿಸದ ಮೇಲ್ವರ್ಗದ ಕೆಲ ಪುಂಡರು ಕೇರಿಯೊಳಗೆ ಬಸ್‌ಸ್ಟ್ಯಾಂಡ್ ಆಗುತ್ತಿರುವುದನ್ನು ವಿರೋಧಿಸಿ ಕಾರ್ಯಕ್ರಮವನ್ನು ಹಾಳು ಮಾಡುತ್ತಾರೆ. ಈ ಗಲಾಟೆಯಲ್ಲಿ ಕೆಳವರ್ಗದ ಶಿವರಾಜನ ಕೊಲೆಯಾಗುತ್ತದೆ. ವಿಷಮ ಪರಿಸ್ಥಿತಿಗೆ ಸಿಕ್ಕ ಊರಿನ ಅಮಾಯಕರ ಜೀವನ ಅಸ್ತವ್ಯಸ್ತವಾಗುತ್ತದೆ. ಕೇರಿಯಲ್ಲಿ ಬೋರಿಂಗ್ ಕೆಟ್ಟಕಾರಣ ಕೇರಿಮಂದಿಗೆ ನೀರೇ ಇಲ್ಲದಂತಾಯಿತು. ಮೇಲ್ವರ್ಗದವರು ವಾಸಿಸುವ

ಊರ ಬೋರಿಂಗಿನಿಂದ ಕೆಳವರ್ಗದ ಜನ ಡಿ.ಸಿ.ಯವರ ಅಪ್ಪಣೆ ಮೇರೆಗೆ ನೀರು ತರುತ್ತಾರೆ. ಆದರೆ ಇದನ್ನು ಸಹಿಸದ ಮೇಲ್ವರ್ಗದವರು ಕೇರಿಯೊಳಗೆ ನುಗ್ಗಿ ಅಮಾಯಕರ ಮೇಲೆ ಗಂಭೀರವಾಗಿ ಹಲ್ಲೆ ನಡೆಸಿ, ತುಂಬಿಕೊಂಡಿದ್ದ ನೀರಿನ ಗಡಿಗೆ, ಕೊಡಗಳನ್ನು ಒಡೆದು ಉರುಳಿಸುತ್ತಾರೆ. ಇದರಿಂದ ರೊಚ್ಚಿಗೆದ್ದ ಕೇರಿಯ ಮಂದಿ ಮೇಲ್ವರ್ಗದವರಿಗೆ ಬುದ್ಧಿ ಕಲಿಸಲು ಸಮಯ ಕಾಯುತ್ತಾರೆ. ಊರಿನಲ್ಲಿ ಬೋರಿಂಗ್ ಕೆಟ್ಟ ಸಂದರ್ಭದಲ್ಲಿ ಮೇಲ್ವರ್ಗಕ್ಕೆ ನೀರು ಕೊಡಲು ನಿರಾಕರಿಸುವ ಕೆಳವರ್ಗದ ಶಿಕ್ಷಿತ ಯುವಕರನ್ನು ಹಳೆ ತಲೆಮಾರಿನ ಜನ ಶಪಿಸುತ್ತಾರೆ, ಮೇಲ್ವರ್ಗದವರ ವಿರುದ್ಧ ಹೋಗದಂತೆ ಬೇಡಿಕೊಳ್ಳುತ್ತಾರೆ. ಪರಂಪರೆಯಿಂದ ಶೋಷಣೆಯನ್ನು ಒಪ್ಪಿಕೊಂಡೆ ಬದುಕಿದವರನ್ನು ಪುರುಷೋತ್ತಮ 'ಹೆಜ್ಜೆಕುಂತವರು' ಎಂದು ಹೀಯಾಳಿಸಿ ಅವರ ವಿರೋಧವನ್ನು ತಳ್ಳಿ ಹಾಕುತ್ತಾನೆ. ಸಿದ್ಧಪ್ಪನು ಹೊಸ ತಲೆಮಾರಿನ ಕೆಳವರ್ಗದವರ ಆಲೋಚನೆಗಳನ್ನು ಭಾವುಕ ನೆಲೆಯಲ್ಲಿ ರೂಪಿಸದೆ, ವಾಸ್ತವಿಕತೆಯ ಗಟ್ಟಿ ನೆಲೆಯಲ್ಲಿಯೇ ಬೆಳೆಸುತ್ತಾನೆ. ಅಂಬೇಡ್ಕರ್ ಎಂಬ ವ್ಯಕ್ತಿ ಕೇವಲ ಕೇರಿಗೆ ಸೀಮಿತಗೊಳ್ಳುವ ವ್ಯಕ್ತಿ ಆಗಬಾರದು. ಕೆಳವರ್ಗದವರ ಸಮುದಾಯಕ್ಕೆ ಸಂಬಂಧಿಸಿದ ಆಲೋಚನೆಗಳು ಅವರಲ್ಲಿಯೇ ಕೇಂದ್ರೀಕೃತವಾಗಿ ಮತ್ತೊಮ್ಮೆ ಪ್ರತ್ಯೇಕತೆಯನ್ನೇ ಬಿಂಬಿಸುವಂತಾಗಬಾರದು. ಸಾರ್ವತ್ರಿಕ ಪ್ರಜ್ಞೆಯ ಭಾಗವಾಗುವ, ಸರ್ವರಿಂದ ಮಾನ್ಯತೆ ಪಡೆಯುವ ಅಂಬೇಡ್ಕರರ ವ್ಯಕ್ತಿತ್ವವನ್ನು ನಿರ್ದಿಷ್ಟ ಸಮುದಾಯಕ್ಕೆ ಸೀಮಿತಗೊಳಿಸುವ ಮೂಲಕ ಮೇಲು-ಕೀಳೆಂಬ ತಾರತಮ್ಯವನ್ನು ಒಪ್ಪಿಕೊಳ್ಳುವಂತಾಗಬಾರದೆಂಬ ಸಿದ್ಧಪ್ಪನ ನಿಲುವು ಕೆಳವರ್ಗದ ಯುವಕರ ಆಲೋಚನೆಯನ್ನು ವಿಶಾಲ ವ್ಯಾಪ್ತಿಗೆ ತೆರೆದುಕೊಳ್ಳುವಂತೆ ಮಾಡುತ್ತದೆ. ಮೇಲ್ವರ್ಗದವರಿಂದ ಅಸ್ಪೃಶ್ಯ ಸ್ಥಿತಿಗಿಳಿದಿದ್ದ ಇವರು ಸ್ವತಃ ತಮ್ಮ ಕೈಯಾರೆ ನೀರು ಹೊತ್ತು ಊರೊಳಗೆ ಹೋಗಿ ಮೇಲ್ವರ್ಗ ದವರಿಗೆ ನೀರು ಕೊಡುವಲ್ಲಿ ಸಂಘರ್ಷದ ಸತ್ವಯುತ ನಿರ್ಧಾರ ಅಭಿವ್ಯಕ್ತಗೊಳ್ಳುತ್ತದೆ.

ಕುಂ. ವೀರಭದ್ರಪ್ಪನವರ ಕಥನ ಮೇಲ್ವರ್ಗದವರಿಂದ ಉಂಟಾದ ಶೋಷಣೆಯನ್ನು ವಿರೋಧಿಸುವ ಕೆಳವರ್ಗದವರ ಬದುಕಿನ ಕ್ರೋಧವನ್ನೇ ತಿಳಿಸುತ್ತದೆ. ಫ್ಯೂಡಲ್ ವ್ಯವಸ್ಥೆಯ ದರ್ಪದಲ್ಲಿ ತಮಗಾದ ಅನ್ಯಾಯದಿಂದಲೇ ಸಿಟ್ಟಿಗೆದ್ದು ತಿರುಗೇಟು ಕೊಡುವ ಕೆಳವರ್ಗದವರ ಪ್ರತಿಭಟನೆ ಜನಾಂಗವೊಂದರ ಎಚ್ಚೆತ್ತ ಸ್ಥಿತಿಯನ್ನೇ ತಿಳಿಸುತ್ತದೆ. ಹಸಿವಿನ ಅಸಹಾಯಕತೆಯಲ್ಲೆ ನರಳುವ ಕೆಳವರ್ಗ ಹಾಗೂ ಸಂಪತ್ತಿನ ಕೇಂದ್ರೀಕರಣದಿಂದಲೇ ಸೊಕ್ಕಿರುವ ಮೇಲ್ವರ್ಗದ ದರ್ಪ ಕತೆಯಲ್ಲಿ ಕಂಡುಬರುವ ಎರಡು ಮುಖ್ಯ ಭಾಗಗಳು. ಮೇಲ್ವರ್ಗದ ದರ್ಪವನ್ನು ಕೊನೆಗಾಣಿಸುವ ತಾವು ಬಯಸಿದ ನ್ಯಾಯವನ್ನು ತಮ್ಮ ಬದುಕಿಗೆ ಪಡೆಯಲಿಚ್ಛಿಸುವ ಕೆಳವರ್ಗದವರ ಸಂಘರ್ಷವನ್ನು ಇವರ ಕತೆಗಳು ಮುನ್ನೆಲೆಗೆ ತರುತ್ತವೆ. 'ಕಪ್ಪು ನೆಲದಲ್ಲೊಂದು ಕೆಂಪು ಕತೆ' (ಕುಂ. ವೀರಭದ್ರಪ್ಪ) ಎಂಬ ಕತೆಯ ಪರತ ತನಗೆ ಸರಕಾರದಿಂದ ಎರಡೆಕರೆ ಭೂಮಿ ಸಿಗುವುದೆಂಬ ಆಸೆಯಲ್ಲಿ ಬದುಕಿಗೆ ಚೈತನ್ಯ ತಂದುಕೊಂಡಿರುತ್ತಾನೆ. ಈ ರೀತಿ ಉಳುಮೆಗೆ ಭೂಮಿಯನ್ನು ಸರಕಾರ ದಲಿತರಿಗೆ ಕೊಡುತ್ತದೆಂಬ ಸುದ್ದಿಯನ್ನು ಕುಲಕರ್ಣಿಯಿಂದ ತಿಳಿದ ಪರತ ಅದಕ್ಕಾಗಿ ತಗಲುವ ವೆಚ್ಚವನ್ನು ಮಗನನ್ನು ಜೀತಕ್ಕೆ ನಿಲ್ಲಿಸಿ ತಂದುಕೊಡುತ್ತಾನೆ. ನಿಜವಾದ

ಉಳುಮೆದಾರರಿಗೆ ಭೂಮಿ ನೀಡುವ ಸರಕಾರದ ಯೋಜನೆಯನ್ನು ನೆನೆದು ತನ್ನ ಕಷ್ಟಗಳೆಲ್ಲ ಪರಿಹಾರ ಕಾಣುತ್ತವೆ ಎಂದು ಬಗೆದಿದ್ದ ಪರತನಿಗೆ ನಿರಾಸೆಯಾಗುತ್ತದೆ. ಗೌಡ ಮತ್ತು ಕುಲಕರ್ಣಿ ಪರತನಿಗೆ ಭೂಮಿ ಸಿಗದಂತೆ ಮಾಡುತ್ತಾರೆ. ಉಳುಮೆ ಭೂಮಿಯೂ ಇಲ್ಲದೆ, ಗೌಡನ ಕೋಪಕ್ಕೆ ಬಲಿಯಾಗಿ ದುಡಿತಕ್ಕೆ ಕೂಲಿಯೂ ಸಿಕ್ಕದೆ, ಮಗನನ್ನು ಜೀತಕ್ಕೆ ತಳ್ಳಿದ ದುಃಖಿಗಳೆಲ್ಲವೂ ಕೂಡಿ ಪರತನನ್ನು ಹಾಸಿಗೆ ಹಿಡಿಯುವಂತೆ ಮಾಡುತ್ತವೆ. ಸಿಟ್ಟಿಗೆದ್ದ ಪರತ ಜಿಲ್ಲಾ ಕಚೇರಿಗಳಲ್ಲಿ ಈ ವಿಷಯವನ್ನು ತಿಳಿಸುತ್ತಾನೆ. ಊರಿಗೆ ಮಂತ್ರಿಗಳು ಬರುವರು, ಅವರು ಮಾದಿಗರೆಂದು ತಿಳಿದು ಹಿಗ್ಗಿದ ಪರತ ತನಗಾದ ಅನ್ಯಾಯಕ್ಕೆ ಅವರಿಂದ ಪರಿಹಾರ ಸಿಗುವುದೆಂದು ಧೈರ್ಯ ತಂದುಕೊಳ್ಳುತ್ತಾನೆ. ಗೌಡನನ್ನು ವಿರೋಧಿಸಿ ನಿಂತು ಪರಂಪರೆಯಿಂದ ಬಂದಿದ್ದ ಜೀತವನ್ನು ಬಿಟ್ಟು ಉಳುಮೆದಾರರಾಗಬೇಕು, ರೈತರೆನಿಸಿಕೊಳ್ಳಬೇಕೆಂದು ಬಯಸಿದ್ದ ಪರತನಲ್ಲಿ ಹೊಸ ಬದುಕಿನ ಆಕಾಂಕ್ಷೆಗಳು ಹುಟ್ಟಿ ಆತನೊಂದಿಗೆ ಸಾಯುತ್ತವೆ. ಸ್ಥಿತಿವಂತರ ದಬ್ಬಾಳಿಕೆಗೆ ಸಿಕ್ಕ ಪರತನಿಗಾಗಲಿ, ಆತನ ಮುಂದಿನ ತಲೆಮಾರಿಗಾಗಲಿ ನ್ಯಾಯ ಮರೀಚಿಕೆಯಾಗಿದೆ.

'ಕುಬುಸ' (ಕುಂ. ವೀರಭದ್ರಪ್ಪ) ಕತೆಯು ಸಾಂಪ್ರದಾಯಿಕವಾಗಿ ನಡೆದು ಬಂದ ಒಂದು ಸಮುದಾಯದ ರೀತಿಗೂ ಆ ಸಮುದಾಯದಲ್ಲಿಯೇ ಬೆಳೆದ ಶಿಕ್ಷಿತ ವರ್ಗದಿಂದ ಕಂಡುಬರುವ ವಿರೋಧ ವನ್ನು ತಿಳಿಸುತ್ತದೆ. ವಡ್ಡಟ್ಟಿ ಗ್ರಾಮದ ನೆಟ್ಟಕಲ್ಲು ವಿದ್ಯಾವಂತನಾಗಿ ಆ ಗ್ರಾಮದ ಹಾಗೂ ತನ್ನ ಸಮುದಾಯದ ಮೊದಲ ಶಿಕ್ಷಿತನೆನಿಸಿಕೊಂಡಿದ್ದ. ಬೆಂಗಳೂರಿನಂತಹ ಮಹಾಪಟ್ಟಣದಲ್ಲಿ ಅಟೆಂಡರ್ ಕೆಲಸ ಪಡೆದು ಹೆಸರಾಗಿದ್ದ ನೆಟ್ಟಕಲ್ಲು ಮಿ. ವಡವಟ್ ಎಂದು ನಾಮಾಂತರಗೊಳ್ಳುತ್ತಾನೆ. ಬಂಡೆವ್ವಜ್ಜಿಯ ಮೊಮ್ಮಗನಾದ ಮಿ. ವಡವಟ್ ಕುಬುಸ ತೊಡುವ ಹುಡುಗಿಯನ್ನು ಮದುವೆಯಾಗುತ್ತಿರುವುದೇ ಆಕೆಯಲ್ಲಿ ಸಿಟ್ಟನ್ನು, ವಿರೋಧವನ್ನು ಹುಟ್ಟಿಸಿರುತ್ತದೆ. ಅಂತಸ್ತಿಗೆ ತಕ್ಕಂತೆ ಹೆಸರನ್ನು ಬದಲಿಸಿಕೊಂಡಿದ್ದ ಮಿ. ವಡವಟ್ ತನ್ನ ಕುಲದ ಆರಾಧ್ಯ ದೈವಗಳಾದ ಸುಂಕಲಮ್ಮ, ಕಂದಾರೆಮ್ಮನಂತಹ ಕ್ಷುದ್ರ ದೇವತೆಗಳ ಆರಾಧನೆಯನ್ನು ಕೈಬಿಟ್ಟು ಬೆಣ್ಣೆ ಆಂಜನೇಯ, ಚಲುವನಾರಾಯಣ ಮುಂತಾದ ಪ್ರಥಮದರ್ಜೆಯ ದೇವತೆಗಳಿಗೆ ನಡೆದುಕೊಳ್ಳತೊಡಗಿದ.

ಉಡುಸಲಮ್ಮ ದೇವತೆಯ ಪರಮಭಕ್ತಳಾದ ಬಂಡೆವ್ವಜ್ಜಿ ತಮ್ಮ ಕುಲದೈವವೇ ಕುಬುಸ ತೊಡದಿರುವಾಗ ನರಮಾನವರಾದ ನಾವು ಕುಬುಸ ತೊಡುವುದು ಅಪರಾದವೆಂದೇ ತಿಳಿದಿದ್ದಳು. ಮಿ. ವಡವಟ್ ಹಾಗೂ ಆತನ ಹೆಂಡತಿ ಕೊನೆಗಾಲದಲ್ಲಿ ಅಜ್ಜಿಗೆ ಹಣ ಕಳುಹಿಸುವುದನ್ನು ನಿಲ್ಲಿಸಲು ಯೋಚಿಸಿ ಆಕೆಯನ್ನು ತಮ್ಮ ಪಟ್ಟಣದ ಮನೆಗೆ ಕರೆತರುತ್ತಾರೆ. ಕುಬುಸವಿಲ್ಲದ ಆಕೆಯ ಉಡುಗೆ ಪಟ್ಟಣಿಗರಿಗೆ ಆಶ್ಚರ್ಯ, ವಿನೋದ, ಅಸಹ್ಯದ ಸಂಗತಿಯಾಗುತ್ತದೆ. ಹೇಗಾದರೂ ಮಾಡಿ ಅಜ್ಜಿಗೆ ಕುಬುಸ ತೊಡಿಸಬೇಕೆಂದು ದಂಪತಿಗಳಿಬ್ಬರೂ ಹರಸಾಹಸ ಪಡುತ್ತಾರೆ. ಮಿ. ವಡವಟ್‌ನ ಹೆಂಡತಿ ಕುಬುಸ ತೊಡುವ ಅಜ್ಜಿಯರನ್ನು ಕರೆತಂದು ಬಂಡೆವ್ವಜ್ಜಿಯಲ್ಲಿ ಕುಬುಸ ತೊಡುವ ಪ್ರಜ್ಞೆ ಉಂಟುಮಾಡಲು ಪಡುವ ಕಷ್ಟಗಳೆಲ್ಲವೂ ಹಾಸ್ಯಮಯವಾಗಿ ಕಂಡುಬರುತ್ತವೆ. ಸಂಪ್ರದಾಯ ಬಿಡದ ಅಜ್ಜಿಯಿಂದ ಬೇಸತ್ತ

ದಂಪತಿಗಳು ಅಜ್ಜಿಯನ್ನು ಊರಿಗೆ ಸಾಗು ಹಾಕುತ್ತಾರೆ. ಸಾಂಪ್ರದಾಯಿಕ ಬದುಕನ್ನು ದೇವರ ಹೆಸರಿನಲ್ಲೊ, ರೂಢಿಯ ಹಿನ್ನೆಲೆಯಲ್ಲಿಯೋ ಉಳಿಸಿಕೊಳ್ಳಬಯಸುವ ಸಮುದಾಯಗಳಿಗೂ, ಆಧುನಿಕತೆಯ ಜೀವನ ಶೈಲಿಗೂ ಘರ್ಷಣೆ ಏರ್ಪಡುತ್ತದೆ. ಆಧುನಿಕತೆಯ ಹೇರಿಕೆಗಳಿಗೆ ಮಣಿಯದೆ ಉಳಿಯುವ ಬಂಡೆವಜ್ಜಿಯ ಮನಸ್ಥಿತಿಗೂ, ತನ್ನನ್ನು ಕೀಳು ಕುಲದವನೆಂದು ಪರಿಭಾವಿಸಬಾರದೆಂದು ತನ್ನ ಹೆಸರು, ದೈವ, ನಡೆ-ನುಡಿಗಳೆಲ್ಲವನ್ನು ಬದಲಾಯಿಸಿಕೊಳ್ಳುವ ಮಿ. ವಡವಟ್ಟಿನ ಮನಸ್ಥಿತಿಗೂ ಅಂತರವಿದೆ. ಅತಿಯಾದ ಸಾಂಪ್ರದಾಯಿಕತೆ ಮತ್ತು ತನ್ನ ಅನನ್ಯತೆಯನ್ನೇ ತೊರೆದು ಪರಕೀಯವಾಗುವ ಮನುಷ್ಯನ ಎರಡೂ ಸ್ಥಿತಿಗಳು ಪ್ರಗತಿಯನ್ನು ಸಾಧಿಸಲಾರವು. ಇಂತಹ ಬದಲಾವಣೆಯ ಸಂಘರ್ಷಗಳು ಸಾಂಸ್ಕೃತಿಕವಾಗಿ ಹೊಸದೊಂದನ್ನು ಸೃಷ್ಟಿಸುವ, ರೂಪಿಸಿಕೊಳ್ಳುವ ಶಕ್ತಿಯನ್ನು ಕಳೆದುಕೊಳ್ಳುತ್ತವೆ. ಈ ಕಾರಣಕ್ಕಾಗಿಯೇ ತನಗಿಂತ ಮೇಲು ಎಂದು ಪರಿಭಾವಿಸುವ ಸಾಂಸ್ಕೃತಿಕ ಸಂಗತಿಗಳನ್ನು ಅನುಸರಿಸುವುದರ ಮೂಲಕ ಅದನ್ನು ಉನ್ನತೀಕರಿಸುವ, ತನ್ನದನ್ನು ಸಾಂಸ್ಕೃತಿಕ ಹಿಂದುಳಿದಿರುವಿಕೆ ಎಂದು ಅಂಗೀಕರಿಸುವ ಸ್ಥಿತಿಯಲ್ಲಿ ಕೆಳವರ್ಗಗಳು ಉಳಿದಿವೆ.

ಇತರೆ ಹಿಂದುಳಿದ ಸಮುದಾಯಗಳಲ್ಲಿ ಶಿಕ್ಷಣಕ್ಕೆ ತೆರೆದುಕೊಂಡಿರುವವರಿಂದ ಉಂಟಾಗಿರುವ ಬದಲಾವಣೆಗಳನ್ನು ಹೈದರಾಬಾದ್ ಕರ್ನಾಟಕದ ಕಥನ ಸಾಹಿತ್ಯದಲ್ಲಿ ಕಾಣಲಾಗುತ್ತದೆ. ಕೆಲ ಶಿಕ್ಷಿತರ ಬದಲಾವಣೆಗಳು ತಮ್ಮ ಸಮುದಾಯದ ಸಂಸ್ಕೃತಿಗೆ ವಿಮುಖರಾಗಿಯೇ ನಡೆದಿರುವುದು ಕಂಡು ಬರುತ್ತವೆ. 'ಕುರುಮಯ್ಯ ಮತ್ತು ಅಂಕುಶದೊಡ್ಡಿ' (ಜಂಬಣ್ಣ ಅಮರಚಿಂತ) ಕಾದಂಬರಿಯಲ್ಲಿ ಕುರುಮಯ್ಯನ ಮಗ ಗುಲಬರ್ಗಾದಲ್ಲಿ ಓದುತ್ತಿದ್ದವನು ಕ್ರಿಶ್ಚಿಯನ್ನ ಹುಡುಗಿಯನ್ನು ಮದುವೆ ಮಾಡಿಕೊಂಡು ಬೊಂಬಾಯಿ ಕಡೆ ಓಡಿ ಹೋದ ಸುದ್ದಿ ಬರುತ್ತದೆ. ಮುಪ್ಪಿನ ಕಾಲಕ್ಕೆ ತಮ್ಮನ್ನು ಒಂಟಿಯಾಗಿಸಿದ ಮಗನ ಕೃತ್ಯದಿಂದ ಕುರುಮಯ್ಯ ದುಃಖಿತನಾಗುತ್ತಾನೆ. ತಮ್ಮ ಜಾತಿ-ಕುಲ ಬಿಟ್ಟು ಹೋದ ಮಗನ ಬಗ್ಗೆ ಕುರುಮಯ್ಯ ಯೋಚಿಸುತ್ತಿರುವಾಗ ಆತನಿಗೆ ಸಾಂತ್ವಾನ ಹೇಳಲು ಬಂದವರು ಸನಾದಿ ಸಣ್ಣಪ್ಪನ ಮಗ ತನ್ನನ್ನು ಮೇಲ್‌ಜಾತಿಯವನೆಂದು ಹೇಳಿಕೊಳ್ಳುತ್ತ ತನ್ನ ಹೆಸರಿನ ಮುಂದೆ 'ರಾವ್' ಅಂತ ಸೇರಿಸಿಕೊಂಡಿರುವುದನ್ನು ಈರಗ ತಿಳಿಸುತ್ತಾನೆ. ಹೊಲೇರ ಮೂಕಪ್ಪನ ಮಗ ಓದಿಕೊಂಡು ವಕೀಲನಾಗಿ ತಮ್ಮ ಜನರಿಗೆ ಉತ್ತಮ ಕೆಲಸಗಳನ್ನು ಮಾಡಿಕೊಟ್ಟಿರುವುದನ್ನು ದವಲ್ಯಾ ನೆನಪಿಸುತ್ತಾನೆ. ಹೀಗೆ ಶಿಕ್ಷಿತ ಯುವಕರು ತಮ್ಮ ಸಮುದಾಯದ ಕಷ್ಟಕಾರ್ಪಣ್ಯಗಳಿಗೆ ಸ್ಪಂದಿಸದೆ, ತಮ್ಮನ್ನು ಉನ್ನತ ಜಾತಿಯೊಂದಿಗೆ ಸೇರಿಸಿಕೊಳ್ಳುವ ಮೂಲಕ ಸಮುದಾಯದ ಸಂಸ್ಕೃತಿಯಿಂದ ವಿಮುಖರಾಗುತ್ತಿರುವುದು ತಿಳಿದುಬರುತ್ತದೆ. ಶಿಕ್ಷಿತರಿಂದ ಸಮುದಾಯಗಳಲ್ಲಿ ಆಗಬೇಕಿರುವ ಬದಲಾವಣೆಗಳು, ಪ್ರಗತಿಗಳು ಆಗದೆ ಇತರರೊಂದಿಗೆ ತಮ್ಮ ಹಿಂದುಳಿದಿರುವಿಕೆಯ ಬಗೆಗೆ ಪರಿತಪಿಸುತ್ತಲೇ ಕೊನೆಗಾಣುತ್ತಿದ್ದಾರೆ.

'ಗಾಂಧಿ ಗುಂಡು ಸಾವು ಇತ್ಯಾದಿ' ಎಂಬ ಬಿ.ಟಿ. ಲಲಿತನಾಯಕ್‌ರವರ ಕತೆಯಲ್ಲಿ ತೊಳಜಾ ದಂಪತಿಗಳು ತಮ್ಮ ಕಲಿತ ಮಗನಿಂದ ಬಹುವಾದ ನಿರೀಕ್ಷೆಗಳನ್ನು ಇಟ್ಟುಕೊಂಡಿರುತ್ತಾರೆ. ಆತನ ಓದಿಗಾಗಿ

ದಂಪತಿಗಳು ತುಂಬಾ ಶ್ರಮವಹಿಸಿರುತ್ತಾರೆ. ವಿದ್ಯಾವಂತನಾದ ಯುವಕ ತನ್ನಿಚ್ಛೆಯಂತೆ ಬ್ರಾಹ್ಮಣ ಹುಡುಗಿಯನ್ನು ಹೆತ್ತವರ ಒಪ್ಪಿಗೆಯಿಲ್ಲದೆ ವಿವಾಹವಾಗುತ್ತಾನೆ. ಕೌಟುಂಬಿಕವಾಗಿ ಮಗನಿಂದ ಉಂಟಾದ ಆಘಾತದಿಂದ ದಂಪತಿಗಳು ಜರ್ಜರಿತರಾಗುತ್ತಾರೆ. ತಾನು ಕೈಹಿಡಿದ ಬ್ರಾಹ್ಮಣ ಹುಡುಗಿ ಉನ್ನತ ಕುಲ, ಉತ್ತಮ ಸಂಸ್ಕೃತಿಯನ್ನು ಹೊಂದಿದವಳು ಎಂದು ನಿರ್ಧರಿಸುವ ಯುವಕ ಆಕೆಯನ್ನು ತನ್ನ ಸಮುದಾಯಕ್ಕೆ ತರಲು ಹಿಂಜರಿಯುತ್ತಾನೆ. ಉಚ್ಚ ಕುಲದ ತನ್ನ ಮಡದಿಗೆ ಕೆಳಸಮುದಾಯದವರೊಂದಿಗೆ ಬದುಕಲು ಸಾಧ್ಯವಾಗುವುದಿಲ್ಲ ಹಾಗಾಗಿ ತಾನು ತಂದೆ ತಾಯಿಗಳಿಂದ ದೂರ ಉಳಿಯುತ್ತಿರುವುದಾಗಿ ತಿಳಿಸುತ್ತಾನೆ. ತಮ್ಮ ಕುಲ, ಸಂಸ್ಕೃತಿಯನ್ನು ಸ್ವತಃ ಆ ಕುಲದ ವಿದ್ಯಾವಂತರು ಕೀಳೆಂದು ಪರಿಭಾವಿಸುತ್ತಿರುವ ದುರಂತ ಕತೆಯಲ್ಲಿ ಕಂಡು ಬರುತ್ತದೆ. ಪರಂಪರಾಗತವಾಗಿ ಬಂದ ಶ್ರೇಣೀಕೃತ ವ್ಯವಸ್ಥೆಯನ್ನು ವಿದ್ಯಾವಂತ ಯುವಕರು ಒಪ್ಪಿಕೊಳ್ಳುತ್ತಿರುವುದು, ಅದನ್ನೇ ಸಮರ್ಥಿಸುತ್ತಿರುವುದು ಮೂಲಭೂತವಾದದ ಗೆಲುವನ್ನೇ ತಿಳಿಸುತ್ತದೆ. ತನ್ನ ಕುಲದ ಶ್ರೇಷ್ಠತೆಯನ್ನು, ಸಾಂಸ್ಕೃತಿಕ ಅಭಿವೃದ್ಧಿಯನ್ನು ಮರೆತು ಸ್ವಾರ್ಥಿ ಗಳಾಗುತ್ತಿರುವವರಿಂದ ವಿಶಿಷ್ಟ ಸಾಂಸ್ಕೃತಿಕ ಜಗತ್ತು ನಮ್ಮಿಂದ ಮರೆಯಾಗುತ್ತಿದೆ. ಆಧುನಿಕತೆ, ಸಂಪ್ರದಾಯ ವನ್ನು ವಿರೋಧಿಸುವುದು ಸಕಾರಾತ್ಮಕವಾಗಿರಬೇಕೆ ವಿನಹ ತನ್ನ ಮೂಲ ನೆಲೆಯನ್ನೇ ಧಿಕ್ಕರಿಸಿ ಬೇರೆಲ್ಲೋ ಶ್ರೇಷ್ಠತೆಯನ್ನು ಹುಡುಕಿಕೊಂಡು ಹೋಗುವುದು ಸೂಕ್ತ ಕ್ರಮವಲ್ಲ. ಶ್ರೇಷ್ಠ ಕುಲವೆಂಬ ಭ್ರಮೆಗಳಲ್ಲಿ ಮೈಮರೆತ ಇಂತಹ ಯುವ ಜನಾಂಗದಿಂದ ತಮ್ಮದನ್ನು ಅರಿಯುವ, ಪರಿಷ್ಕರಿಸುವ, ಮುನ್ನೆಲೆಗೆ ತರುವ ಯೋಚನೆಗಳಿಲ್ಲದೆ ಇರುವಂತೆ ಬೇರೆ ಸಮುದಾಯದ ಸಮಗ್ರ ತಿಳುವಳಿಕೆಯೂ ಸಾಧ್ಯವಾಗದು.

'ಗತಿ' (ಬಿ.ಟಿ. ಲಲಿತನಾಯಕ್) ಕಾದಂಬರಿಯ ಚಂದು ವಿದ್ಯಾವಂತನಾಗಿದ್ದ. ಆದರೆ ಸ್ವಾರ್ಥಿ ಯಾಗಿರಲಿಲ್ಲ. ತನ್ನ ಸಮುದಾಯದ ಅಜ್ಞಾನ, ದುಷ್ಟತೆಗಳನ್ನು, ಮೂಢನಂಬಿಕೆಗಳನ್ನು ಕಳೆಯಲು ಪ್ರಯತ್ನಿಸುತ್ತಾನೆ. ಹಳೆ ತಲೆಮಾರಿನ ಜನರಿಂದ ತನ್ನ ಒಡಹುಟ್ಟಿದವನಿಂದ ನಾನಾ ರೀತಿಯ ಸಂಕಷ್ಟಗಳನ್ನು ಎದುರಿಸುವ ಚಂದು ಮಕ್ಕಳಿಗೆ, ವಯಸ್ಕರಿಗೆ ವಿದ್ಯೆ ಕೊಡಿಸಲು ಶಾಲೆ ಪ್ರಾರಂಭಿಸುತ್ತಾನೆ. ಲಂಬಾಣಿ ವೇಷದಲ್ಲಿದ್ದ ಸೋನಿ ಮುಂತಾದ ಸ್ತ್ರೀಯರಿಗೆ ಸೀರೆ ಕೊಡಿಸಿ ಅವರಲ್ಲಿ ಹೊಸ ಬದಲಾವಣೆ ತರಲು ಪ್ರಯತ್ನಿಸಿ ಯಶಸ್ವಿಯಾಗುತ್ತಾನೆ. ಚಂದುನ ಅಣ್ಣ ವಿದ್ಯಾವಂತನಾಗಿದ್ದರೂ ಪ್ರಯೋಜನವಾಗದೆ ಇರುವುದು, ಆತನ ಬದುಕಿನ ರೀತಿಯಲ್ಲಿ ತಿಳುವಳಿಕೆಯೇ ಇಲ್ಲದಿರುವುದನ್ನು ಕಾದಂಬರಿ ತಿಳಿಸುತ್ತದೆ. ವಿದ್ಯಾವಂತ ರಾಗುವುದು ಕೇವಲ ಸ್ವಾರ್ಥಿಗಳಾಗುವ ಉದ್ದೇಶದಿಂದ ಅಲ್ಲ. ಸಂಸ್ಕೃತಿಯ, ಪ್ರಗತಿಯ ಸಂದರ್ಭದಲ್ಲಿ ವಿದ್ಯಾವಂತರ ಶ್ರಮದ ಅಗತ್ಯವಿದೆ. ವಿಚಾರವಂತರಿಂದ ನಡೆಯುವ ಬದಲಾವಣೆಗಳು ಆಯಾ ಸಮುದಾಯಕ್ಕೆ ಹಾಗೂ ಸುತ್ತಲಿನ ಪ್ರದೇಶಕ್ಕೆ ಗಟ್ಟಿ ನೆಲೆಯನ್ನು ಒದಗಿಸುತ್ತದೆ.

ಮೇಲ್ವರ್ಗದ ಸಮುದಾಯಗಳಲ್ಲಿಯೂ ಸಾಂಪ್ರದಾಯಿಕ ಆಲೋಚನೆಗಳ ಹಾಗೂ ಆಧುನಿಕ ವಿಚಾರಗಳ ನಡುವಿನ ಸಂಘರ್ಷ ಕಂಡುಬರುತ್ತದೆ. 'ಗೋಮಯ ವಿವೇಕ' (ಜಯತೀರ್ಥ ರಾಜಪುರೋಹಿತ) ಕತೆಯ ಗೋದಾಬಾಯಿಯ ಸಾಂಪ್ರದಾಯಿಕ ನಿಲುವು, ಸೊಸೆ ಮಮತಾಳ ಅತ್ಯಾಧುನಿಕ ಬದುಕಿನ ರೀತಿಯ

ನಡುವೆ ವ್ಯತ್ಯಾಸ ಕಂಡು ಬರುತ್ತದೆ. ಇವರಲ್ಲಿನ ವಿಭಿನ್ನ ಆಲೋಚನೆಗಳು ಪರಸ್ಪರ ಭಿನ್ನಾಭಿಪ್ರಾಯಗಳಿಗೆ ಕಾರಣವಾಗುತ್ತದೆ. ಆದರೆ ಸೊಸೆಯು ವಿವೇಕದಿಂದ ಕೌಟುಂಬಿಕ ನೆಮ್ಮದಿಗೆ ಧಕ್ಕೆ ಆಗುವುದಿಲ್ಲ. ಅತ್ತೆ ಮೊಸೇಕ್ ನೆಲವನ್ನು ಸಗಣಿಯಿಂದ ಸಾರಿಸುತ್ತಾಳೆ. ಅದನ್ನೆ ಸೊಸೆ ಅನುಸರಿಸಬೇಕೆಂದು ನಿರೀಕ್ಷಿಸುತ್ತಾಳೆ. ಆದರೆ ಸೊಸೆ ಮೊಸೆಕ್ ನೆಲವನ್ನು ಯಾವುದರಿಂದ ಹೇಗೆ ತೊಳೆಯಬೇಕೆಂದು ತೋರಿಸಿಕೊಡುತ್ತಾಳೆ. ಸಂಪ್ರದಾಯವನ್ನು ಯಥಾವತ್ತಾಗಿ ಅನುಸರಿಸುವ ಅತ್ತೆಗೆ ಸೊಸೆಯ ನಿಲುವು ಅಹಂಕಾರವಾಗಿ, ಅಗೌರವದ ವರ್ತನೆಯಾಗಿಯೂ ಕಂಡುಬರುತ್ತದೆ. ಈ ಸಂಘರ್ಷ ಸುಖಾಂತವಾಗಿ ಅತ್ತೆಯೇ ಸೊಸೆಯ ಹೊಸ ತಿಳುವಳಿಕೆಯನ್ನು ಯೋಚಿಸಿ ಒಪ್ಪಿಕೊಳ್ಳುತ್ತಾಳೆ. ಇದರಿಂದ ಸಂಪ್ರದಾಯದ ಶರಣಾಗತಿಯಾಯಿತು. ಆಧುನಿಕ ವಿಚಾರ ಗೆದ್ದಿತೆಂಬ ಅರ್ಥ ಇಲ್ಲಿನದಲ್ಲ. ಹೊಸ ವಿಚಾರವನ್ನು ಘರ್ಷಣೆಗಳಿಲ್ಲದೆ ತಿಳಿಸುವ ಸೊಸೆಯ ವಿವೇಕಕ್ಕೆ ವಿಚಾರ ಪೂರ್ಣವಾದ ಒಪ್ಪಿಗೆ ಮತ್ತು ಅದಕ್ಕೆ ಸೂಕ್ತ ವಾತಾವರಣ ಒದಗಿಸಲು ಹಿರಿಯ ತಲೆಮಾರುಗಳು ಬದಲಾವಣೆಗಳನ್ನು ಒಪ್ಪಿಕೊಳ್ಳುವ ರೀತಿಯೂ ಮುಖ್ಯವಾಗಿದೆ.

'ರತ್ನ ಎಂಬ ಹುಡುಗಿಯೂ ಉಗಾದಿ ಎಂಬ ಆಟವೂ' ಮತ್ತು 'ಸಿದ್ಧನು ಗುರಿ ಇಟ್ಟಿದ್ದು' (ಕುಂ. ವೀರಭದ್ರಪ್ಪ) ಕತೆಗಳಲ್ಲಿ ಮೇಲ್ವರ್ಗದ ವರ್ತನೆಗಳ ಬಗೆಗಿನ ವಿಮರ್ಶೆಯಿದೆ. ಜಾತಿಯ ಕಾರಣಕ್ಕಾಗಿ ಹುಟ್ಟಿಕೊಂಡ ಅಹಂನ್ನು ವಿರೋಧಿಸುವ ಧೋರಣೆಗಳು ಕಂಡುಬರುತ್ತವೆ. ಸಂಪ್ರದಾಯದ ಹೆಸರಲ್ಲಿ ಜನಸಾಮಾನ್ಯರ ಮನೆಯಲ್ಲಿ ತಮ್ಮ ಸ್ವಾರ್ಥಗಳನ್ನು ಈಡೇರಿಸಿಕೊಳ್ಳುವ ಜಂಗಮರನ್ನು 'ರತ್ನ ಎಂಬ ಹುಡುಗಿಯೂ ಉಗಾದಿ ಎಂಬ ಆಟವೂ' ಕತೆ ವಿಮರ್ಶಿಸುತ್ತದೆ. ಸಂಪ್ರದಾಯಗಳು ಜನಸಾಮಾನ್ಯರನ್ನು ದುರುಪಯೋಗಪಡಿಸಿಕೊಳ್ಳುವ ಅಸ್ತ್ರಗಳಾಗಬಾರದು. ಇಂತಹ ಸಂಪ್ರದಾಯಗಳ ಬಗೆಗೆ ಮೂಡಬೇಕಾದ ಪ್ರಜ್ಞೆ ಮೂಡಿಲ್ಲವೆಂಬುದನ್ನೇ ಇದು ತಿಳಿಸುತ್ತದೆ. ಸಂಪ್ರದಾಯವನ್ನು ಪರಿಪಾಲಿಸುವವರು, ಹೇರುವವರಿಂದ ಆಗುವ ಕೌಟುಂಬಿಕ ಬಿಕ್ಕಟ್ಟುಗಳು ಇಲ್ಲಿ ಕಂಡುಬರುವ ರೀತಿಗಳು ಅವುಗಳ ಬದಲಾವಣೆ ಮಾಡಲೇಬೇಕೆಂಬ ಒತ್ತಾಯವನ್ನು ಹೇರುತ್ತವೆ. 'ರತ್ನ' ಎಂಬ ಹುಡುಗಿ ಉಗಾದಿ ಹಬ್ಬದ ಊಟ ಮಾಡಲು ಬರುವ ಅಯ್ಯನವರ ವೇಷ ಹೊತ್ತ ತನ್ನ ಅಣ್ಣನನ್ನು ಪೊರಕೆಯಿಂದ ಹೊಡೆಯುವುದು ತನ್ನ ಆಶಯವನ್ನು ಸ್ಪಷ್ಟಪಡಿಸುತ್ತದೆ.

'ಸಿದ್ಧನು ಗುರಿ ಇಟ್ಟಿದ್ದು' (ಕುಂ. ವೀರಭದ್ರಪ್ಪ) ಕತೆಯು ಕೆಳವರ್ಗದ ಹುಡುಗನಿಂದ ಕಳಿಸುವ ಮುಖ್ಯ ಸಂದೇಶ ಕಂಡು ಬರುತ್ತದೆ. ಕೆಳವರ್ಗದ ಸಿದ್ಧ ತನ್ನ ಮನೋಇಚ್ಛೆಯಂತೆ ಮೀನು ತಿನ್ನಲು ಬಯಸುತ್ತಾನೆ. ಮೀನು ಹಿಡಿಯಲು ಮಠದ ಕೊಳಕ್ಕೆ ಹೋಗುತ್ತಾನೆ. ಮಠದಲ್ಲಿ ಎಲ್ಲಾ ಜಾತಿಯ ಮಕ್ಕಳಿಗೆ ಓದುವ ಅವಕಾಶ ಸಿಕ್ಕಿದ್ದರೆ ತನಗೂ ಅಲ್ಲಿ ಶಿಸ್ತಿನ ಓದು ಸಾಧ್ಯವಾಗುತ್ತಿತ್ತೆಂದು ಯೋಚಿಸುತ್ತಾನೆ ಅಥವಾ ತಾನೇ ಮೇಲ್ವರ್ಗದಲ್ಲಿ ಹುಟ್ಟಬೇಕಿತ್ತೇನೋ ಎಂದು ಯೋಚಿಸಿ ಕೊಳದ ಮೀನು ಹಿಡಿಯಲು ಮುಂದಾಗುತ್ತಾನೆ. ಮಠದ ಬಗೆಗೆ, ಮಠದ ಸ್ವಾಮಿಯ ಬಗೆಗೆ ತನಗಿದ್ದ ಭವ್ಯವಾದ, ಉದಾತ್ತವಾದ ಆಲೋಚನೆಗಳೆಲ್ಲವನ್ನೂ ಸಿದ್ಧ ತನ್ನೊಳಗೆ ಕ್ರೂಢೀಕರಿಸಿಕೊಂಡಿರುತ್ತಾನೆ. ಆದರೆ ಕೊಳದಲ್ಲಿ ಮೀನು

ಹಿಡಿದ ತಪ್ಪಿಗೆ ತನ್ನನ್ನು ಕ್ಷಮಿಸಿ ದಯೆ ತೋರಿಸುತ್ತಾರೆಂದು ಬಗೆದಿದ್ದ ಸಿದ್ಧನಿಗೆ ದೊಡ್ಡ ಸ್ವಾಮಿಗಳು ಜಾಡಿಸಿ ಒದ್ದದ್ದು ಆಘಾತವನ್ನುಂಟು ಮಾಡುತ್ತದೆ. 'ದಯೆಯೇ ಧರ್ಮದ ಮೂಲವೆಂಬ' ಶರಣರ ಮಾತುಗಳು ಮಠದಲ್ಲಿ ಸತ್ತಿವೆ. ದಯಾರಹಿತ ವರ್ತನೆಯನ್ನು ವಿರೋಧಿಸುವ ಸಿದ್ಧ ಸ್ವಾಮಿಗಳ ಅಡ್ಡಪಲ್ಲಕ್ಕಿಯ ಸಮಯ ಕಾದಿದ್ದು ಗುರಿಯಿಟ್ಟು ಅವರ ತಲೆಗೆ ಹೊಡೆಯುತ್ತಾನೆ. ತಲೆಗೆ ಗುರಿಯಿಡುವಿಕೆ ಸಹಜವಾಗಿ ಕಂಡು ಬಂದರು ಜಾತಿ ಅಹಂನ್ನು ಹೊತ್ತ, ಅದನ್ನು ಪೋಷಿಸುವ ಮೇಲ್ವರ್ಗದ ಇಂತಹ ಮತಗಳ ಅರ್ಥಹೀನತೆಯನ್ನೇ ಉರುಳಿಸಬಯಸುವ ಸಿದ್ಧನ ಗುರಿ ಬದಲಾವಣೆಗಳನ್ನು ಆಕ್ರೋಶದಿಂದಲೇ ತಿಳಿಸುತ್ತದೆ.

'ಕಾಳ ಬೆಳುದಿಂಗಳ ಸಿರಿ' (ರಾಜಶೇಖರ ಹತಗುಂದಿ) ಕತೆಯ ಬಸ್ಲಿಂಗಪ್ಪ ಹಾಗೂ ಸಾಹೇಬಗೌಡ ಇಬ್ಬರೂ ಸ್ನೇಹಿತರು. ಸಾಹೇಬಗೌಡ ಕಾಂಗ್ರೆಸ್ ಪಾರ್ಟಿ ಹಿಡಿದು ರಾಜಕೀಯಕ್ಕೆ ಇಳಿದ, ಹಿಂದಿನ ಪರಂಪರೆಯ ದರ್ಪ ಶೋಷಣೆಗಳೇ ಇವನಲ್ಲಿ ಮುಂದುವರೆದವು. ಸಮಾಜವಾದ, ಸಮತಾವಾದವನ್ನು ತಿಳಿದುಕೊಂಡಿದ್ದ ಬಸ್ಲಿಂಗಪ್ಪ ಶಿಕ್ಷಕ ವೃತ್ತಿಯನ್ನು ಮಾಡುತ್ತ ಸಾಮಾಜಿಕವಾಗಿ ಸರ್ವರಿಗೂ ದಕ್ಕಬೇಕಾದ ಅವಕಾಶಗಳ ಬಗ್ಗೆ ತಿಳಿಸುತ್ತಿದ್ದ. ಇಬ್ಬರಲ್ಲಿ ಭಿನ್ನಾಭಿಪ್ರಾಯಗಳಿದ್ದರೂ ಸ್ನೇಹ ಮಾತ್ರ ಉಳಿದಿತ್ತು. 'ಲ್ಯಾಂಡ್ ಸೀಲಿಂಗ್ ಆ್ಯಕ್ಟ್' ಬಂದಾಗ ಸಾಹೇಬಗೌಡ ಕುತಂತ್ರ ನಡೆಸಿ ತನ್ನ ಎರಡು ನೂರು ಎಕರೆ ಜಮೀನನ್ನು ಹೆಣ್ತಿ, ಮಕ್ಕಳು, ಬೀಗರು ಮುಂತಾದವರ ಹೆಸರಿಗೆ ಪಟ್ಟಾ ಮಾಡಿಸಿ ಉಳಿಸಿಕೊಳ್ಳುತ್ತಾನೆ. ಸಂಪತ್ತಿನ ವಿಕೇಂದ್ರೀಕರಣವನ್ನು ಬಯಸುವ ಬಸ್ಲಿಂಗಪ್ಪ ಸಾಹೇಬ ಗೌಡನ ಇಂತಹ ಕೃತ್ಯಗಳಿಂದ ಬೇಸತ್ತಿರುತ್ತಾನೆ. ಫ್ಯೂಡಲ್ ವ್ಯವಸ್ಥೆಯ ದರ್ಪ, ಅಧಿಕಾರ, ಅಂತಸ್ತುಗಳ ಕೇಂದ್ರೀಕರಣದಿಂದಾಗಿಯೇ ಜನ ವಿರೋಧವನ್ನು ಎದುರಿಸುವ ದುರಂತವನ್ನು ಎದುರಿಸಬೇಕಾಗುತ್ತದೆಂಬ ಬಸ್ಲಿಂಗಪ್ಪನ ಮಾತುಗಳು ವ್ಯವಸ್ಥೆಯ ಅಧಿಕಾರಶಾಹಿಯಲ್ಲಿ ಉಂಟಾಗಬೇಕಾದ ಬದಲಾವಣೆಗಳನ್ನು ತಿಳಿಸುತ್ತವೆ. ಜಾತಿ ಶ್ರೇಣೀಕರಣ ಮಾತ್ರವಲ್ಲದೆ ಅಂತಸ್ತಿನ ಶ್ರೇಣೀಕರಣದ ಬಗೆಗೂ ಮೇಲ್ವರ್ಗದವರಲ್ಲಿ ಉಂಟಾಗಬೇಕಾಗಿರುವ ಬದಲಾವಣೆಯ ಮನೋಭಾವಗಳನ್ನು ಕತೆ ತಿಳಿಸುತ್ತದೆ.

'ಜೋಗುಳ ನಿಂದಲ್ಲದೆ' (ಅಮರೇಶ ನುಗಡೋಣಿ) ಕತೆಯಲ್ಲಿ ಶರಣರ ವಚನಗಳ ಅರ್ಥೈಸಿ ಕೊಳ್ಳುವಿಕೆ ಸಾಧ್ಯವಾಗದ, ಸಾಂಸ್ಥಿಕ ರೂಪದ ಆರಾಧನೆಯನ್ನು ವಿರೋಧಿಸುವ ವಿಚಾರಗಳು ಕಂಡು ಬರುತ್ತವೆ. ದಿನದ ಮುಕ್ಕಾಲು ಭಾಗ ಸಮಯವನ್ನು ದೇವರ ಪೂಜೆ, ಪುನಸ್ಕಾರ, ಮಂತ್ರೋಚ್ಚಾರದಂತಹ ಕ್ರಿಯೆಗಳಲ್ಲಿಯೇ ಮುಳುಗಿದ್ದ ಮಾಯಪ್ಪ ತಾನೊಬ್ಬ ಶ್ರೇಷ್ಠ ದೈವಭಕ್ತನೆಂಬ ಅಹಂನ್ನು ಬೆಳೆಸಿ ಕೊಂಡಿರುತ್ತಾನೆ. ಪೂಜೆ ಮಾಡುವುದೇ ಮಹಾನ್ ದೈವಿಕನ, ಆಧ್ಯಾತ್ಮಿಕ ಸಾಧನೆಯ ಮುಖ್ಯ ಲಕ್ಷಣವೆಂಬ ಭ್ರಮೆ ಮಾಯಪ್ಪನಲ್ಲಿ ಮನೆ ಮಾಡಿತ್ತು. ಕಾಯಕದಲ್ಲೇ ದೈವವನ್ನು ಕಂಡುಕೊಂಡ ಮಾಯಪ್ಪನ ಹೆಂಡತಿ ನೀಲಕ್ಕ ಬದುಕನ್ನು ಅರಿತ ಅದರ ಜವಾಬ್ದಾರಿಗಳಲ್ಲಿ ಭಗವಂತನನ್ನು ಕಂಡ ಆತ್ಮತೃಪ್ತಿ ಪಡೆದವಳಾಗಿದ್ದಳು. ನೀಲಕ್ಕನು ದೇವರ ಪೂಜೆ ಮಾಡದವಳೆಂಬ ಕಾರಣಕ್ಕೆ ಆಕೆಯ ಗಂಡ ಮಾಯಪ್ಪ ಆಕೆಯನ್ನು 'ಸಂಸಾರದ

ಹುಳು', 'ಸಂಸಾರದ ನರಕದಲ್ಲಿ ಸುಖ ಪಡುವ ಪ್ರಾಣಿ' ಎಂದು ಹೀಯಾಳಿಸುತ್ತಿದ್ದ. ತನ್ನ ನೆಲದಲ್ಲಿಯೇ, ತನ್ನ ಕೆಳವರ್ಗದ ಸ್ಥಿತಿಯಲ್ಲಿಯೇ ಮಾದರಲಿಂಗ ಶರಣನಾಗಿ ಪ್ರಸಿದ್ಧನಾದದ್ದು ಮಾಯಪ್ಪನಲ್ಲಿ ಅಸಮಾಧಾನ ಉಂಟು ಮಾಡಿತ್ತು. ಕಾಯಕದ ಪೂರೈಕೆ ನಂತರ ರಾತ್ರಿ ಕೇರಿಯಲ್ಲಿ ಭಜನೆ ಮಾಡುತ್ತಿದ್ದ ಮಾಯಪ್ಪ ಶರಣನೆನಿಸಿಕೊಳ್ಳುತ್ತಾನೆ. ಮಾದರಲಿಂಗನ ಮೇಲಿನ ಸಿಟ್ಟು ಹಗೆಯನ್ನು ತುಂಬಿಕೊಂಡೇ ಮಾಯಪ್ಪ ಜಲದುರ್ಗಕ್ಕೆ ಹೋಗಿ ಯೋಗಿಗಳಂತೆ ಸಿದ್ಧಿಯನ್ನು ಪಡೆಯಬೇಕೆಂದು ಬಯಸಿದ. ಮಾದರಲಿಂಗನನ್ನು ಮೀರಿಸಬೇಕೆಂದು ಬಗೆಯುತ್ತಾನೆ. ಆಧ್ಯಾತ್ಮ, ದೈವದ ಬಗೆಗಿನ ಗುತ್ತಿಗೆದಾರರೆಂಬಂತೆ ಕಂಡುಬರುವ ಮೇಲ್ವರ್ಗದವರು ಮಾದರಲಿಂಗನನ್ನು ನೋಡಿ ಆಧ್ಯಾತ್ಮ ಸಾಧನೆಗೆ ತೊಡಬೇಕೆನ್ನುವುದು ಸಾಂಸ್ಕೃತಿಕ ಪಲ್ಲಟವನ್ನು, ಕೆಳವರ್ಗದವರ ವಿಭಿನ್ನ ಸಾಮರ್ಥ್ಯಗಳನ್ನು ಮುನ್ನೆಲೆಗೆ ತರುತ್ತದೆ. ಎಷ್ಟೇ ಪ್ರಯತ್ನಿಸಿದರೂ ಮಾದರಲಿಂಗನು ಪಡೆದ ಜ್ಞಾನವನ್ನಾಗಲಿ, ನೀಲಕ್ಕನು ಕಾಯಕದ ತನ್ಮಯತೆಯಲ್ಲಿ ಪಡೆದ ಸ್ಥಿತಿಪ್ರಜ್ಞೆಯನ್ನಾಗಲಿ, ದುಡಿಮೆಯೇ ದೈವವೆಂಬ ಅಚಲ ನಂಬಿಕೆಯನ್ನು ಮಾಯಪ್ಪ ಅರಿಯದಾಗುತ್ತಾನೆ. ಸಂಸಾರದಲ್ಲಿ ಸಲ್ಲದವನು ಆಧ್ಯಾತ್ಮದಲ್ಲಿಯೂ ಸಲ್ಲದವನಾಗುತ್ತಾನೆ. ಕ್ರಿಯಾವಿಧಿ ಗಳಿಗೆ ಅಂಟಿಕೊಂಡಿರುವ, ದೈವಿಕ ಆರಾಧನೆಯ ಆಧ್ಯಾತ್ಮಿಕ ಸಾಧನೆಯ ಮಹಾಮಾರ್ಗವಲ್ಲ. ಬಾಹ್ಯ ಕ್ರಿಯಾವಿಧಿಗಳಲ್ಲಿ ದಿನವಿಡೀ ವ್ಯರ್ಥ ಕಾಲಾಹರಣ ಮಾಡದೆ ಮಾನಸಿಕ ಪಕ್ವತೆಯಾಗಿ ದೈವಿಕ ಪರಿಕಲ್ಪನೆ ರೂಪುಗೊಳ್ಳಬೇಕಾಗಿದೆ. ಶರಣ ಪಥದ ಜ್ಞಾನ ಪೂರ್ಣಮಟ್ಟದಲ್ಲಿ ಜಾರಿಯಲ್ಲಿ ಬಂದಿಲ್ಲ. ವಚನಗಳ ಕಾಲ ಮುಗಿದು ಶತಮಾನಗಳೇ ಉರುಳಿದರು ಪರಿಷ್ಕರಣೆಗೊಳ್ಳದೆ ಉಳಿದ ಮಾನವ ಬದುಕಿನ ಜೀವನಕ್ರಮ ವನ್ನು ವಿಮರ್ಶಾತ್ಮಕವಾಗಿ ಕತೆ ತಿಳಿಸುತ್ತದೆ.

ಬೇರೆ ಬೇರೆ ಸಮುದಾಯಗಳಲ್ಲಿ ಸಂಘರ್ಷದ ವಿಭಿನ್ನ ನೆಲೆಗಳು ಕಂಡು ಬರುವುದನ್ನು ಇಲ್ಲಿನ ಕಥನ ತಿಳಿಸುತ್ತದೆ. ಜಾತಿ ಕೇಂದ್ರಿತವಾದ, ವಿಚಾರ ಕೇಂದ್ರಿತವಾದ, ಅನೇಕ ರೀತಿಯ ಬದಲಾವಣೆಗಳನ್ನು ತರಲು ಪ್ರಜ್ಞಾವಂತರು ಬಯಸುವುದು ಇಲ್ಲಿ ಕಂಡುಬರುತ್ತದೆ. ಈ ರೀತಿಯ ಹಳೆ ತಲೆಮಾರಿನ ಆಲೋಚನೆಗಳನ್ನು ಪರಿಷ್ಕರಿಸಿ ಹೊಸ ಬದುಕಿನ ರೀತಿಗಳನ್ನು ತಿಳಿಸಲು ಇತ್ತೀಚಿನ ಕಾಲದ ಯುವಕರೇ ಆಗಬೇಕೆಂದಿಲ್ಲ. ಸಮವಯಸ್ಕರು ತಮ್ಮ ಜಾತಿಗೆ ಸಂಬಂಧಿಸಿದಂತೆ, ಜಡಗೊಂಡ ಆಲೋಚನೆಗಳಲ್ಲಿಯೇ ಮುಳುಗಿರುವವರನ್ನು ವಿರೋಧಿಸಿ ಹೊಸ ಆಲೋಚನೆಗಳಿಗೆ ತೆರೆದುಕೊಳ್ಳುವಂತೆ ಮಾಡುವುದು ಸಂಪ್ರದಾಯ ವಿಚಾರಗಳೊಂದಿಗಿನ ಸಂಘರ್ಷವಾಗಿಯೇ ಕಂಡು ಬರುತ್ತದೆ. ಇಂತಹ ಸಂಘರ್ಷದ ಶಕ್ತಿ ಕೇವಲ ಪುರುಷರಲ್ಲಿ ಮಾತ್ರವೇ ಸಾಧ್ಯ ಎಂದು ಹೇಳಲಾಗದು. ಸ್ತ್ರೀಯರಲ್ಲಿಯೂ, ಕೆಲವೇಳೆ ಸಂಪ್ರದಾಯಸ್ಥರೆಂದು ಕರೆಯುವ ಹಳೆ ತಲೆಮಾರಿನ ಜನರಲ್ಲಿಯೂ ಇರುತ್ತದೆ. ಹೊರಗಿನ ಪ್ರೇರಣೆಗಳಲ್ಲಿ ಶಿಕ್ಷಣ ಒಂದು ಪ್ರಮುಖ ಸಾಧನವಾಗಿ ಬಳಕೆಯಾಗುತ್ತದೆ. ಆದರೆ ಶಿಕ್ಷಿತರೇ ಸಮುದಾಯದ ಸಾಂಸ್ಕೃತಿಕ ವಿಚಾರಗಳಿಂದ ವಿಮುಖರಾಗುತ್ತಿರುವ ಅಂಶಗಳು ಇಲ್ಲಿ ಗಮನಾರ್ಹವಾಗುತ್ತವೆ. ಸಾಂಪ್ರದಾಯಿಕ ನಿಲುವಿನೊಂದಿಗಿನ ಸಂಘರ್ಷದ ಅಂತಿಮ ಪರಿಣಾಮ ಅವಸಾನವಾಗಿಯೊ, ವಿನಾಶವಾಗಿಯೊ, ಬದಲಾವಣೆಯ ಪೂರ್ಣ

ಪ್ರಮಾಣದ ಯಶಸ್ಸಾಗಿಯೊ, ಹೊಸ ಬದುಕಿಗೆ ನಾಂದಿಯಾಗಿಯೊ ಕಂಡು ಬರುವುದು ಇಲ್ಲಿನ ಕಥನ ಸಾಹಿತ್ಯದಿಂದ ತಿಳಿದುಬರುತ್ತದೆ.

ವಸಾಹತುಶಾಹಿಯಂತಹ ಹೊರ ಆಡಳಿತಗಳ ಪರಿಣಾಮ ಕರ್ನಾಟಕದ ಬೇರೆ ಬೇರೆ ಪ್ರದೇಶಗಳಲ್ಲಿ ಉಂಟು ಮಾಡಿದ ಪರಿಣಾಮಗಳಲ್ಲಿ ಭಿನ್ನತೆಗಳಿವೆ. ವಸಾಹತುಶಾಹಿ ಸಂದರ್ಭದ ಸಾಂಸ್ಕೃತಿಕ ಬದಲಾವಣೆಗಳನ್ನು ಮಲೆನಾಡು ಸಂದರ್ಭದಲ್ಲಿ ಕುವೆಂಪುರವರು ಕಟ್ಟಿಕೊಡುವ ರೀತಿ ಪ್ರಾದೇಶಿಕವಾಗಿ ಮಹತ್ವದ ಸಂಗತಿಯಾಗಿದೆ. 'ಮಲೆಗಳಲ್ಲಿ ಮದುಮಗಳು' (ಕುವೆಂಪು) ಕಾದಂಬರಿಯ ಪ್ರಾದೇಶಿಕ ಆವರಣದಲ್ಲಿ ಬೈಸಿಕಲ್, ಕಾಫಿಯಂತಹ ಹೊಸ ಬದಲಾವಣೆಗಳು ಉಂಟುಮಾಡುವ ಪ್ರಯಾಸದಾಯಕ, ಮೋಜಿನ ಅನುಭವಗಳನ್ನು ಕಾದಂಬರಿಯಲ್ಲಿ ಗುರುತಿಸಲಾಗುತ್ತದೆ. ಸಾಮಾಜಿಕ ಮೇಲ್‌ಸ್ಥರದ ಜನತೆಗೆ ದಕ್ಕುವ, ಸ್ಥಿತಿವಂತರ ಸ್ಥಾನಮಾನಗಳಿಗೆ ಹೊಸ ಸೇರ್ಪಡೆಗಳಾಗುವ ಇಂತಹ ಸಾಂಸ್ಕೃತಿಕವಾದ ಬದಲಾವಣೆಯನ್ನು ಇವರ ಮೂಲಕವೇ ಪ್ರದೇಶವನ್ನು ಪ್ರವೇಶಿಸುತ್ತಿರುವುದರ ವಿಶಿಷ್ಟತೆಗಳೆಲ್ಲವನ್ನೂ ಕಾದಂಬರಿ ತಿಳಿಸುತ್ತದೆ. ವಿದ್ಯೆ ಪಡೆಯುವ ಅವಕಾಶಗಳಿರುವ ಮೇಲ್ವರ್ಗ ಹಾಗೂ ಸ್ಥಿತಿವಂತರಿಂದ ಹೊಸ ಆಲೋಚನೆಗಳು ಪ್ರದೇಶವನ್ನು ಪ್ರವೇಶಿಸುವುದು ಸಾಂಸ್ಕೃತಿಕ ಬದಲಾವಣೆಗಳ ಇನ್ನೊಂದು ಆಯಾಮವನ್ನು ತಿಳಿಸುತ್ತದೆ. ಭೌತಿಕ ಹಾಗೂ ವಿಚಾರಶಕ್ತಿಯ ಧನಾತ್ಮಕ ಹಾಗೂ ಋಣಾತ್ಮಕ ಬದಲಾವಣೆಗಳೆಲ್ಲವೂ ಪ್ರದೇಶವೊಂದರ ಸಾಂಸ್ಕೃತಿಕ ಸಂಘರ್ಷಕ್ಕೆ ಕಾರಣವಾಗುವುದನ್ನು ಇಲ್ಲಿ ಗಮನಿಸಲಾಗಿದೆ.

ಹೈದರಾಬಾದ್ ಕರ್ನಾಟಕ ನಿಜಾಂ ಆಳ್ವಿಕೆಯ ನೇರ ಅನುಭವಗಳಲ್ಲಿ ಪಡೆದುಕೊಂಡ ಸಾಂಸ್ಕೃತಿಕ ಸಂಕರ ಸ್ಥಿತಿಯು ಈ ಪ್ರದೇಶವನ್ನು ವಿಶಿಷ್ಟವಾಗಿಸಿತು. ಸ್ವಾತಂತ್ರ್ಯ ನಂತರದಲ್ಲಿ ವಸಾಹತುಶಾಹಿಯ ಆಳ್ವಿಕೆಯಲ್ಲಿದ್ದ ಪ್ರದೇಶಗಳಿಗನುಗುಣವಾಗಿ ಬದಲಾವಣೆಗಳಿಗೆ ತೆರೆದುಕೊಳ್ಳುತ್ತಾ ಸಾಗಿತು. ವಸಾಹತುಶಾಹಿ ಸಂದರ್ಭದ ಸಾಂಸ್ಕೃತಿಕ ಬದಲಾವಣೆಗಳನ್ನು ಅರಗಿಸಿಕೊಳ್ಳುವಷ್ಟರಲ್ಲಿಯೇ ನವವಸಾಹತುಶಾಹಿಯು ನಿಧಾನವಾಗಿಯೇ ಪ್ರದೇಶವನ್ನು ಆವರಿಸುತ್ತ ಸಾಗಿದೆ. ನಿಜಾಂ ಆಳ್ವಿಕೆ, ವಸಾಹತುಶಾಹಿ, ನವವಸಾಹತುಶಾಹಿ ಇವು ಕಾಲಘಟ್ಟಕ್ಕೆ ಅನುಗುಣವಾಗಿ ಈ ಪ್ರದೇಶದ ಸಾಂಸ್ಕೃತಿಕ ಬದುಕಿನ ಮೇಲೆ ಪ್ರಭಾವಗಳನ್ನುಂಟು ಮಾಡುತ್ತಲೇ ಸಾಗಿವೆ. ಹೈದರಾಬಾದ್ ಕರ್ನಾಟಕವೆಂಬ ಪ್ರದೇಶದ ಹಿನ್ನೆಲೆಯಲ್ಲಿ ನಿಜಾಂ ಆಳ್ವಿಕೆ, ವಸಾಹತುಶಾಹಿ, ನವವಸಾಹತುಶಾಹಿ ಎಂಬ ಪ್ರಭಾವಗಳಿಂದಾದ ಸಾಂಸ್ಕೃತಿಕ ಬದಲಾವಣೆಗಳನ್ನೇ ಇಲ್ಲಿ ಮುಖ್ಯವಾಗಿ ಗಮನಿಸಲಾಗಿದೆ. ವಿಭಿನ್ನ ಸಾಂಸ್ಕೃತಿಕ ಬದಲಾವಣೆಗಳಿಂದ ಪ್ರಾದೇಶಿಕವಾಗಿ ಉಂಟಾದ ಪರಿಣಾಮಗಳನ್ನು ಸಾಂಸ್ಕೃತಿಕ ವಿಸ್ಮೃತಿಯ ಆತಂಕಗಳನ್ನು, ವ್ಯಾಪಾರೀಕರಣ, ಖಾಸಗೀಕರಣದಂತಹ ಒತ್ತಡಗಳಿಂದುಂಟಾದ ಬದುಕಿನ ಅಭದ್ರತೆಗಳನ್ನು ಪ್ರಾದೇಶಿಕ ಹಿನ್ನೆಲೆಯಲ್ಲಿಯೇ ಈ ಭಾಗದ ಕಥನ ಸಾಹಿತ್ಯ ಅಭಿವ್ಯಕ್ತಿಸುತ್ತದೆ.

ನಿಜಾಂ ಆಳ್ವಿಕೆಯಲ್ಲಿ ಜನ ಬದುಕು ಸಾಂಸ್ಕೃತಿಕವಾಗಿ ಸಂಕರಗೊಂಡು ವಿಶಿಷ್ಟ ಚಹರೆ ಪಡೆದದ್ದು ಈ ಭಾಗದ ಆರಂಭಿಕ ಕಥನ ಸಾಹಿತ್ಯದಿಂದ ತಿಳಿದು ಬರುತ್ತದೆ. ನಿಜಾಂ ಆಳ್ವಿಕೆಯಿಂದ ಮೇಲ್ವರ್ಗದ

ಜನತೆ ಪಡೆದ ಅನುಭವಗಳು ಅವರ ಬದುಕಿನಲ್ಲಿ ಉಂಟಾದ ಬದಲಾವಣೆಗಳು ಒಂದೆಡೆಯಾದರೆ, ಕೆಳವರ್ಗದ ಅನುಭವಗಳು ಮತ್ತೊಂದು ರೀತಿಯವು. ನಿಜಾಂ ಆಳ್ವಿಕೆಯ ಆಡಳಿತ ಕ್ರಮ, ಭಾಷೆ, ಜನ ಬದುಕಿನ ರೀತಿ ನೀತಿಗಳಲ್ಲಿ ದಟ್ಟವಾದ ಪ್ರಭಾವಗಳನ್ನುಂಟುಮಾಡಿತು. ಮತಾಂತರದಂತಹ ಚಟುವಟಿಕೆ ಯಲ್ಲಿ ಕೆಳವರ್ಗಗಳು ಕಂಡುಕೊಂಡ ಬದಲಾವಣೆಗಳು ಸಹ ಇಲ್ಲಿನ ಕಥನ ಸಾಹಿತ್ಯದಲ್ಲಿ ಕಂಡು ಬರುತ್ತವೆ. ಪ್ರಭುತ್ವದ ಧರ್ಮ, ಭಾಷೆ, ಸಂಸ್ಕೃತಿಯೊಂದಿಗೆ ಬೇರೆ ಬೇರೆ ನೆಲೆಗಳಲ್ಲಿ ಬೆಸೆದುಕೊಂಡು ರೂಪಿತವಾದ ಸಂಸ್ಕೃತಿಯಲ್ಲಿ ನಮ್ಮ ನೆಲದ ಸಂಸ್ಕೃತಿ, ಪ್ರಭುತ್ವದ ಸಂಸ್ಕೃತಿ ಎಂಬ ಭೇದಗಳು ಕಂಡು ಬರುವುದಿಲ್ಲ. ಪ್ರಭುತ್ವದ ಸಂಸ್ಕೃತಿಯಿಂದ ನಮ್ಮ ಸಂಸ್ಕೃತಿಗೆ ಧಕ್ಕೆಯುಂಟಾಗುತ್ತಿದೆ ಎಂಬ ಆತಂಕ ಸಹ ಇಲ್ಲಿ ಕಂಡುಬರುವುದಿಲ್ಲ. ಪ್ರಭುತ್ವದ ವಿರೋಧದೊಂದಿಗೆ ಅದರಿಂದ ಸ್ವೀಕರಿಸಲ್ಪಟ್ಟ ಸಾಂಸ್ಕೃತಿಕ ವಿಷಯಗಳನ್ನು ವಿರೋಧಿಸಿರುವುದು ಇಲ್ಲಿ ಕಂಡು ಬರುವುದಿಲ್ಲ. ರಜಾಕಾರರ ಹಾವಳಿಯನ್ನು, ಕ್ರೂರ ವರ್ತನೆಯನ್ನು ವಿರೋಧಿಸುವ ಸಂದರ್ಭದಲ್ಲಿ ಸಾಂಸ್ಕೃತಿಕ ಐಕ್ಯತೆ ಕಂಡುಬಂದಿರುವುದು ಇಲ್ಲಿನ ಕಥನದಿಂದ ತಿಳಿದುಬರುತ್ತದೆ. ವಸಾಹತುಶಾಹಿ ಸಂದರ್ಭ ಉಂಟುಮಾಡಿದ ಪರಿವರ್ತನೆಗಳು, ಕ್ರೈಸ್ತಧರ್ಮದ ಮತಾಂತರ ವನ್ನು ಕುವೆಂಪು, ಕಾರಂತರು ವಿರೋಧಿಸುವ ರೀತಿಯಲ್ಲಿ ಇಲ್ಲಿನ ಸ್ಥಳೀಯ ಕೆಳವರ್ಗದವರು ಮುಸ್ಲಿಂ ಧರ್ಮಕ್ಕೆ ಮತಾಂತರ ಹೊಂದಿದ್ದರ ಬಗ್ಗೆ ತಿರಸ್ಕಾರಗಳು ಕಂಡುಬರುವುದಿಲ್ಲ. ಮತಾಂತರಕ್ಕೆ ಒಪ್ಪಿತವಾದ ಸಮುದಾಯಗಳನ್ನು ಮತಾಂತರದಿಂದ ತಡೆಯಬೇಕೆನ್ನುವ, ಇದರಿಂದ ಪರಕೀಯತೆಯೊಂದು ಸಮಾಜದಲ್ಲಿ ಬೇರೂರುತ್ತದೆ ಎಂಬ ಆತಂಕಗಳಾವುವು ಇಲ್ಲಿ ಅಷ್ಟಾಗಿ ಕಂಡುಬರುವುದಿಲ್ಲ.

ಸಣ್ಣಾಟ, ಬಯಲಾಟ, ಡಪ್ಪಿನಾಟ, ದೊಡ್ಡಾಟ ಮುಂತಾದವುಗಳ ಜೊತೆಗೆ ಜಾತಿಗಾರ ಆಟ, ಗಾನಾಪಾರ್ಟಿಯಂತಹ ವಿಭಿನ್ನ ಬಗೆಯ ಪ್ರದರ್ಶನ ಕಲೆಗಳು ಇಲ್ಲಿ ಕಂಡು ಬರುತ್ತವೆ. ಗಾನಾ ಪಾರ್ಟಿ, ಜಾತಿಗಾರರ ಆಟಕ್ಕೆ ಕರೆಸುವುದು ಸ್ಥಿತಿವಂತರಿಗೆ ಪ್ರತಿಷ್ಠೆಯ ವಿಷಯಗಳಾಗಿ ಪರಿಣಮಿಸಿದ್ದು, ಕೆಳವರ್ಗ ಹಾಗೂ ಆರ್ಥಿಕವಾಗಿ ಹಿಂದುಳಿದವರು ಇದರಿಂದ ದೂರ ಉಳಿದದ್ದು ಪ್ರಾದೇಶಿಕವಾದ ಎರಡು ಸ್ಥಿತಿಗಳ ಚಿತ್ರಣಗಳಾಗಿವೆ. ನಿಜಾಂ ಆಳ್ವಿಕೆಯ ಪರಿಣಾಮಗಳನ್ನು ಸ್ವಾತಂತ್ರ್ಯ ನಂತರ ಎಷ್ಟೋ ವರ್ಷಗಳ ತರುವಾಯ ಅಭಿವ್ಯಕ್ತಿಸುವ ಇಲ್ಲಿನ ಕಥನ, ನಿಜಾಂ ಆಳ್ವಿಕೆಯ ಬಗೆಗೆ ತಿಳಿಸುವ ಎಷ್ಟೋ ಸಂಗತಿಗಳನ್ನು ಮೀರಿ ಆ ಹೊತ್ತಿನ ಬದುಕು ಕಳೆದು ಹೋಗಿರುವ ಸಾಧ್ಯತೆಗಳಿವೆ.

ನಿಜಾಂ ಆಳ್ವಿಕೆಯ ಅಂತಿಮ ಕಾಲಕ್ಕಾಗಲೇ ಇಂಗ್ಲೀಷ್ ಭಾಷಾ ಕಲಿಕೆಯ ಬಗೆಗೆ ಒತ್ತಡಗಳು ಆಡಳಿತದಲ್ಲಿ ಕಂಡುಬಂದವು. ಇದರೊಂದಿಗೆ ಹೊಸ ಬಗೆಯ ಆಡಳಿತ ಪದ್ಧತಿಯೂ ಈ ಪ್ರದೇಶದಲ್ಲಿ ರೂಢಿಗೆ ಬರತೊಡಗಿತು. ಈ ಬದಲಾವಣೆಗಳ ಪ್ರಭಾವಕ್ಕೆ ಒಳಗಾದವರಲ್ಲಿ ಇಲ್ಲಿನ ಸ್ಥಿತಿವಂತ ಮೇಲ್ವರ್ಗದವರೇ ಮೊದಲಿಗರೆನಿಸುತ್ತಾರೆ. ಗ್ರಾಮೀಣ ಪ್ರದೇಶದಲ್ಲಿ ಫ್ಯೂಡಲ್‌ಗಳ ಹಾಗೂ ಅಮೀನ ಸಾಹೇಬನ ಹಿಡಿತದಲ್ಲಿದ್ದ ಕಾನೂನು, ನ್ಯಾಯ ತೀರ್ಮಾನಗಳು ಪೊಲೀಸು, ಕೋರ್ಟುಗಳಿಗೆ ಬದಲಾಯಿತು.

ಬಂಬಾಯಿ ತಾರೀಫಿನಂತಹ ಮನರಂಜನೆಯ ಪ್ರದರ್ಶನಗಳು ದೂರ ಸರಿಯುತ್ತಿರುವುದನ್ನು ಶಾಂತರಸರು ತಿಳಿಸುತ್ತಾರೆ. ಆದರೆ ಇದರ ಜಾಗವನ್ನು ಅಕ್ರಮಿಸುತ್ತಿರುವ ಬೇರೆ ಪ್ರದರ್ಶನಗಳಿಂದ ಇಂತಹ ಪ್ರದರ್ಶನ ಕಲೆಗಳು ಪ್ರಾದೇಶಿಕವಾಗಿ ಇಲ್ಲವಾಗಿ ಹೊಸ ಬದಲಾವಣೆಗಳು ಕಂಡುಬರುತ್ತಿರುವುದನ್ನು ಇವರು ತಿಳಿಸುತ್ತಾರೆ. ಜಯತೀರ್ಥ ರಾಜಪುರೋಹಿತರು ಶಿಕ್ಷಿತ ಯುವ ಜನಾಂಗದಲ್ಲಿ ಆಗುತ್ತಿರುವ ಬದಲಾವಣೆಗಳನ್ನು ತಿಳಿಸುತ್ತಾರೆ. ಸ್ತ್ರೀಯರು ಕ್ಲಬ್‌ಗಳಿಗೆ ಹೋಗುವುದನ್ನು ಉಲ್ಲೇಖಿಸುತ್ತಾರೆ. ಹಳ್ಳಿಯಲ್ಲಿ ನೆಲೆ ಕಾಣದೆ ಶಹರ, ಪಟ್ಟಣಗಳಿಗೆ ಓಡಿ ಬರುವವರ ಮೂಲಕ ಹೊಸ ಬದುಕಿನ ರೀತಿಯನ್ನು ತಿಳಿಸುವ ಗೀತಾ ನಾಗಭೂಷಣ ಅವರ ಕಥನ ವಸಾಹತುಶಾಹಿ ನೆಲದೊಂದಿಗೆ ನಿಜಾಂ ಪ್ರದೇಶದ ಜನರಿಗಿದ್ದ ಸಂಪರ್ಕಗಳ ವಿಭಿನ್ನ ಆಯಾಮವನ್ನು ತಿಳಿಸುತ್ತದೆ.

ಚೆನ್ನಣ್ಣ ವಾಲೀಕಾರ ರಾಯಚೂರಿನ 'ಗುಬ್ಬೇರ ಬೆಟ್ಟ'ದ ಐತಿಹಾಸಿಕ ಚರಿತ್ರೆಯ ಬಗೆಗೆ 'ಕೋಟೆ ಬಾಗಿಲು' ಕಾದಂಬರಿಯಲ್ಲಿ ವಿವರಿಸುತ್ತಾರೆ. ದಲಿತ ಬಂಡಾಯದ ಆಶಯಗಳನ್ನು ಅಭಿವ್ಯಕ್ತಿಸುವ ಹಿನ್ನೆಲೆಯಲ್ಲಿ ರಾಯಚೂರಿನ ಕೋಟೆಯನ್ನು ಅದರ ಭವ್ಯತೆಯನ್ನು ತಿಳಿಸಿ ಇಂದಿನ ಕಾಲಕ್ಕೆ ಬೇಕಾಗುವ ರೀತಿಯಲ್ಲಿ ಕಟ್ಟಡ ಕಟ್ಟಲು ಕೋಟೆಯನ್ನು ಕೆಡವುತ್ತಿರುವುದನ್ನು ತಿಳಿಸುತ್ತಾರೆ. ಹೊಸ ಕಾಲಘಟ್ಟಕ್ಕೆ ಅನುಗುಣವಾಗಿ ಬದಲಾಗುತ್ತಿರುವ ಸಾಂಸ್ಕೃತಿಕ ಬದುಕನ್ನು ತಿಳಿಸುತ್ತ ಕೋಟೆಗಳನ್ನು ಕೆಡವಲು ಸಾಧ್ಯವಾಗುವಂತೆ ಮನುಷ್ಯ ಮನುಷ್ಯರ ನಡುವೆ ಜಾತೀಯತೆ ಎಂಬ ಕೋಟೆ ಕೆಡವಲು ಇಂದಿಗೂ ಸಾಧ್ಯವಾಗುತ್ತಿಲ್ಲ ಎಂಬುದನ್ನೇ ತಿಳಿಸುತ್ತಾರೆ. ನಿರ್ದಿಷ್ಟ ಆಶಯವನ್ನು 'ಗುಬ್ಬೇರ ಬೆಟ್ಟ'ದ ಮೂಲಕ ತಿಳಿಸುತ್ತಿರುವುದು ಕಾದಂಬರಿಗೆ ನಿರ್ದಿಷ್ಟ ಗುರಿ ಸೂಚಿತವಾಗಿದೆ. ಪ್ರಾದೇಶಿಕವಾಗಿ ಕಂಡು ಬರುತ್ತಿರುವ ಬದಲಾವಣೆಗಳು ಇಲ್ಲಿ ಗಮನಾರ್ಹವಾಗುತ್ತವೆ.

ಹಳೆ ಹೈದರಾಬಾದ್ ಕರ್ನಾಟಕದ ವ್ಯಾಪ್ತಿಗೆ ಸೇರ್ಪಡೆಯಾಗದ ಬಳ್ಳಾರಿ ಜಿಲ್ಲೆಯಲ್ಲಿ ಕಂಡು ಬಂದ ವಸಾಹತುಶಾಹಿ ಅನುಭವಗಳನ್ನು 'ಅರಮನೆ' (ಕುಂ. ವೀರಭದ್ರಪ್ಪ) ಕಾದಂಬರಿ ತಿಳಿಸುತ್ತದೆ. ಕಾದಂಬರಿಯ ಆವರಣವು ರಾಜಕೀಯ ಸ್ಥಿತ್ಯಂತರಗಳನ್ನು, ಸಾಮಾಜಿಕ ಬದಲಾವಣೆಗಳನ್ನು ಥಾಮಸ್ ಮನ್ರೋ ಎಂಬ ಜನಪ್ರಿಯ ವಸಾಹತುಶಾಹಿ ಪ್ರತಿನಿಧಿಯ ಪವಾಡದ ಕಥನವಾಗಿಯೇ ಬಿಂಬಿಸುತ್ತದೆ. ಈ ಪವಾಡ ಮಾಂತ್ರಿಕ ಜಗತ್ತಿನದಲ್ಲ, ಆಧ್ಯಾತ್ಮಿಕ ಸಾಧನೆಯದ್ದಲ್ಲ ಭಾರತೀಯರ ಮನೋಭಾವಗಳನ್ನು ತಿಳಿದು ಇಲ್ಲಿನ ಲೋಪ ದೋಷಗಳನ್ನು ಅಸ್ತ್ರವಾಗಿಸಿಕೊಂಡ ಲಾಭಿ ಮನೋಭಾವದ್ದು. ಇದು ಇಲ್ಲಿನ ಸಂಪತ್ತನ್ನು, ಮನಸ್ಥಿತಿಗಳನ್ನು ಕೊಳ್ಳೆಯೊಡೆದು ಸಾಧ್ಯವಾದರೆ ಮನುಷ್ಯರನ್ನು ಹೊರ ದೇಶಕ್ಕೆ ಸಾಗಿಸಿಕೊಂಡು ಹೋಗುವ ಸನ್ನಾಹದ್ದು. ಭಾರತೀಯರ ಪ್ರಾದೇಶಿಕ ಮನೋಭಾವ ಹಾಗೂ ವಸಾಹತುಶಾಹಿ ಮನೋಭಾವಗಳ ನಡುವಿನ ತಾಕಲಾಟ ಕಾದಂಬರಿಯಲ್ಲಿ ಕಂಡು ಬರುವ ರೀತಿ ವಿಶಿಷ್ಟವಾದದ್ದು. "ಮನ್ರೋ ಸಾಹೇಬನು ವರ್ತಮಾನಕ್ಕಿಂತ ಭೂತಕಾಲವನ್ನೇ ಹೆಚ್ಚಾಗಿ ಪ್ರೀತಿಸುತ್ತಿರುವುದೆಂದೂ ತಾನು ನಂಬಿದ್ದ ಜನರನ್ನು ವರ್ತಮಾನದ ಕಡೇಕ ಪ್ರಜೆಗಳ ಮುಖವನ್ನು ತಿರುಗಿಸಲಕೆಂದೇ ತಾನು ಹಿಂದೆ ಹಲವು ಸಲ

ಕಠೋರ ನಿರ್ಧಾರ ಕಯ್ಯಿಕೊಂಡಿರುವುದುಂಟು. ಪ್ರಜೆಗಳು ವಯಿಗ್ನಾನಿಕವಾಗಿ ಆಲೋಚಿಸುವಂತೆ ಮಾಡಲು ತಾನು ಅನೇಕಾನೇಕ ಕಾರ್ಯಕ್ರಮುಗಳನ್ನು ಕಯ್ಯಿಕೊಂಡಿರುವುದೂವುಂಟು. ಸಮುದ್ರದೊಳಗ ಪ್ರಯಾಣ ಮಾಡಿರುವ ತಾನೇ ಸದರಿ ಯಿಂಡಿಯಾದ ಅಸ್ಪೃಶ್ಯರಿಗೆ ಅಸ್ಪೃಶ್ಯನು ಯಂದ ಬಳಿಕ ವುಳಿದವರ ಪಾಡೇನು?... ಸದರಿ ಯಿಂಡಿಯಾವನ್ನು ಭೂತಗನ್ನಡಿಯ ಮೂಲಕ ನೋಡಿದರೇನೇ ಛಂದ ಯೆಂದು ನಿರ್ಧರಿಸಿದ್ದೇನೋವುಂಟು. ಆದರೆ ಕುಂಪಣಿ ಸರಕಾರದ ಪ್ರಭ್ರುತಿಗಳು ಸುಮ್ಮನಿರಬೇಕಿಲ್ಲ.....ತಾನು ತನ್ನ ಅಭಿಪ್ರಾಯವನ್ನು ಅಯಿಫಿನ್ ಸ್ಟೆನ್ ಸಾಹೇಬನ ಯದುರಾಗಲೀ, ರೀಡನ ಯದುರಾಗಲೀ ಯ್ಯಕ್ತಪಡಿಸಲು ಯೆಂದೂ, ಯಾವತ್ತೊ ಹಿಂಜರಿದುದಿಲ್ಲ. ಒಟ್ಟಿನಲ್ಲಿ ಬಂಕಿಂಗ್ ಹ್ಯಾಮ್ ಅರಮನೆಯ ವಂದು ಮೂಲೆಯು.... ಕೇಳೀರಿ ಕಿವಿಗೊಟ್ಟು ಕೇಳಿರಿ, ಪವುರಾತ್ಯದೇಸಗಳ ತೂಕ ವಂದೇ.... ಯಿಂಡಿಯಾದ ತೂಕವಂದೇ... ಭೂತಕಾಲವನ್ನು ಮೂಲೋತ್ಪಾಟನ ಮಾಡಿದಾಗಲೇ, ವರ್ತಮಾನ ಪ್ರಜ್ವಲಿಸಿದಾಗಲೇ ಯಿಂಡಿಯಾಕ್ಕೆ ಕುಂಪಣಿ ಸರಕಾರದ ಮೌಲ್ಯ ಪ್ರೀತಿ ಬರಲಕ ಸಾಧ್ಯ. ಆದ್ದರಿಂದಾಗಿ ಯಲ್ಲೈ ಅಧಿಕಾರಿಗಳೇ ಭೂತಕಾಲದ ಕುರುಹುಗಳನ್ನು ನಿರ್ಭಿಡೆಯಿಂದ ಹೊಸಕಿ ಹಾಕಿರಿ, ಸೋಮಪಾನ ಮತ್ತು ಮಧ್ಯಪಾನದ ನಡುವಿನ ಯತ್ಯಾಸವನ್ನು ಸನಮಾನ್ಯ ಪ್ರಜೆಗಳಿಗೆ ಅರ್ಥ ಮಾಡಿಕೊಡಬೇಕು. ವಾಮಮಾರ್ಗ ಹಿಡಿದಾದರೂ ನೀವು ಬ್ರಿಟೀಷ್ ಜೀವನ ಸಯ್ಲಿಯನ್ನು ಯಿಂಡಿಯಾದ ಮ್ಯಾಲ ಯಷ್ಟು ಸಾಧ್ಯವೋ ಅಷ್ಟು ಹೇರಬೇಕು. ತಪ್ಪು ಅಥವಾ ಪಾಪ ಮಾಡಿದಲ್ಲಿ ಕ್ಷಮಿಸಲಕೆಂದೇ ಯೇಸುಕ್ರಿಸ್ತ ಅದಾನೆ. ಆದ್ದರಿಂದ ಪಾಪ ಪುಣ್ಯಗಳ ಕುರಿತು ಯೋಚಿಸಬ್ಯಾಡಿರಿ, ಯಂದು ಮುಂತಾಗಿ ಬಿತ್ತರ ಮಾಡಿ ಬಿಡಬೇಕೆ? ಆ ನಿರಂಕುಸರಿಗೇನು ಗೊತ್ತು ಯಿಂಡಿಯಾ ಅಂದರೇನೆಂಬುದು? ಯಿಂಡಿಯಾದೊಳಗೆ ಮನುಕುಲವು ನಿಸರ್ಗದೊಂದಿಗೆ ಸಾಯುಜ್ಯ ಹೊಂದಲು ಸದಾ ಹಾತೊರೆಯುತ್ತಿದೆಯಂಬುದು ಯಿಂಡಿಯಾ ಅಂದರ ಜೀವ ಜಗತ್ತು, ಸಸ್ಯ ಜಗತ್ತು ಮತ್ತು ಅಲವುಕಿಕ ಜಗತ್ತುಗಳ ತ್ರಿವೇಣಿ ಸಂಗಮ ಯಂಬುದು; ಭೂತಕಾಲದಿಂದ ಬೇರು ಪಡಿಸಿದಲ್ಲಿ ಯಿಂಡಿಯಾಕ್ಕೆ ಅಸ್ತಿತ್ವಯಂಬುದೇ ಯಿರುವುದಿಲ್ಲಯಂಬುದು. ಯೀ ಪ್ರಕಾರವಾಗಿ ಥಾಮಸು ಮನ್ರೋ ತನ್ನ ಮೇಲಾಧಿಕಾರಿಗಳಿಗೆ ಮನದಟ್ಟು ಮಾಡಿಕೊಡುವಲ್ಲಿ ಸದಾ ತಿಪ್ಪರಲಾಗ ಹಾಕುತ್ತಿದ್ದನು" (ಕುಂ. ವೀರಭದ್ರಪ್ಪ; ೨೦೦೫; ಪುಟ : ೪೫೬). ವಸಾಹತುಶಾಹಿಗಳ, ಪ್ರಾದೇಶಿಕ ಜನರ ಮನೋಭಾವಗಳೆರಡನ್ನೂ ಕಾದಂಬರಿ ಒಟ್ಟೊಟ್ಟಿಗೆ ಚಿತ್ರಿಸುತ್ತದೆ. ವಸಾಹತುಶಾಹಿಗಳಿಂದ ಉಂಟಾದ ಬದಲಾವಣೆಯ ಕುರುಹುಗಳಾದ ರಸ್ತೆ, ಶಾಲೆ, ಸಾರಿಗೆ ಸಂಪರ್ಕ ಇತ್ಯಾದಿಗಳಲ್ಲದೆ ವೈಚಾರಿಕ ವಿಚಾರವೂ ಸ್ವಾಗತರ್ಹವಾದ ಸಂಗತಿಯೆಂದು ಕಾದಂಬರಿ ಅನುಮೋದಿಸುತ್ತದೆ. ಆದರೆ ಭಾರತೀಯರ ಮನಸ್ಸು ನಿಸರ್ಗದಷ್ಟೇ ಮುಗ್ಧ ಪ್ರಕೃತಿಯನ್ನುಳ್ಳದ್ದೆಂಬುದನ್ನು ಹಾಗೂ ಅದನ್ನು ದುರುಪಯೋಗಪಡಿಸಿಕೊಳ್ಳಬಯಸುವ ವಿದೇಶಿಗರಿಗೆ ಅಷ್ಟು ಸುಲಭವಾಗಿ ಈ ಜನರ ಅಂತರ್ಯ ದಕ್ಕುವುದಿಲ್ಲ ಎಂಬುದನ್ನು ಸಾಬೀತುಪಡಿಸುತ್ತದೆ. ಥಾಮಸ್ ಮನ್ರೋನಂತಹ ವಸಾಹತುಶಾಹಿಗಳ ಬಗೆಗೆ ಋಣಾತ್ಮಕವಾದ ಧೋರಣೆಗಳಿದ್ದಾಗ್ಯೂ ಆತನ ಬಗ್ಗೆ ಇಲ್ಲಿನ ಜನತೆಗಿದ್ದ ಗೌರವಗಳು ಈ ನೆಲದ ಸಾಂಸ್ಕೃತಿಕ ಬದುಕಿನ ವಿಸ್ತೃತ ಆಯಾಮಗಳನ್ನೇ ತಿಳಿಸುತ್ತದೆ.

## ೫.೨. ನವವಸಾಹತುಶಾಹಿ ಸಂದರ್ಭ ಹಾಗೂ ಬೇರು ಸಡಲಿಕೆಯ ಅನುಭವಗಳು

ನವವಸಾಹತುಶಾಹಿ ಸಂದರ್ಭದ ಇಂದಿನ ದಿನಗಳಲ್ಲಿ ಅದರ ಪರಿಣಾಮಗಳನ್ನು ಪ್ರಾದೇಶಿಕ ನೆಲೆಯಿಂದಲೇ ಅಭಿವ್ಯಕ್ತಿಸುವ ಇಲ್ಲಿನ ಕಥನ ಜಾಗತಿಕವಾಗಿ ಇದರ ಪರಿಣಾಮಗಳನ್ನು ತಿಳಿಸುವ ವಿಚಾರಗಳಿಗೆ ಸಮಗ್ರತೆ ಒದಗಿಸುತ್ತದೆ. ಪ್ರಾದೇಶಿಕ ನೆಲೆಯ ಅಭಿವೃದ್ಧಿ ಇನ್ನೂ ಸಾಧ್ಯವಾಗದೆ ಇರುವ ಈ ಪ್ರದೇಶ ನವವಸಾಹತುಶಾಹಿಯ ದಾಳಿಗೆ ಸಿಕ್ಕಿರುವುದು ಇಲ್ಲಿನ ಅನಭಿವೃದ್ಧಿಯ ಕಾರಣಗಳಲ್ಲಿ ಒಂದಾಗಿದೆ. ನವವಸಾಹತುಶಾಹಿಯ ಮುಖ್ಯ ಧೋರಣೆಗಳಾದ ಖಾಸಗೀಕರಣ, ವಾಣಿಜ್ಯೀಕರಣ, ಉದಾರೀಕರಣ ಮುಂತಾದವುಗಳು ತನ್ನ ಅಪೇಕ್ಷೆಗೆ ತಕ್ಕಂತೆ ಮನುಷ್ಯ ಬದುಕನ್ನು ಬಳಸಿಕೊಳ್ಳುತ್ತಿದೆ. ಬದಲಾವಣೆಗೆ ತಕ್ಕಂತೆ ಅನಿವಾರ್ಯವಾಗಿ ಹೊಂದಿಕೊಳ್ಳುತ್ತಿರುವ ಕಾರಣಕ್ಕೊ, ಸ್ವಾರ್ಥನೆಲೆಯ ಮನಸ್ಥಿತಿಗಳ ಕಾರಣಕ್ಕೂ ಮನುಷ್ಯನ ಬದುಕು ತಾನು ನಿಂತ ನೆಲಕ್ಕೆ ಪರಕೀಯವಾಗುತ್ತಿದೆ. ಬೇರುಗಳನ್ನು ಕಳೆದುಕೊಳ್ಳುತ್ತಿರುವ ಅತಂತ್ರ ಸ್ಥಿತಿಯ ಆತಂಕಗಳನ್ನು ಅನುಭವಿಸುತ್ತಿದೆ. ಜಾಗತೀಕರಣದ ಮುಂದುವರಿಕೆ, ತಂತ್ರಜ್ಞಾನ, ಅಭಿವೃದ್ಧಿಯಂತಹ ಮಾಯಾಲೋಕ ಸೃಷ್ಟಿಸಿರುವ ಜಾಲಕ್ಕೆ ಬಲಿಯಾಗುತ್ತಿರುವವರು ಮಾತ್ರ ಜನಸಾಮಾನ್ಯರು. ಶ್ರೀಮಂತರಿಗೆ, ರಾಜಕೀಯ ವರ್ಚಸ್ಸು ಬೆಳಸಿಕೊಂಡವರಿಗೆ ಜಾಗತೀಕರಣದ ಮಾಯಾನಗರಿ ಲಾಭದಾಯಕವಾಗಿಯೇ ಪರಿಣಮಿಸಿದೆ. ಇಲ್ಲಿ ನಿತ್ಯ ದುರಂತಕ್ಕೆ ಈಡಾಗುತ್ತಿರುವವರು ಕೂಲಿಕಾರ್ಮಿಕರು, ರೈತರು, ಅಶಿಕ್ಷಿತರು, ಮಧ್ಯಮವರ್ಗದ ಜನಸಾಮಾನ್ಯರು. ಕಾಲಘಟ್ಟದ ಅನೇಕ ಬದಲಾವಣೆಗಳಲ್ಲಿ ಸ್ಥಿತಿವಂತರು, ರಾಜಕೀಯ ಪಕ್ಷದವರು, ಸರಕಾರದ ಕೃಪೆಯಲ್ಲಿ ಬದುಕುತ್ತಿರುವವರು ಅಭಾದಿತರಾಗಿಯೇ ಉಳಿದಿದ್ದಾರೆ. ಪ್ರಾದೇಶಿಕ ಬದುಕನ್ನು ಕಲಕುತ್ತಿರುವ ನವವಸಾಹತುಶಾಹಿಯ ಅನುಭವಗಳು ಹೈದರಾಬಾದ್ ಕರ್ನಾಟಕದ ಕಥನ ಸಾಹಿತ್ಯದಲ್ಲಿ ಅಭಿವ್ಯಕ್ತಗೊಳ್ಳುತ್ತಿರುವ ರೀತಿ ಹಾಗೂ ಪ್ರಾದೇಶಿಕವಾಗಿ ಉಂಟುಮಾಡಿರುವ ಪರಿಣಾಮಗಳನ್ನು ಮುಖ್ಯವಾಗಿ ಪರಿಗಣಿಸಲಾಗಿದೆ.

'ದೈವಕ್ಕೆ ಮೊದಲು ಶರಣೆಂಬೆವು' (ಅಮರೇಶ ನುಗಡೋಣಿ) ಕತೆಯಲ್ಲಿ ಕೇರಿಯ ಮಾದಪ್ಪ ಮತ್ತು ಪಾತವ್ವ ದೈವಿಕ ಹಿನ್ನೆಲೆಯಲ್ಲಿ ಮೌಖಿಕ ಕಥೆಯನ್ನು ಮೈದುಂಬಿ ಹಾಡಿ ಪಾತಪ್ಪ ದೇವರ ಮಹಿಮೆ ಕೊಂಡಾಡುತ್ತಿದ್ದರು. ಎಳ್ಳಮಾಸಿಯ ದಿನ ಪಾತಪ್ಪಗಡ್ಡೆಯಲ್ಲಿ ಪಾತಪ್ಪದೇವರ ಜಾತ್ರೆ ಸುತ್ತಲೂರಿ ಗಳಿಗೆ ಸಂಭ್ರಮವನ್ನುಂಟುಮಾಡುತ್ತಿತ್ತು. ಈ ಸಂಭ್ರಮಕ್ಕೆ ಪಾತಪ್ಪನ ಜಾತ್ರೆಯಷ್ಟೆ ಮುಖ್ಯ ಕಾರಣವಾಗಿದ್ದಂತಹದ್ದು ಮಾದಪ್ಪ ಮತ್ತು ಪಾತವ್ವರು ರಾತ್ರಿ ಗುಡಿಪೌಳಿ ಒಳಗೆ 'ಪಾತಪ್ಪ ದೇವರ ಕಥೆ' ಮಾಡುತ್ತಿದ್ದುದು. ಊರಿನ ದೈವಸ್ತರು ಬಾಜಾಬಜಂತ್ರಿ ನಡುವೆ ಮಾದಪ್ಪನ ಕೇರಿ ಮನೆಗೆ ಬಂದು ದಂಪತಿಗಳಿಗೆ ಪಾತಪ್ಪ ದೇವರ ಕಥೆ ಮಾಡಲು ವೀಳ್ಯ ಕೊಡುತ್ತಿದ್ದರು. ಹೀಗೆ ವೀಳ್ಯ ಪಡೆದ ದಂಪತಿಗಳು ಕಥೆ ಮಾಡುತ್ತಿದ್ದರು. ಊರವರು, ಸುತ್ತಲೂರಿಂದ ಬಂದವರೆಲ್ಲರೂ ನೀಡುವ ದವಸಧಾನ್ಯ ಇತ್ಯಾದಿ ಕಾಣಿಕೆಗಳನ್ನು ಪಡೆದ ದಂಪತಿಗಳು ಅದರಿಂದಲೇ ತಮ್ಮ ಜೀವನವನ್ನು ತೂಗಿಸಿಕೊಂಡು ಹೋಗುತ್ತಿದ್ದರು. ದೈವಾರಾಧನೆಯ ಈ ಕಲೆ ದಂಪತಿಗಳಿಗೆ ಹಿರಿಯ ತಲೆಮಾರುಗಳಿಂದ ಬಳವಳಿಯಾಗಿ ಬಂದಿತ್ತು. ಊರವರು, ಸತ್ತಲೂರಿನವರು ವಿಶೇಷ ಕಾರ್ಯಗಳು ಮನೆಯಲ್ಲಿ ಜರುಗುತ್ತಿದ್ದ ಸಂದರ್ಭದಲ್ಲಿ ಪಾತಪ್ಪ ದೇವರ

ಕಥೆ ಮಾಡಲು ಇವರನ್ನು ಕರೆಸುತ್ತಿದ್ದರು. ಕತೆ ಮಾಡುವುದು ಜನ ಬದುಕಿನ ದೈವಿಕ ಆರಾಧನೆಯ ಮುಖ್ಯ ಭಾಗವಾಗಿತ್ತು. ವಿದ್ಯಾವಂತ ಯುವಕ ಮೌನೇಶಪ್ಪ ಈ ದಂಪತಿಗಳು ಕಥೆ ಮಾಡುವುದನ್ನು ರೆಕಾರ್ಡ್ ಮಾಡಿಕೊಂಡು ಜಾನಪದ ವಿಶ್ವವಿದ್ಯಾಲಯಕ್ಕೆ ಪರಿಚಯಿಸುತ್ತಾನೆ. ಹಾಗೆ ಇವರನ್ನು ಪ್ರಸಾರ ಕೇಂದ್ರಕ್ಕೆ ಕರೆದೊಯ್ದು ಇವರು ಹಾಡುವ ಕತೆಯನ್ನು ರೇಡಿಯೋದಲ್ಲಿ ಪ್ರಸಾರವಾಗುವಂತೆ ಮಾಡುತ್ತಾನೆ. ಈ ಎಲ್ಲಾ ಸಂದರ್ಭಗಳಲ್ಲೂ ಮಾದಪ್ಪ ಮತ್ತು ಪಾತವ್ವ ಪಟ್ಟ ಕಷ್ಟಗಳು ಪ್ರಾದೇಶಿಕ ಸಂಸ್ಕೃತಿಯೊಂದು ಪಟ್ಟಣದ ಹೊಸ ಮಾದರಿಯ ತುರ್ತಿನ ಲಯಕ್ಕೆ ಹೊಂದಿಕೊಳ್ಳಲು ಪಡುವ ಪ್ರಯಾಸವನ್ನೇ ತಿಳಿಸುತ್ತವೆ. ಆದರೆ ಪ್ರಾದೇಶಿಕವಾದ ಮೌಖಿಕ ಸಾಹಿತ್ಯ ಪರಂಪರೆಯೊಂದು ಪ್ರಚಾರ, ಗೌರವಗಳನ್ನು ಪಡೆಯುತ್ತಿದೆ ಎಂದು ಅಭಿಮಾನದಿಂದ ಹೇಳುವ ಯಾವ ಮನೋಭಾವಗಳು ಮಾದಪ್ಪ ಮತ್ತು ಪಾತವ್ವರ ಬದುಕಲ್ಲಿ ಉಳಿಯುವುದಿಲ್ಲ. ಮೌಖಿಕ ಸಾಹಿತ್ಯದ ಸಂಗ್ರಹ, ಪ್ರಸಾರ, ಪ್ರಚಾರ ಎಂಬುದು ವೈಯಕ್ತಿಕ ಹಿತಾಸಕ್ತಿಗೆ ಬಳಸಿಕೊಳ್ಳುವ ಲಾಭದಾಯಕ ದಂಧೆ ಎಂದು ತಿಳಿದಿರುವ ವಿಶ್ವವಿದ್ಯಾಲಯದ ಬೌದ್ಧಿಕ ವಲಯದ ಕೆಲ ಸ್ವಾರ್ಥಿಗಳಿಂದ, ಆಗಾಗ ಪಾತಪ್ಪಗಡ್ಡೆಗೆ ಭೇಟಿ ಕೊಡುವುದನ್ನು ಪಿಕನಿಕ್ ಎಂದುಕೊಳ್ಳುವ ಹಾಗೂ ಮಾದಪ್ಪನ ಮನೆಯನ್ನು ತಮ್ಮ ಸ್ವಾರ್ಥ ಈಡೇರಿಕೆಯ ತಾಣವಾಗಿಸಿಕೊಳ್ಳುವ ಸಂಶೋಧನ ವಿದ್ಯಾರ್ಥಿಗಳ ವರ್ತನೆಗಳಿಂದ ದಂಪತಿಗಳು ನೊಂದುಕೊಳ್ಳುತ್ತಾರೆ. ಪರಂಪರೆಯಿಂದ ನಡೆಸಿಕೊಂಡು ಬಂದ ಪಾತಪ್ಪ ದೇವರ ಕತೆ ಮಾಡುವ ರೀತಿಯನ್ನು ಅದಕ್ಕೆ ಸಂಬಂಧಿಸಿದಂತೆ ಇರುವ ಕತೆ ಎಲ್ಲವನ್ನು ಲೂಟಿ ಮಾಡುವ ಕ್ಯಾಸೆಟ್ ಅಂಗಡಿ ಮಾಲೀಕರು, ವಿಶ್ವವಿದ್ಯಾಲಯದ ಅಧ್ಯಾಪಕರು ಸಾಂಸ್ಕೃತಿಕ ಬದುಕಿಗೆ ದ್ರೋಹ ಬಗೆಯುತ್ತಾರೆ. ಮಾದಪ್ಪ ದಂಪತಿಗಳು ವಿದ್ಯಾವಂತರೆನಿಸಿದವರ ದ್ರೋಹ ಅರಿವಿಗೆ ಬಂದಾಗ ಆಘಾತ ಕ್ಕೊಳಗಾಗುತ್ತಾರೆ. ತಮ್ಮ ಊರಿನಿಂದ ಬೇರೆ ಬೇರೆ ಕಡೆ ಸುತ್ತಿ ಕತೆ ಮಾಡುವಲ್ಲಿ ನಿರತರಾಗಿ ಮೈಮರೆತಿದ್ದ, ಉದಾಸೀನರಾಗಿದ್ದ ಮಾದಪ್ಪ ದಂಪತಿಗಳ ಬಗೆಗೆ ಊರಿನವರಲ್ಲಿ ತಿರಸ್ಕಾರ ಮನೋಭಾವ ಬೆಳೆಯುತ್ತದೆ. ಇದರಿಂದ ಅನಾಥ ಪ್ರಜ್ಞೆಯಲ್ಲಿ ನರಳುವ ದಂಪತಿಗಳು ಅತ್ತ ಪಟ್ಟಣಿಗರಿಂದಾದ ಅನ್ಯಾಯ, ಇತ್ತ ಸ್ವತಃ ನಿಂತ ನೆಲವೇ ಕೈಬಿಟ್ಟ ಪರಿಸ್ಥಿತಿಯನ್ನು ಅನುಭವಿಸುತ್ತಾರೆ. ದೈವದವರಿಂದ ಜಾತ್ರೆಗೆ ಕತೆ ಮಾಡಲು ವೀಳ್ಯ ಸಿಗದಿದ್ದಾಗ ನೊಂದ ದಂಪತಿಗಳು ಯಾರೂ ಕರೆಯದಿದ್ದರೂ ಸ್ವತಃ ತಾವೇ ಮೈದುಂಬಿ ಪಾತಪ್ಪದೇವರ ಕತೆ ಮಾಡಲು ಪ್ರಾರಂಭಿಸಿ ತಮ್ಮ ನೆಲದೊಂದಿಗಿನ ಸಂಬಂಧಗಳನ್ನು ಉಳಿಸಿಕೊಳ್ಳುತ್ತಾರೆ.

ಮೌಖಿಕ ಸಾಹಿತ್ಯ ಪರಂಪರೆಯು ಪ್ರದೇಶವೊಂದರಲ್ಲಿ ಪಡೆಯುವ ದೈವಿಕ ನೆಲೆಯ ಮಾನ ಮನ್ನಣೆಗಳನ್ನು ಹೊರಗಿನ ವಿದ್ಯಾವಂತರು ನೀಡಲಾರರು. ಬೌದ್ಧಿಕ ವಲಯವು ಜಾನಪದ ಕಲೆಯ ಸಂಗ್ರಹದ ಬರದಲ್ಲಿ ಜನಪದರ ಸಹೃದಯತೆ, ಸೂಕ್ಷ್ಮ ಮನಸ್ಥಿತಿಯನ್ನು ಮರೆಯುತ್ತಿರುವುದಕ್ಕೆ ಕತೆ ಕನ್ನಡಿಯಾಗಿದೆ. ಬೌದ್ಧಿಕ ವಲಯಗಳು ಹೊರತರುವ ಪುಸ್ತಕಗಳಲ್ಲಿ ಪ್ರಸಾರ ಮಾಧ್ಯಮಗಳು ಹೊರತರುವ ಕ್ಯಾಸೆಟ್ಟುಗಳಲ್ಲಿ ಮೌಖಿಕ ಸಾಹಿತ್ಯದ ಜೀವಂತಿಕೆ, ಮುಂದುವರಿಕೆ ಇಲ್ಲ. ಮೌಖಿಕ ಸಾಹಿತ್ಯದ ಜೀವಂತಿಕೆ ಅದು ಹುಟ್ಟಿ ಬೆಳೆದ ನೆಲದಲ್ಲಿಯೇ ಇದೆ. ಇಂತಹ ಸಾಹಿತ್ಯಕ್ಕೆ ಮೌಖಿಕ ಸಂಸ್ಕೃತಿಗೆ ಬೌದ್ಧಿಕ ವಲಯ ಪ್ರೇರಕವಾಗುವ ಬದಲು ಮಾರಕವಾಗಿಯೇ ಪರಿಣಮಿಸುತ್ತಿರುವುದು ದುರಂತದ ಸಂಗತಿ. 'ಮೌಖಿಕ

ಸಾಹಿತ್ಯ'ಕ್ಕೆ ಬೌದ್ಧಿಕ ವಲಯದಲ್ಲಿ ಭವಿಷ್ಯವಿಲ್ಲ. ಅದು ಕೇವಲ ಪ್ರಚಾರ, ಪ್ರಶಸ್ತಿಯಂತಹ ಸೀಮಿತ ಕಾರ್ಯಕ್ಕೆ ಬಳಕೆಯಾಗುತ್ತಿದೆಯೇ ಹೊರತು ಈ ನೆಲದ ಅಭಿಮಾನದ ಸಂಗತಿಗಳಾಗಿ ಅಲ್ಲ. ಈ ನೆಲದ ಸಂಸ್ಕೃತಿ ವಾಣಿಜ್ಯೀಕರಣಗೊಳ್ಳುವುದನ್ನು ವಿರೋಧಿಸಬೇಕಾದ ಬೌದ್ಧಿಕ ವಲಯಗಳು ವಿಚಾರ ಶೂನ್ಯವಾಗುತ್ತಿರುವ ದುರಂತವನ್ನು ಕತೆ ತಿಳಿಸುತ್ತದೆ. .

ದೇಸೀ ವಸ್ತುಗಳ ಮಾರಾಟಕ್ಕೆ ಅಡ್ಡಿಯುಂಟುಮಾಡಿ ವಿದೇಶಿ ವಸ್ತುಗಳ ಮಾರಾಟ ಬೆಳೆಯುತ್ತಿರುವುದು ಇಲ್ಲಿನ ಜನರಲ್ಲಿ ನಿರುದ್ಯೋಗ ಸೃಷ್ಟಿ ಮಾಡಿದೆ. ವಿದೇಶಿ ವಸ್ತುಗಳ ನಿರಂತರ ಜಾಹಿರಾತು ಜನರನ್ನು ಆಕರ್ಷಿಸುವ ರೀತಿ ಮತ್ತು ಅವುಗಳ ಬಳಕೆ ಪ್ರತಿಷ್ಠೆಯಾಗುತ್ತಿರುವ ಇಂದಿನ ಸಾಮಾಜಿಕ ಪರಿಸ್ಥಿತಿಯಲ್ಲಿ ಪ್ರಾದೇಶಿಕ ವಸ್ತುಗಳಿಗೆ ಬೇಡಿಕೆ ಇಲ್ಲವಾಗಿದೆ. ಇಂತಹ ಪ್ರಾದೇಶಿಕ ವಸ್ತುಗಳ ಮಾರಾಟವನ್ನೇ ನಂಬಿರುವ ವ್ಯಾಪಾರಸ್ಥರ ಬದುಕು ದಿನೇ ದಿನೇ ಕುಸಿಯುತ್ತಿದೆ. 'ಕೊರಡು ಕೊನರುವ ಪರಿ' (ಅಮರೇಶ ನುಗಡೋಣಿ) ಕತೆಯಲ್ಲಿ ಸಾಮೂಹಿಕ ವಿವಾಹದಲ್ಲಿ ದಂಪತಿಗಳಾದ ವಧುವರರು ಪೆಪ್ಸಿ, ಕೊಕೊಕೋಲಾದಂತಹ ವಿದೇಶಿ ಮೂಲದ ಪಾನೀಯಗಳನ್ನು ಕುಡಿಯುತ್ತ ಸಂಭ್ರಮಿಸುವುದನ್ನು ವಿಡಂಬಿಸಿದ್ದಾರೆ. ಬಹುಬೇಗ ನಗರ, ಹಳ್ಳಿಗಳನ್ನು ಆಕ್ರಮಿಸಿ ಬೆಳೆದಿರುವ ಪೆಪ್ಸಿ, ಕೋಲಾದಂತಹ ಪಾನೀಯಗಳ ಮಾರಾಟಗಾರರಿಂದ ಸ್ಥಳೀಯ ಎಳೆನೀರು, ಮಜ್ಜಿಗೆ ಮಾರಾಟಗಾರರಿಗೆ ಉಂಟಾಗುತ್ತಿರುವ ಹಾನಿಯನ್ನು ತಿಳಿಸುತ್ತಾರೆ. ದೇಶೀ ಸಂಘಟನೆಯ ಯುವಕರು ವಿದೇಶೀ ವಸ್ತುಗಳ ಮಾರಾಟಕ್ಕೆ ಅಡ್ಡಿ ಉಂಟುಮಾಡಿ ಗಲಾಟೆಯಾಗಿದ್ದ ಸಂದರ್ಭದಲ್ಲಿ ಬಂದ ಪೋಲೀಸರಿಗೆ ಸ್ಥಳೀಯ ಜನರ ಹೋರಾಟ ತಮಾಷೆಯಾಗಿ ಕಾಣುತ್ತದೆ. ತನ್ನ ಪೋಲೀಸ್ ಮಿತ್ರನನ್ನು ಗದರಿಸುವ ಸಿದ್ದಪ್ಪ ಸರಕಾರಿ ಅಧಿಕಾರಿಗಳಿಗೆ ಹಳ್ಳಿ ಜನರ ಹೊಟ್ಟೆಪಾಡು ಅರ್ಥವಾಗುವುದಿಲ್ಲವೆಂದು ಹೇಳುತ್ತ ಪ್ರಾದೇಶಿಕ ಬದುಕಿಗೆ ನ್ಯಾಯ ಸಿಗಲೇಬೇಕಾದುದರ ತುರ್ತನ್ನು ಅಭಿವ್ಯಕ್ತಿಸುತ್ತಾನೆ.

ಹೂವಿನ ಮಾರಾಟಕ್ಕೆ ಸಂಬಂಧಿಸಿದಂತೆ ಉಂಟಾದ ಗಲಭೆಯನ್ನು ಬೇರೆ ಬೇರೆ ನೆಲೆಯಿಂದ ತಮ್ಮ ಲಾಭಕ್ಕಾಗಿ ಬಳಸಿಕೊಳ್ಳುವವರ ಮನೋಭಾವವನ್ನು 'ಹೂವು ತರುವ ಮನೆಗೆ' (ಕುಂ. ವೀರಭದ್ರಪ್ಪ) ಕತೆ ತಿಳಿಸುತ್ತದೆ. ಮಲ್ಲಿಗೇನಹಳ್ಳಿಯ ಹೂವಿನ ಮಾರಾಟಕ್ಕೆ ಮತ್ತು ಸರಬರಾಜಿಗೆ ಸಂಬಂಧಿಸಿದಂತೆ ಸರಕಾರ ನಿರ್ಬಂಧ ವಿಧಿಸುತ್ತದೆ. ಈ ಸುದ್ದಿ ಪತ್ರಿಕೆಗಳಲ್ಲಿ ಪ್ರಕಟವಾಗಿ ಜನಾಭಿಪ್ರಾಯ ಕೇಳಲಾಗುತ್ತದೆ. ಪತ್ರಿಕೆಯಲ್ಲಿ ಪ್ರಕಟವಾದ ಸುದ್ದಿಯನ್ನು ಕಾನ್ವೆಂಟಿನ ಮಕ್ಕಳು ಓದಲು ಕಷ್ಟಪಡುತ್ತಾರೆಂದು, ಸರಕಾರಿ ಶಾಲೆಯ ಮಕ್ಕಳೇ ಈ ಸುದ್ದಿಯನ್ನು ಹಬ್ಬಿಸಿದ್ದಾರೆಂದು ಹೇಳುವಲ್ಲಿ ವಿನೋದದ ಜೊತೆ ಸಮಾಜದ ಶೈಕ್ಷಣಿಕ ವ್ಯವಸ್ಥೆಯನ್ನು ಕತೆ ವಿಡಂಬಿಸುತ್ತದೆ. ಮಲ್ಲೇನಹಳ್ಳಿಯ ಹೂವಿನ ಮೇಲೆ ನಿರ್ಬಂಧವನ್ನು ವಿಧಿಸಿದ್ದ ಸರ್ಕಾರವನ್ನು ಸ್ತ್ರೀಯರು ಧಿಕ್ಕರಿಸಿ ಪ್ರತಿಭಟನೆಗಿಳಿಯುತ್ತಾರೆ. ಇಂತಹ ಪ್ರತಿಭಟನೆಯನ್ನು ಒಪ್ಪದ ಗಂಡಸರಿಗೂ ಸ್ತ್ರೀಯರಿಂದ ಧಿಕ್ಕಾರದ ಮಾತುಗಳು ಕೇಳಿ ಬರುತ್ತವೆ. ರೈತರು ಈ ಕಾರಣ ಸರಕಾರದ ವಿರುದ್ಧ ಹೋಗದೆ ಸಬ್ಸಿಡಿ, ಬೆಳೆ ಸಾಲದಂತಹ ಸೌಲಭ್ಯ ಕೊಡುವುದಾದರೆ ಹೂವಿನ ಬೆಳೆ

ಬೆಳೆಯುವುದನ್ನು ನಿಲ್ಲಿಸುವ ಮನೋಭಾವಕ್ಕೆ ಬದಲಾಗುತ್ತಾರೆ. ಪರಿಸ್ಥಿತಿ ಲಾಭ ಪಡೆಯುವವರು ಹೂವಿನ ಅಭಾವವನ್ನು ಮನವರಿಕೆ ಮಾಡಲು ಕೃತಕ ಹೂವಿನ ಅಭಾವ ಸೃಷ್ಟಿಸಿ ಅದರ ದರ ಹೆಚ್ಚಿಸುತ್ತಾರೆ. ಪ್ರತಿಭಟನೆಗಾಗಿಯೇ ಹೂವಿನ ಮಾರಾಟ ಭರದಿಂದ ಸಾಗುತ್ತದೆ. ಮಹಿಳೆಯರು ಎಂದಿಗಿಂತ ಹೆಚ್ಚು ಹೂ ಕೊಂಡುಕೊಳ್ಳುತ್ತಾರೆ. ಶ್ರೀಮಂತ ರಾಷ್ಟ್ರಗಳು ಯಾವತ್ತೂ ಬಾಡದ ನಕಲಿ ಹೂವುಗಳನ್ನು ಸರಬರಾಜು ಮಾಡಿದಾಗ ಜೀರ್ರ ಸಮುದಾಯ ವಿರೋಧವನ್ನು ವ್ಯಕ್ತಪಡಿಸುತ್ತದೆ. ಅದೇ ರೀತಿ ಮಲ್ಲೇನಹಳ್ಳಿ ಹೂವಿನ ಪ್ರಕರಣಕ್ಕೆ ಸಂಬಂಧಿಸಿದಂತೆ ಜೀರ್ರ ಸಮುದಾಯ ಉಗ್ರವಾದ ಪ್ರತಿಭಟನೆ ಪ್ರಾರಂಭಿಸುತ್ತದೆ. ಮಠಾಧೀಶರು ಇದನ್ನು ಬೆಂಬಲಿಸುತ್ತಾರೆ. ಜೀರ್ರ ಸಮುದಾಯದ ಬಗ್ಗೆ ಸಂಶೋಧನೆ ಮಾಡಿ ಪಿಎಚ್.ಡಿ. ಪದವಿ ಪಡೆದಿದ್ದ ಪ್ರೊ. ಬಕುಳೇಶ್ವರ ಪರಿಸ್ಥಿತಿಯಿಂದ ಪಲಾಯನ ಮಾಡುತ್ತಾನೆ. ವಿಶ್ವವಿದ್ಯಾಲಯದ ವಿ.ಸೀ. ಪದವಿ ಪಡೆದುಕೊಳ್ಳ ಬಯಸಿದ್ದ ಪ್ರೊ. ಬಕುಳೇಶ್ವರ ಈ ವಿಷಯದಲ್ಲಿ ಸರಕಾರದ ವಿರುದ್ಧ ನಿಲ್ಲದೆ ಹಿಂದೆ ಸರಿಯುತ್ತಾನೆ. ಇಂತಹ ಹೋರಾಟಗಳಲ್ಲಿ ತನ್ನ ಜೀವನವನ್ನು ಕಳೆದಿದ್ದ ಮಲ್ಲೇಶಿಯು ಮಲ್ಲೇನಹಳ್ಳಿಯ ಪರಿಸ್ಥಿತಿ ತಿಳಿಯಲು ನಿಯೋಗವನ್ನು ರೂಪಿಸಿಕೊಂಡು ಭೇಟಿ ನೀಡುತ್ತಾನೆ. ಇಂತಹ ಪ್ರಕರಣಗಳಿಗಾಗಿಯೇ ಕಾಯುತ್ತಿದ್ದ ವಿರೋಧ ಪಕ್ಷ ಇದರ ಹಿಂದೆ ಕೋಮುಗಲಭೆಯನ್ನು ಪ್ರಚೋದಿಸಿ, ಆಡಳಿತ ಪಕ್ಷ ಈ ವಿಷಯಕ್ಕೆ ಮೌನವಹಿಸಿರುವುದನ್ನು ವಿರೋಧಿಸಿ ಪಕ್ಷವನ್ನು ಕೆಳಗಿಳಿಸುವ ಹುನ್ನಾರ ನಡೆಸುತ್ತದೆ. ಪ್ರೊ. ಬಕುಳೇಶ್ವರ ಸಮ್ಮುಖದ ವರದಿಯೊಂದರ ಶಿಫಾರಸ್ಸಿನ ಮೇರೆಗೆ ಹೂವಿನ ಮೇಲೆ ನಿರ್ಬಂಧವನ್ನು ತರಲಾಯಿತು ಎಂದು ಹೇಳುವ ಗೃಹಸಚಿವರಿಂದ ವಿಷಯ ತಿಳಿದ ಜನ ತಣ್ಣಗಾಗುತ್ತಾರೆ. ಮಲ್ಲೇನಹಳ್ಳಿಯ ಗ್ರಾಮಸ್ಥನಾದ ಇಸ್ಮಾಯಿಲ್ ಕುಟುಂಬವು ಹೂವಿನ ವ್ಯಾಪಾರದಲ್ಲಿ ಜೀರ್ರ ಸಮುದಾಯವನ್ನು ಮೀರಿಸಿತ್ತು. ಬಹುಸಂಖ್ಯಾತ ಜೀರ್ರಜನ ಇದು ತಮ್ಮ ಪರಂಪರೆಯಿಂದ ನಡೆದುಕೊಂಡು ಬಂದ ಕಸುಬು ಅನ್ಯ ಕೋಮಿನವರಿಗೆ ಅವಕಾಶ ಕೊಡುವುದಿಲ್ಲವೆಂದೇ ಹೇಳಿತು. ನಗರಗಳಿಂದ ಜಮಾತೇ ಸಂಘದವರು ಬಂದು ಇಸ್ಮಾಯಿಲ್‌ನ ಬೆಂಬಲಕ್ಕೆ ನಿಲ್ಲುತ್ತಾರೆ. ಹಿಂದೂ ಪರಿಷತ್ ಸ್ವಯಂ ಸೇವಕರು ಜೀರ್ರ ಸಮುದಾಯದ ಬೆಂಬಲಿಗರಾಗುತ್ತಾರೆ. ಕುಲಕಸುಬು ನಿರ್ದಿಷ್ಟ ಸಮುದಾಯದಲ್ಲಿ ಉಳಿಯದೆ ಬೇರೆ ಬೇರೆ ಜನರಿಗೂ ವಿಸ್ತರಣೆಗೊಳ್ಳಬೇಕು. ಪರಂಪರೆಯಿಂದ ಬಂದ ಜಾತಿ ಸೂಚಕವಾದ ವೃತ್ತಿಯ ಪರಿಕಲ್ಪನೆಯನ್ನು ಮೀರಿ ಎಲ್ಲರೂ ತಮಗೆ ಇಷ್ಟವಾದ ಯಾವ ಕಸುಬನ್ನಾದರೂ ಮಾಡುವ ಅವಕಾಶಗಳನ್ನು ಕಲ್ಪಿಸಿಕೊಡಬೇಕಾದ ವಿಶಾಲ ಮನೋಭಾವ ಜನರಲ್ಲಿ ಮೂಡಬೇಕಾದ ಅಗತ್ಯವಿದೆ. ಇಂತಹ ವಿಶಾಲ ಮನೋಭಾವಗಳನ್ನು ಪೋಷಿಸಬೇಕಾಗಿದ್ದ ಪ್ರೊ. ಬಕುಳೇಶ್ವರ, ಮಠದ ಸ್ವಾಮಿಗಳು, ಸರಕಾರಿ ಅಧಿಕಾರಿಗಳು, ಸಂಘಸಂಸ್ಥೆಗಳು ಇದಕ್ಕೆ ವಿರುದ್ಧವಾಗಿ ಹೂವಿನ ಬೆಳೆಯನ್ನು, ಮಾರಾಟವನ್ನೇ ನಿಷೇಧಿಸುವ ಸಂಕುಚಿತ ಮನೋಭಾವಕ್ಕಿಳಿಯುತ್ತಾರೆ. ಹೂವನ್ನು ಕೋಮುಗಲಭೆಯ ಅಸ್ತ್ರವಾಗಿಸಿಕೊಳ್ಳುವ ಸಾಮಾಜಿಕ ಬಿಕ್ಕಟ್ಟುಗಳಿಗೆ ಪರಿಹಾರ ಸೂಚಿಸದೆ ಉಳಿದುಕೊಳ್ಳುವ ಪ್ರತಿಯೊಬ್ಬರೂ ಜಾಗತೀಕರಣದ ಇಂದಿನ ದಿನಗಳ ಸ್ವಾರ್ಥದ ಮನೋಭಾವಗಳನ್ನೇ ಮುಂದಿಡುತ್ತಾರೆ. ಹೂವನ್ನು ಕೋಮುಗಲಭೆಯ ಅಸ್ತ್ರವಾಗಿಸಿ ಕೊಳ್ಳುತ್ತಿರುವ ಕ್ಷುದ್ರ ಮನಸ್ಥಿತಿಗಳನ್ನೇ ಕತೆ ತಿಳಿಸುತ್ತದೆ.

ಹೈದರಾಬಾದ್ ಕರ್ನಾಟಕದ ಜನಜೀವನದ ಮುಖ್ಯ ಆಧಾರವಾದ ಕೃಷಿಯೂ ಸಹ ಅಭದ್ರತೆಯ ಆತಂಕಗಳನ್ನು ಎದುರಿಸುತ್ತಿದೆ. ಕೃಷಿ ಸಂಸ್ಕೃತಿಯ ಆಚರಣೆಗಳು, ನಂಬಿಕೆಗಳು ಜನರ ಮನಸ್ಸಿನಿಂದ ದೂರ ಸರಿಯುವಂತಹ ವಾತಾವರಣಗಳು ರೂಪುಗೊಳ್ಳುತ್ತಿವೆ. ಕೃಷಿ ಭೂಮಿಯನ್ನು ತಮ್ಮದಾಗಿಸಿಕೊಳ್ಳುವ ಪ್ರಯತ್ನದಲ್ಲಿ ಬಂಡವಾಳಶಾಹಿಗಳು ಸಫಲರಾಗುತ್ತಿದ್ದಾರೆ. ಕೃಷಿಯಿಂದ ಹೊರಗುಳಿಯುತ್ತಿರುವ, ಇಂದಿನ ಜಾಗತೀಕರಣ ತಂದೊಡ್ಡಿರುವ ಆತಂಕಗಳನ್ನೆದಿರಿಸುತ್ತಿರುವ ಬದುಕಿನ ಸಂವೇದನೆಗಳು ಕಥನ ಸಾಹಿತ್ಯದ ಮುಖ್ಯ ಆಶಯಗಳಾಗಿವೆ. 'ಒಡಲುಗೊಂಡವರು' (ಅಮರೇಶ ನುಗಡೋಣಿ) ಕತೆಯ ಹರಿಶ್ಚಂದ್ರ ತನ್ನ ಹೆಸರಿಗೆ ವಿರುದ್ಧವಾದ ಕೆಲಸಗಳನ್ನು ಮಾಡುತ್ತಾ ಬರುತ್ತಾನೆ. ತಂದೆ ತೀರಿಕೊಂಡ ಮೇಲೆ ಅಣ್ಣಂದಿರು ಬೇರೆ ಬೇರೆ ಕಡೆ ತಮ್ಮ ಜೀವನಕ್ಕೆ ನೆಲೆ ಕಂಡುಕೊಳ್ಳುತ್ತಾರೆ. ಇದ್ದೊಬ್ಬ ಅಕ್ಕ ಸತ್ತು ಆಕೆಯ ಮಗು ರೇಣುಕಾ ಉಳಿದುಕೊಂಡಿರುತ್ತಾಳೆ. ತಾಯಿ ಹಾಗೂ ರೇಣುಕಾಳನ್ನು ನೋಡಿಕೊಳ್ಳುವ ಜವಾಬ್ದಾರಿ ಕೊನೆಯ ಮಗನಾದ ಹರಿಶ್ಚಂದ್ರನ ಮೇಲೆ ಬೀಳುತ್ತದೆ. ಸತತ ಪರಿಶ್ರಮದಿಂದ ಹರಿಶ್ಚಂದ್ರನ ತಾಯಿ ಕೃಷಿಯಲ್ಲಿ ತೊಡಗಿಕೊಂಡರೂ ಉತ್ತಮ ಬೆಳೆ ಬರುವುದಿಲ್ಲ. ಕಾರಣ ಓದುವ ಛಲ ಹೊಂದಿದ್ದ ಹರಿಶ್ಚಂದ್ರ ಬಾರ್‌ನಲ್ಲಿ ಸಿಕ್ಕ ಸಿಕ್ಕಲ್ಲಿ ಕೆಲಸ ಮಾಡಿ ಡಬಲ್ ಡಿಗ್ರಿ ಪಡೆಯುತ್ತಾನೆ. ಉನ್ನತ ಶಿಕ್ಷಣವೇ ಬದುಕಿಗೆ ಮುಳುವಾದಂತೆ ಇತ್ತ ಕೂಲಿ ದುಡಿಮೆಗೂ ಹೋಗಲಾಗದೆ, ಅತ್ತ ತನ್ನ ವಿದ್ಯೆಗೆ ತಕ್ಕ ನೌಕರಿಯೂ ದೊರೆಯದೆ ಹರಿಶ್ಚಂದ್ರ ತೊಂದರೆಗಳನ್ನೆದಿರುಸುತ್ತಾನೆ. ತಮ್ಮ ಹೊಲವನ್ನು ಗಣಿ ಧಣಿಗಳಿಗೆ ಮಾರಿದ್ದ ಹರಿಶ್ಚಂದ್ರ ವಿಷಯವನ್ನು ಮನೆಯವರಿಂದ ಮುಚ್ಚಿಡುತ್ತಾನೆ. ಮಾವನ ಸಮಾಧಿಗೆ ಪೂಜಿಸಿ, ತಿಥಿ ಮಾಡಬೇಕೆಂದು ಗೌರಮ್ಮಹಳ್ಳಿಗೆ ಹೋಗಿ ನೋಡಿದಾಗ ಸಮಾಧಿಯ ಮೇಲೆ ಮೈನ್ಸ್ ದಣಿಗಳ ಕಂಪನಿ ಕಟ್ಟಡ ನಿರ್ಮಾಣಗೊಂಡಿರುತ್ತದೆ. ಮಾವನ ಸಮಾಧಿಯನ್ನು ಕಳೆದುಕೊಂಡ ನೋವಿಗೆ ಈಡಾದ ಗೌರಮ್ಮ ಹೊಲಮಾರಿ ಒಂಬತ್ತು ಲಕ್ಷ ರೂಪಾಯಿ ಹಣವನ್ನು ಗಣಿ ಧಣಿಗಳಿಂದ ಹರಿಶ್ಚಂದ್ರ ಪಡೆದಿರುವ ವಿಷಯ ತಿಳಿದು ವಿಷಾದಿಸುತ್ತಾಳೆ. ತನ್ನ ಹೊಲ ಮಾರಿದ ಕಾರಣಕ್ಕೆ ಗಣಿ ದೊರೆಗಳ ಕಂಪನಿಯಲ್ಲಿ ಗುಮಾಸ್ತ ಕೆಲಸವನ್ನು ಪಡೆದಿರುತ್ತಾನೆ.

ಕೃಷಿ ಭೂಮಿಯನ್ನು ಮಾರಿಕೊಳ್ಳಲೇ ಬೇಕಾದ ಸ್ಥಿತಿಯನ್ನು ಗಣಿ ಧಣಿಗಳು ರೂಪಿಸಿರುತ್ತಾರೆ. ಹೊಟ್ಟೆಪಾಡಿಗಾಗಿ ಹರಿಶ್ಚಂದ್ರ ಭೂಮಿ ಮಾರಿಕೊಳ್ಳುತ್ತಾನೆ. ಕಂಪನಿಯ ಮಾಲೀಕನ ಪರ ಇದ್ದು ಲಕ್ಷ್ಮೀದೇವಿ ಎಂಬ ಹುಡುಗಿಗೆ ಮಾಲೀಕನ ಮಗನಿಂದಾದ ಅನ್ಯಾಯವನ್ನು ಮುಚ್ಚಿ ಹಾಕಿ ನಂಬಿಕೆ ದ್ರೋಹಿ ಆಗುತ್ತಾನೆ. ಹೆತ್ತವಳಿಗೆ ತಂದೆಯ ಸಮಾಧಿಗೆ ಪೂಜೆ ಮಾಡುತ್ತಿರುವೆನೆಂದು ಸುಳ್ಳು ಹೇಳಿ ಅಣ್ಣಂದಿರಿಗೂ ಹೊಲ ಮಾರಿದ ವಿಷಯ ತಿಳಿಸದೆ ಮುಚ್ಚಿಟ್ಟು ವಿಶ್ವಾಸಘಾತಕನಾಗುತ್ತಾನೆ. ತಂದೆಯ ಹೊಲವಾಗಲಿ, ತಾನು ಓದಿದ ವಿದ್ಯೆಯಾಗಲೀ ನಿಷ್ಪ್ರಯೋಜಕವಾದ ಸ್ಥಿತಿಯಲ್ಲಿ ಹರಿಶ್ಚಂದ್ರ ಬಂದಿರುತ್ತಾನೆ. ಇದರೊಂದಿಗೆ ಜೀವನದ ಅಂತಿಮ ಕ್ಷಣಗಳನ್ನು ಎಣಿಸುತ್ತಿದ್ದ ತಾಯಿ, ರೇಣುಕಾಗಳಿಂದ ದೂರಾಗಿದ್ದ ನೋವುಗಳು ಹರಿಶ್ಚಂದ್ರನಲ್ಲಿ ತುಂಬಿದ್ದವು. ಕೆಳವರ್ಗದ ತಮ್ಮ ಸ್ಥಿತಿಯನ್ನು ಜಾತಿಯಿಂದ, ಅಂತಸ್ತಿನಿಂದ

ಮೀರಬಯಸುವ ರೇಣುಕಾ ಮೇಲ್ವರ್ಗದ ಪ್ರೊಫೆಸರ್ ಕಡೆ ಹಾಗೂ ಸ್ಥಿತಿವಂತ ಹುಡುಗರ ಕಡೆ ಮನಸ್ಸು ಹರಿಬಿಡುತ್ತಾಳೆ. ಓದು, ವಿದ್ಯೆ ಅವಳಲ್ಲಿ ಹುಟ್ಟು ಹಾಕಿದ್ದ ಭಾವನೆಗಳಿಗೆ ವಾಸ್ತವದಲ್ಲಿ ಬೆಲೆ ದೊರೆಯುವುದಿಲ್ಲ. ಬದುಕಲ್ಲಿ ನೆಲೆಕಾಣದ ರೇಣುಕಾ ಎಸ್.ಜಿ.ಓ.ದಲ್ಲಿ ದುಡಿಮೆ ಕಂಡುಕೊಂಡಿರುತ್ತಾಳೆ.

ಹರಿಶ್ಚಂದ್ರನನ್ನು ಕಾಡುವ ಮತ್ತೊಂದು ಸಮಸ್ಯೆಯೆಂದರೆ, ತನ್ನ ತಾಯಿ ಸತ್ತರೆ ಎಲ್ಲಿ ಹೂಳ ಬೇಕೆಂಬುದು ಗಣಿಧಣಿಗಳ ಪೂರ್ವಿಕರು ಕೆಳವರ್ಗದ ಜನರ ಶವಸಂಸ್ಕಾರಕ್ಕೆ ತಮ್ಮ ಹೊಲವನ್ನು ಬಿಟ್ಟುಕೊಟ್ಟಿರುತ್ತಾರೆ. ಆದರೆ ತಮ್ಮ ಪೂರ್ವಿಕರಿಂದ ಕೊಡಲ್ಪಟ್ಟ ಭೂಮಿಯನ್ನು ಹಿಂದಕ್ಕೆ ಪಡೆದುಕೊಳ್ಳುವ ಗಣಿ ಮಾಲೀಕರು ಅದನ್ನು ಹೈವೇ ಮಾಡುವ ಕೆಲಸಕ್ಕೆ ಮಾರಿಕೊಳ್ಳುತ್ತಾರೆ. ಪರಿಸರ ರಕ್ಷಣೆಯ ಚಳುವಳಿಯಲ್ಲಿ ಪಾಲ್ಗೊಂಡಿದ್ದ ಹರಿಶ್ಚಂದ್ರನ ತಾಯಿಗೆ ಹೆಣ ಹೂಳಲು ಭೂಮಿ ಕೊಡಲು ಅರಣುರೆಡ್ಡಿ ಒಪ್ಪಿಕೊಳ್ಳುತ್ತಾನೆ. ಮೈನ್ಸ್ ಲಾರಿಗಳಿಂದ, ಅದರ ಧೂಳಿನಿಂದ ಉಂಟಾಗುವ ಪರಿಸರ ಮಾಲಿನ್ಯ ಹಾಗೂ ಆರೋಗ್ಯದ ಮೇಲೆ ಉಂಟಾಗುವ ದುಷ್ಪರಿಣಾಮಗಳನ್ನು ಕುರಿತು ಪರಿಸರ ರಕ್ಷಣೆಯವರಿಂದ ಮೈನ್ಸ್ ಧಣಿಗಳಿಗೆ ಕಿರಿಕಿರಿ ಉಂಟಾಗುತ್ತಿತ್ತು. ತಮ್ಮ ವ್ಯವಹಾರಕ್ಕೆ ಅಡ್ಡಿಯುಂಟು ಮಾಡವವನಿಗೆ ಹೆಣಹೂಳಲು ಭೂಮಿ ನೀಡಿ ಬಾಯಿ ಮುಚ್ಚಿಸುವ ಇಂತವರ ಹಿಂದಿನ ಹಿತಾಸಕ್ತಿಗಳು ಪರೋಪಕಾರದ ನೆಲೆಯ ಸಹಾಯಗಳಲ್ಲವೆಂಬುದು ಇಲ್ಲಿ ತಿಳಿದು ಬರುತ್ತದೆ.

ಹೀಗೆ ಬದುಕಿನುದ್ದಕ್ಕೂ ಎದುರಾಗುವ ಪರಿಸ್ಥಿತಿಗಳ ಹಿಡಿತಕ್ಕೆ ಸಿಗುವ ಹರಿಶ್ಚಂದ್ರನಂತವರ ಬದುಕು ಮೇಲ್‌ನೋಟಕ್ಕೆ ಕ್ರೂರವೆನಿಸಿದರೂ ಒಡಲುಗೊಂಡವರ ಅಸಹಾಯಕತೆಗಳನ್ನೇ ತಿಳಿಸುತ್ತವೆ. ಕೃಷಿಯಿಂದ, ಓದಿನಿಂದ, ತನ್ನದೆಂಬ ಬದುಕಿನಿಂದಲೇ ದಿಕ್ಕೆಟ್ಟು ಯಾವ ಯಾವುದಕ್ಕೊ ಹೊಂದಿಕೊಳ್ಳಬೇಕಾದವರ ಬದುಕು ಎಲ್ಲಿಯೂ ನಿಶ್ಚಿತ ನೆಲೆಯನ್ನು ಕಾಣುವುದಿಲ್ಲ. ಗಣಿಧಣಿಗಳು ನಿಶ್ಚಿಂತ ಬದುಕಿನ ಭರವಸೆಯನ್ನು ನೀಡುತ್ತಾರೆಂಬುದು ಇಲ್ಲಿ ಹುಸಿ ನಂಬಿಕೆಯಾಗಿಯೇ ಕಂಡು ಬರುತ್ತದೆ.

'ಸವಾರಿ' (ಅಮರೇಶ ನುಗಡೋಣಿ) ಕತೆಯು ರಾಜಕೀಯ, ಸಾಮಾಜಿಕ, ಆರ್ಥಿಕ ಉನ್ನತಿಗಾಗಿ ಯಾವುದೇ ರೀತಿಯ ಹೇಯ ಕೃತ್ಯ ಎಸಗಲು ಮುಂದಾಗುವ ಮೇಲ್ವರ್ಗದ ಸ್ಥಿತಿವಂತರ ಕ್ರೂರ ಮನಸ್ಥಿತಿಯನ್ನೇ ತಿಳಿಸುತ್ತದೆ. 'ಸವಾರಿ' ಕೇವಲ ಮನುಷ್ಯನ ಮೇಲೆ ನಡೆಯುವಂತಹದ್ದಲ್ಲ. ಇದು ಸತ್ಯದ ಮೇಲೆ ನಡೆಯುವ ಸುಳ್ಳಿನ ಸವಾರಿ. ಮೌಲ್ಯವೊಂದರ ದೃಢನಂಬಿಕೆಯ ಮೇಲೆ ಅಪಮೌಲ್ಯ ವಿಭಿನ್ನ ರೀತಿಯಲ್ಲಿ ತನ್ನ ಸವಾರಿಯನ್ನು ಜಾರಿಯಲ್ಲಿ ಉಳಿಸಿಕೊಂಡಿದೆ. ವಿದೇಶಿ ಬಂಡವಾಳಶಾಹಿಗಳು ಹಾಗೂ ಉಳ್ಳವರು ಸೇರಿ ಕೆಳವರ್ಗದವರ, ಅಮಾಯಕರ, ಜನಸಾಮಾನ್ಯರ ಮೇಲೆ ಸವಾರಿ ನಡೆಸುತ್ತಿದ್ದಾರೆ. ಬ್ಯಾಗರ ವಜ್ರಪ್ಪ ಆತನ ಗುರು ಸುಡಗಾಡಸಿದ್ಧ ಸತ್ಯವನ್ನು ಪ್ರತಿನಿಧಿಸುತ್ತಾರೆ. ಆದರೆ ತನ್ನ ತಂದೆ ಸತ್ತ ವರ್ತಮಾನವನ್ನು ಮುಚ್ಚಿಡಬಯಸುವ ಹಾಗೂ ಅದನ್ನು ಮೌಲ್ಯವಾಗಿಸಲು ಹೆಣಗುವ ಶಿವಪ್ಪಗೌಡ ಮತ್ತು ಅದನ್ನು ನಿಭಾಯಿಸುವ ಮಠದಯ್ಯ ಸತ್ಯದ ದಿಕ್ಕು ತಪ್ಪಿಸಿ, ಸತ್ಯವನ್ನು ಕೊಂದು ಹಾಕುವ ಅಸತ್ಯದ ಪ್ರತಿಮೆಗಳಾಗಿದ್ದಾರೆ. ರಾಜಕೀಯವಾಗಿ ಮುಂದೆ ಬರಬೇಕೆಂದು ಹಂಬಲಿಸುವ ಶಿವಪ್ಪನಿಗೆ

ಊರಿನ ಜನರಿಂದ ಬೆಂಬಲ ಸಿಗುವುದಿಲ್ಲ. ಶಿವಪ್ಪಗೌಡನ ತಂದೆ ಮಲ್ಲಪ್ಪಗೌಡನ ಕ್ರೌರ್ಯದಿಂದ ಇಡೀ ಊರುಕೇರಿಯಲ್ಲಿ ಮನೆತನದ ಬಗ್ಗೆ ಒಳ್ಳೆಯ ಗೌರವ ಉಳಿದುಕೊಂಡಿರುವುದಿಲ್ಲ. ತಂದೆ ಗಳಿಸದ ಜನ ಪ್ರೀತಿಯನ್ನು ಹೇಗಾದರೂ ಗಳಿಸಿ ರಾಜಕೀಯವಾಗಿ ಮುಂದೆ ಬರಬೇಕೆಂದು ಬಯಸುವ ಶಿವಪ್ಪಗೌಡ ತನ್ನ ತಂದೆಗೆ ಶಿವರಾತ್ರಿಯಂತಹ ಶುಭದಿನದಂದಾದರೂ ಸಾವು ಬರಲಿ ಎಂದು ಹಾರೈಸುತ್ತಾನೆ. ಶಿವರಾತ್ರಿಯ ದಿನ ಸತ್ತವರು ಪುಣ್ಯವಂತರೆಂಬ ಹಳ್ಳಿಗರ ನಂಬಿಕೆಯ ಲಾಭ ಪಡೆದು ತಮ್ಮ ಮನೆತನವನ್ನು ಈ ಮೂಲಕ ಶ್ರೇಷ್ಠತೆಗೆ ತರಬೇಕೆನ್ನುವ ಶಿವಪ್ಪಗೌಡನ ಬಯಕೆ ಈಡೇರುವುದಿಲ್ಲ. ಮಲ್ಲಪ್ಪಗೌಡನ ಸಾವನ್ನು ತನ್ನ ಗುರುಸಿದ್ಧನ ಬರುವಿಕೆಯನ್ನು ಕನಸಿನಲ್ಲೇ ನಿಶ್ಚಯಿಸಿಕೊಂಡಿದ್ದ ವಜ್ರಪ್ಪನಿಗೆ ಗೌಡನ ಮನೆಯವರು ಹೇಳುವ ಸುಳ್ಳಿನಿಂದ ಅಸಮಾಧಾನ ಉಂಟಾಗುತ್ತದೆ. ಬ್ಯಾಗರ ವಜ್ರಪ್ಪನ ಹೆಂಡತಿಯಿಂದ ಸುಡಗಾಡಸಿದ್ಧ ಊರಿಗೆ ಬರುವ ಕನಸಿನ ಇನ್ನೊಂದು ವಿಷಯ ತಿಳಿದ ಮಠದಯ್ಯ ಈ ಸಂದರ್ಭವನ್ನು ಮಲ್ಲಪ್ಪಗೌಡನ ಸಾವಿನ ಸುದ್ಧಿ ಹಬ್ಬಿಸಲು ಬಳಸುತ್ತಾನೆ. ಗೌಡರ ಮನೆಯ ಋಣದಲ್ಲಿದ್ದ ಮಠದಯ್ಯ ಮಲ್ಲಪ್ಪಗೌಡನ ಸಾವಿನ ಸುದ್ಧಿಯನ್ನು ಹೇಗಾದರೂ ಮಾಡಿ ಊರಿನಲ್ಲಿ ಮಹತ್ವದ ಸಂಗತಿಯನ್ನಾಗಿ ಮಾಡಲು ಬಯಸುತ್ತಾನೆ. ಸುಡಗಾಡಸಿದ್ಧನ ಆಗಮನಕ್ಕೆ ಸರಿಯಾಗಿ ಮಲ್ಲಪ್ಪಗೌಡನ ಸಾವು ಸಂಭವಿಸಿದೆ ಎಂಬ ಸುದ್ಧಿ ಸುತ್ತೂರಿನಲ್ಲೆಲ್ಲಾ ಹಬ್ಬಿ ಮಹತ್ವ ಪಡೆಯುತ್ತದೆ. ಕಾಡುಸಿದ್ಧನ ಆಗಮನದ ಸಂದರ್ಭದಲ್ಲಿ ಘಟಿಸಿದ ಸಾವಿಗಿದ್ದ ಮಹತ್ವವನ್ನೆಲ್ಲ ಶಿವಪ್ಪಗೌಡ ತನ್ನ ಹಿತಾಸಕ್ತಿಗೆ ಬಳಸಿಕೊಳ್ಳುತ್ತಾನೆ. ಈ ಮೂಲಕ ತಮ್ಮನ್ನು, ತಮ್ಮ ಮನೆತನವನ್ನು ಉತ್ತಮವೆಂದು ಸಾಬೀತುಪಡಿಸಿಕೊಳ್ಳುತ್ತಾನೆ. ಇದಕ್ಕಾಗಿ ಬ್ಯಾಗಾರ ವಜ್ರಪ್ಪನ ಸತ್ಯವನ್ನು ತುಳಿದು ಕೊಲ್ಲುವ, ಅಸತ್ಯದ ಮೋಡಿಗೊಳಗಾಗಿದ್ದ ಸಿದ್ಧ ಸತ್ಯವನ್ನು ಹೇಳದಂತೆ ತಡೆಯುವ ಶಿವಪ್ಪಗೌಡನ ಕ್ರೌರ್ಯ ಹೀನಾಯವಾಗಿದೆ.

ಶಿವಪ್ಪಗೌಡ ಜನರ ಮನವೊಲಿಸಿಕೊಳ್ಳಲು ಹಂಬಲಿಸುತ್ತಿದ್ದುದು ಎರಡು ಕಾರಣಗಳಿಗೆ, ರಾಜಕೀಯ ವಾಗಿ ಜನ ತನ್ನನ್ನು ತನ್ನ ಪಕ್ಷವನ್ನು ಬೆಂಬಲಿಸಲಿ ಎಂಬುದು ಮೊದಲನೆ ಕಾರಣವಾದರೆ, ಮತ್ತೊಂದು ಕಾರಣ ಊರ ಹೊರಗಿನ ಹಳ್ಳಿಗರ ಹೊಲವನ್ನೆಲ್ಲ ತಾನೇ ಅಗ್ಗದ ದರದಲ್ಲಿ ಕೊಂಡು ವಿದೇಶಿ ಕಂಪನಿಗೆ ಫ್ಯಾಕ್ಟರಿ ಕಟ್ಟಲು ಅದನ್ನು ದೊಡ್ಡ ಮೊತ್ತಕ್ಕೆ ಮಾರುವುದಾಗಿತ್ತು. ವಿದ್ಯಾವಂತನಾದ ಸಿದ್ಧಪ್ಪ ಶಿವಪ್ಪಗೌಡನ ಕುತಂತ್ರವನ್ನು ವಿದೇಶಿ ಕಂಪನಿಯವರ ಆಗಮನದಿಂದ ಹಳ್ಳಿಯಲ್ಲಿ ಉಂಟಾಗುವ ಪರಿಸರ ಮಾಲಿನ್ಯದ ಭೀಕರ ಪರಿಣಾಮಗಳನ್ನು ಜನರಿಗೆ ತಿಳಿಹೇಳತೊಡಗಿದ್ದ. ಕೇರಿಯ ಗೋವಿಂದನು ಸಿದ್ಧಪ್ಪನ ಮಾತಿಗೆ ಧ್ವನಿ ಸೇರಿಸಿ ಜಾಗೃತಿ ಮೂಡಿಸಲು ಮುಂದಾಗುತ್ತಾನೆ. ಆದರೆ ಕಂಪನಿಯಲ್ಲಿ ಹಳ್ಳಿಗರಿಗೆ ನೌಕರಿ ದೊರೆಯುತ್ತದೆ ಎಂಬ ಶಿವಪ್ಪಗೌಡನ ಆಶ್ವಾಸನೆಗಳಿಂದ ಜನರು ಗೊಂದಲಕ್ಕೆ ಬೀಳುತ್ತಾರೆ. ಗೋವಿಂದ ಗೌಡನೊಂದಿಗಿನ ವಿರೋಧವನ್ನು ಹಿಂತೆಗೆದುಕೊಂಡು ಕಂಪನಿಯಲ್ಲಿ ತನಗೊಂದು ನೌಕರಿ ನೆಲೆ ಕಂಡುಕೊಳ್ಳಬಯಸುತ್ತಾನೆ. ವಿದೇಶಿ ಕಂಪನಿಯು ಕಡಿಮೆ ಮೊತ್ತಕ್ಕೆ ಭೂಮಿಯನ್ನು ಕೇಳುವುದು, ಕಾಡುಸಿದ್ಧ ತಪ್ಪಿಸಿಕೊಂಡು ಸತ್ಯ ಹೇಳಲು ಅಗಸೆ ಬಾಗಿಲ ಕಡೆ ಓಡುವುದು 'ಸವಾರಿ' ಮಾಡ ಹೊರಟವರ ಬದುಕಿಗೆ ಸತ್ಯ ನೀಡುವ ತಿರುಗೇಟಾಗಿ ಕಂಡುಬರುತ್ತದೆ.

ಹೊಲಗಳಿಗೆ ಕೆರೆಯಿಂದಲೊ ಅಥವಾ ಬಾವಿ, ಪಂಪ್ಸೆಟ್‌ಗಳ ಮೂಲಕ ನೀರಿನ ವ್ಯವಸ್ಥೆ ಮಾಡಲು ಯೋಚಿಸದ ಶಿವಪ್ಪಗೌಡನಂತಹ ಸ್ವಾರ್ಥಿಗಳಿಂದ ಕೃಷಿಯು ಅನೇಕ ತೊಂದರೆಗಳನ್ನೇ ಅನುಭವಿಸುತ್ತದೆ. ಪ್ರಾದೇಶಿಕವಾಗಿ ಗೌಡನಂತವರ ಸ್ವಾರ್ಥವನ್ನು ಬಳಸಿಕೊಳ್ಳುವ ವಿದೇಶಿ ಕಂಪನಿಗಳು ಕೃಷಿಯನ್ನು ಸಂಪೂರ್ಣವಾಗಿ ಇಲ್ಲವಾಗಿಸಿ ಜನರ ಬದುಕಿಗೆ, ಆರೋಗ್ಯಕ್ಕೆ ಹಾಗೂ ಪರಿಸರ ವಿನಾಶಕ್ಕೆ ಕಾರಣ ವಾಗುತ್ತಿರುವುದು ಇಲ್ಲಿ ಅಭಿವ್ಯಕ್ತಗೊಳ್ಳುವ ರೀತಿ ಸ್ಥಿತ್ಯಂತರಗೊಂಡ ಪ್ರಾದೇಶಿಕ ಬದುಕಿನ ಸ್ಥಿತಿಯನ್ನೇ ತಿಳಿಸುತ್ತದೆ. ಇಂತಹದ್ದೇ ಸ್ಥಿತ್ಯಂತರಗೊಂಡ ಬದುಕಿನ, ಪರಿಸರದ ವಿನಾಶವನ್ನು 'ದಾಳಿ ನಡೆದಾವೋ ಅಣ್ಣಾ' (ಅಮರೇಶ ನುಗಡೋಣಿ) ಕತೆ ತಿಳಿಸುತ್ತದೆ. ನವವಸಾಹತುಶಾಹಿ ಸಂದರ್ಭ ನಿರ್ಮಿಸಿರುವ ಅತಂತ್ರ ಬದುಕಿನ ಆಘಾತಗಳೇ ಕತೆಯುದ್ದಕ್ಕೂ ಕಂಡುಬರುತ್ತವೆ. ಮಲ್ಲಯ್ಯ ಕೌಟುಂಬಿಕವಾಗಿ ಅವಿನಾಭಾವ ಸಂಬಂಧಗಳನ್ನು ಉಳಿಸಿಕೊಂಡಿರುವಂತೆ ಗದ್ದೆ, ಹಳ್ಳ, ಎತ್ತುಗಳು ಹೀಗೆ ಎಲ್ಲದರೊಂದಿಗೂ ಅವಿನಾಭಾವ ಸಂಬಂಧ ಹೊಂದಿರುವಂತವನು. ಉತ್ತುಬಿತ್ತುವುದರಲ್ಲಿ ತಾವು ಮಾತ್ರವಲ್ಲದೆ ಮಗಳ ಕುಟುಂಬವನ್ನು ನೋಡಿಕೊಳ್ಳುವಂತಹ ಮಲ್ಲಯ್ಯ ದಂಪತಿಗಳ ಬದುಕು ದಾಳಿಗೆ ಸಿಕ್ಕು ನುಚ್ಚು ನೂರಾಗುತ್ತದೆ. ಇಲ್ಲಿ ದಾಳಿಯೆಂಬುದು ಒಮ್ಮೆಲೆ ಮೇಲೆ ಬಂದು ಎರಗುವಂತಹ ಜೀವಹಾನಿ ಮಾಡುವ ನೆಲೆಯ ಅರ್ಥವನ್ನು ಹೊಂದಿರುವಂತಹದ್ದಲ್ಲ. ಇಡೀ ಪ್ರದೇಶವನ್ನು ಮನುಷ್ಯರನ್ನು ಆವರಿಸಿ ಬದುಕಲು ಬಿಡದೆ, ಸಾಯಲೂ ಬಿಡದ ಸಂದಿಗ್ಧ ಪರಿಸ್ಥಿತಿಯನ್ನು ತಂದೊಡ್ಡುವ ದಾಳಿಯನ್ನು ಅರಗಿಸಿಕೊಳ್ಳದೆ ತತ್ತರಿಸುತ್ತಿರುವ ಜನ ಬದುಕಿನ ನೋವಿನ ನೆಲೆಗಳ ಸೂಕ್ಷ್ಮ ಸಂವೇದನೆ ಕತೆಯಲ್ಲಿ ಅಭಿವ್ಯಕ್ತಗೊಂಡಿದೆ.

ವ್ಯವಸಾಯದೊಂದಿಗೆ ಆತ್ಮೀಯತೆಯನ್ನು ಬೆಳಸಿಕೊಳ್ಳದ ಮಲ್ಲಯ್ಯನ ಮಗ ಗದ್ದೆಗಳನ್ನು ಗಣಿ ಮಾಲೀಕರಿಗೆ ಮಾರುವಂತೆ ಆಗ್ರಹಿಸುತ್ತಾನೆ. ಮನೆ - ಹೊಲ ವ್ಯಕ್ತಿ ಬದುಕಿಗೆ ಸ್ಥೈರ್ಯ, ಸ್ವಾಭಿಮಾನ, ಗೌರವ ನೀಡುವಂತಹ ನಿಧಿಗಳೆಂದು ನಂಬಿದ್ದ ಮಲ್ಲಯ್ಯ ಅವುಗಳನ್ನು ಕಳೆದುಕೊಂಡು ತಬ್ಬಲಿಯಾಗಲು ಬಯಸುವುದಿಲ್ಲ. ಇದರಿಂದ ಮುನಿಸಿಕೊಂಡು ಮನೆ ಬಿಟ್ಟು ಹೋಗುವ ಮಗ ಗಣಿ ಧಣಿಯ ಮೈನ್ಸ್ ಲಾರಿಯ ಡ್ರೈವರ್ ಕೆಲಸಕ್ಕೆ ಸೇರಿಕೊಳ್ಳುತ್ತಾನೆ. ಲಾರಿ ಅಪಘಾತಕ್ಕೆ ಸಿಕ್ಕು ಸಾವಿಗೀಡಾಗುತ್ತಾನೆ. ಇದರಿಂದ ಆಘಾತಗೊಂಡ ಮಲ್ಲಯ್ಯನ ಹೆಂಡತಿ ನೀಲವ್ವ ಮರಣ ಹೊಂದುತ್ತಾಳೆ. ಮಗಳ ಜೀವನ ಸುಖವಾಗಿದ್ದಾಗ ಹಿಗ್ಗಿದ್ದ ಮಲ್ಲಯ್ಯ ದಂಪತಿಗಳ ಬದುಕು ಆಕೆ ದುರ್ಗತಿಗಿಳಿದಾಗ ಕುಗ್ಗುತ್ತದೆ. ಹೆಂಡತಿಯ ಸಾವು, ಮಗನ ಸಾವಿನ ದುಃಖದೊಂದಿಗೆ ಬದುಕಿರುವವರ ನಿತ್ಯಸಾವನ್ನು ಮಲ್ಲಯ್ಯ ಅರಗಿಸಿಕೊಳ್ಳದಾಗುತ್ತಾನೆ. ಫ್ಯಾಕ್ಟರಿ ಕೆಲಸದಿಂದ ಹೊರಬಿದ್ದ ಅಳಿಯನನ್ನು ಮಗಳೊಂದಿಗೆ ಮನೆಯಲ್ಲಿಯೇ ಉಳಿಸಿಕೊಳ್ಳುತ್ತಾನೆ. ಎಲ್ಲೆಂದರಲ್ಲಿ ಮೈನ್ಸ್ ಅದಿರಿನ ವ್ಯಾಪಾರವೇ ಕಂಡು ಬರುತ್ತಿದ್ದುದರಿಂದ ಕೃಷಿ ಬಗೆಗಿನ ಒಲವು ಜನರಲ್ಲಿ ಮೊದಲಿನಂತೆ ಉಳಿಯುವುದಿಲ್ಲ. ಗಣಿ ಮಾಲೀಕರು ಅಕ್ರಮವಾಗಿ ತನ್ನ ಗದ್ದೆಯಲ್ಲಿ ಮೈನ್ಸ್ ಲಾರಿಗಳನ್ನು ಬಿಟ್ಟು ರಸ್ತೆಯನ್ನಾಗಿ ಮಾಡಿಕೊಂಡಿದ್ದರಿಂದ ಮಲ್ಲಯ್ಯ ಕುಸಿದು ಹೋಗುತ್ತಾನೆ. ಅದನ್ನು ವಿರೋಧಿಸಿ ಗಣಿ ಮಾಲೀಕನ ಬಳಿ ನ್ಯಾಯ ಕೇಳಲು ಹೋದಾಗ ಮಗಳು ಮತ್ತು ಅಳಿಯ ಗದ್ದೆಯನ್ನು ಮಾರಲು

ಗಣಿ ಮಾಲೀಕರೊಂದಿಗೆ ಒಪ್ಪಂದ ಮಾಡಿಕೊಂಡಿರುವುದು ತಿಳಿದು ದಿಕ್ಕು ತಪ್ಪಿದಂತಾಗುತ್ತಾನೆ. ಹೆಂಡತಿ, ಮಗ ಸತ್ತಾಗ ಕಾಡದಿದ್ದ ಅನಾಥಪ್ರಜ್ಞೆ, ಮಲ್ಲಯ್ಯನನ್ನು ಆವರಿಸುತ್ತದೆ.

ಮಲ್ಲಯ್ಯನನ್ನು ಗಾಸಿಗೊಳಿಸುವ ಮತ್ತೊಂದು ಸಂಗತಿಯೆಂದರೆ ಶಿವನಕೊಳ್ಳ ರೆಸಾರ್ಟ್ ಆಗಿ ಪರಿವರ್ತನೆ ಹೊಂದಿದ್ದು. ಮಲ್ಲಯ್ಯ ಶಿವನಕೊಳ್ಳ ದಾಟಿಯೇ ತನ್ನ ಹೊಲಕ್ಕೆ ಹೋಗುತ್ತಿರುತ್ತಾನೆ. ತಾನು ನಡೆಯುತ್ತಿದ್ದ ದಾರಿಯೇ ನಿರ್ಬಂಧಕ್ಕೊಳಗಾಗಿ ಬೇಲಿ ಬಿಗಿಸಿಕೊಂಡು ರೆಸಾರ್ಟ್ ಆಗಿ ನಿಂತಾಗ ಮಲ್ಲಯ್ಯ ದಾರಿ ತಪ್ಪಿದಂತಾಗುತ್ತಾನೆ. ತನ್ನ ಬದುಕಿನ ಅನುಭವಗಳೊಂದಿಗೆ ಬೆಸೆದುಕೊಂಡಿದ್ದ ಶಿವನಕೊಳ್ಳದ ಸುತ್ತ ಸರಕಾರದ ಪರವಾನಿಗಿ ಪಡೆದು ರೆಸಾರ್ಟ್ ಮಾಡಿದವರು ಅಲ್ಲಿಯೇ ಹುಟ್ಟಿ ಬೆಳೆದವರಿಗೆ ಪ್ರವೇಶವನ್ನು ನಿರಾಕರಿಸುತ್ತಾರೆ. ತಾನು, ತನ್ನಂತೆ ಅನೇಕರು ಸಂತೋಷಪಟ್ಟು ಆನಂದಿಸಿದ ಶಿವನಕೊಳ್ಳ ಅನ್ಯರ ಅಧೀನಕ್ಕೆ ಒಳಗಾಗಬೇಕಾದ ಪರಿಸ್ಥಿತಿಗೆ ಯಾರನ್ನು ದೂರದಾಗದೆ ಮಲ್ಲಯ್ಯ ಮೂಖನಾಗುತ್ತಾನೆ. ತನ್ನ ಬದುಕಿನ ಸತುವನ್ನೆ ಕಳೆದುಕೊಂಡಂತಾಗುವ ಮಲ್ಲಯ್ಯ ಕಳೆದು ಹೋದ ಶಿವನಕೊಳ್ಳವನ್ನೇ ಹುಡುಕುತ್ತಾನೆ. "ಎಂಥ ಚಂದದ ಶಿವನಕೊಳ್ಳ ಅದು! ಎಡ ಬಲಕ್ಕೆ ಹಬ್ಬಿರುವ ಬೆಟ್ಟಗಳ ನಡುವೆ ಜೋಗುಳದಲ್ಲಿ ಹರಿಯುವ ಹಳ್ಳ. ದಂಡೆಗುಂಟ ಕಾಡಿನಂತೆ ಬೆಳೆದ ಮರಗಳು ಬೆಳ್ಳನೆಯ ಉಸುಕಿನ ಹಾಸು, ತಿಳಿನೀರಿನ ಹರಿವು. ಹಕ್ಕಿ, ಪಕ್ಷಿಗಳ ಸಂಸಾರ. ಹಳ್ಳದಲ್ಲಿ ನಡುನಡುವೆ ಸಣ್ಣ ಸಣ್ಣ ದಿಬ್ಬಗಳು ಚೆಲುವಿನ ನೆಲೆಯಾದ ಅಲ್ಲಿ ಶಿವ-ಪಾರ್ವತಿ ಕೈಲಾಸದಿಂದ ಬಂದು ಕಾಲ ಕಳೆಯುತ್ತಿದ್ದರಂತೆ. ಅದನ್ನು ಕಂಡ ಶಿವ-ಪಾರ್ವತಿಯ ಮಗ ಕುಮಾರಸ್ವಾಮಿ ಮರಳಿ ಕೈಲಾಸಕ್ಕೆ ಹೋಗದೇ ಈ ಸರಹದ್ದಿನ ಬೆಟ್ಟವೊಂದರಲ್ಲಿ ನೆಲೆನಿಂತನಂತೆ. ವನವಾಸಕ್ಕೆ ಬಂದ ರಾಮ, ಸೀತೆ, ಲಕ್ಷ್ಮಣ, ಹನುಮಂತ ಈ ಕೊಳ್ಳ ನೋಡಿ ಇಲ್ಲೇ ಕಾಲ ಕಳೆದರಂತೆ. ಪಾಂಡವರೂ ಇಲ್ಲೇ ಆಶ್ರಯ ಪಡೆದಿದ್ದರಂತೆ. ಯೋಗಿಗಳು ಇಲ್ಲೇ ಸಾಧನೆಗೆ ಬಂದು ತಂಗುತ್ತಿದ್ದರಂತೆ. ಮಲ್ಲಯ್ಯನ ತಂದೆ ಕಾಲದಲ್ಲಿ ಈ ಪ್ರಾಂತ್ಯದ ಮಹಾರಾಜರು ಶಿವನಕೊಳ್ಳದಲ್ಲಿ ಖಾಯಂ ಡೇರೆ ಹಾಕಿಸಿದ್ದರಂತೆ, ನೆನೆಸಿಕೊಂಡಾಗಲೆಲ್ಲ ಪರಿವಾರದೊಂದಿಗೆ ಬಂದು ಕಾಲ ನೂಕುತ್ತಿದ್ದರಂತೆ. ಪರಂಗಿ ಜನರೂ ಈ ಕೊಳ್ಳಕ್ಕೆ ಮಾರು ಹೋಗಿದ್ದರಂತೆ. ದೇಶ ಸುತ್ತುವವರು ಈ ಕೊಳ್ಳಕ್ಕೆ ಬಂದು ದಣಿವು ಆರಿಸಿಕೊಂಡು ಹೋಗುವುದನ್ನು ಮಲ್ಲಯ್ಯ ಕಂಡಿದ್ದ. ಊರಿನ ಜನರಿಗೆ ಶಿವನಕೊಳ್ಳ ಎಂದರೆ ಉಸಿರೇ ಆಗಿತ್ತು. ಕಾರುಹುಣ್ಣಿಮೆಗೆ ಕರಿ ಹರಿಯುವುದೇ ಶಿವನಕೊಳ್ಳದಲ್ಲಿ. ಸಸಿಹಾಕಿ ಚಿಕ್ಕೋರು ಸುಗ್ಗಿಯನ್ನು ಕರೆಯುವುದೇ ಶಿವನಕೊಳ್ಳದಲ್ಲಿ. ಮಣ್ಣೆತ್ತಿನ ಅಮವಾಸ್ಯೆ ದಿನ ಚಿಕ್ಕೋರು ಎತ್ತುಗಳನ್ನು ಪೂಜಿಸಿ ನೀರಿಗೆ ಬಿಡುವುದೇ ಶಿವನಕೊಳ್ಳದಲ್ಲಿ. ಬಾಣಂತಿಯರು ಗಂಗೆಗೆ ಬರುವುದು ಶಿವನಕೊಳ್ಳಕ್ಕೆ, ಮದುವೆಯಾದ ವಧುವರರು ವಾರದ ನೀರಿಗೆ ಬರುವುದೇ ಶಿವನಕೊಳ್ಳಕ್ಕೆ, ಎಳ್ಳಮವಾಸೆ ದಿನ ಚರಗ ಚೆಲ್ಲಿ ಕೊನೆಗೆ ಉಣ್ಣುವುದೇ ಶಿವನಕೊಳ್ಳದಲ್ಲಿ. ಬೆಳೆದ ಪೈರಿನ ಐದು ಸೂಡನ್ನು ತಂದು ಬಿಡುವುದೇ ಶಿವನಕೊಳ್ಳಕ್ಕೆ...." (ಅಮರೇಶ ನುಗಡೋಣಿ; ೨೦೦೪; ಪುಟ : ೩೭-

೩೮). ಪ್ರಾಕೃತಿಕವಾದ ಇಂಥದೊಂದು ಅವಿನಾಭಾವ ಸಂಬಂಧವನ್ನು ಮುಂದಿನ ತಲೆಮಾರುಗಳು ಊಹಿಸಲೂ ಸಾಧ್ಯವಾಗದಂತಹ ಸ್ಥಿತಿ ನಿರ್ಮಾಣವಾದೀತು ಎಂದುಕೊಂಡರೆ ತಪ್ಪಾಗದು. ಪ್ರಕೃತಿಯೊಂದಿಗಿನ ಸಂಬಂಧಗಳೇ ದೂರವಾಗುತ್ತಿರುವ ಸಂದರ್ಭದಲ್ಲಿ ಮಲ್ಲಯ್ಯನ ಬದುಕು ತೆರೆದಿಡುವ ಅನುಭವಗಳು ಕಲ್ಪನೆಗಳೊ, ಊಹೆಗಳೊ ಆಗಿ ಬಿಡುವ ಅಪಾಯಗಳಿಗೆ ಸಿಲುಕುತ್ತಿರುವುದನ್ನು ರೂಪಕಾತ್ಮಕವಾಗಿ ತಿಳಿಸುತ್ತಿರುವ ಈ ಕಥಾ ಭಾಗ ಮುಂದೊಂದು ದಿನ ಇಲ್ಲಿನ ಜನರ ಅರ್ಥಗ್ರಹಿಕೆಗೆ ದಕ್ಕುತ್ತದೆಂಬುದನ್ನೂ ಅನುಮಾನದಿಂದಲೇ ಒಪ್ಪಿಕೊಳ್ಳಬೇಕಾಗುತ್ತದೆ. ಪ್ರಾದೇಶಿಕವಾಗಿ ಜನ ಬದುಕಿನೊಂದಿಗೆ ಬೇರೆಯಾಗಿ ಉಳಿಯದ ಪ್ರಕೃತಿಯನ್ನು ಕುಡಿತಕ್ಕೆ, ವೇಶ್ಯಾವಾಟಿಕೆಗೆ, ಮೋಜಿನ ತಾಣವಾಗಿಸಿಕೊಂಡವರ ಹಿಂದಿನ ಉದ್ದೇಶಗಳಿಗೆ ಆ ಪ್ರದೇಶದ ಅಭಿವೃದ್ಧಿಯ ಆಸಕ್ತಿಗಳಿಲ್ಲ. ಆ ಪ್ರದೇಶದ ಜನರಿಗೆ ಅದರ ಪ್ರವೇಶವನ್ನು ನಿರ್ಬಂಧಿಸುವ ರೆಸಾರ್ಟ್ ಸಂಸ್ಕೃತಿಯನ್ನು ಹುಟ್ಟು ಹಾಕಿರುವವರಲ್ಲಿ ಪ್ರಕೃತಿ ಸೌಂದರ್ಯವನ್ನು ಪ್ರದರ್ಶನ ವಸ್ತುವಾಗಿಸಿಕೊಳ್ಳುವ ಉದ್ದೇಶವಿದೆ. ಪ್ರಕೃತಿಯಲ್ಲಿ ಪ್ರದರ್ಶನಕ್ಕೆ ಅಗತ್ಯವಾದ ಎಲ್ಲಾ ಮಾರ್ಪಾಡುಗಳನ್ನು ಮಾಡಿಕೊಳ್ಳುವವರಿಗೆ ಪ್ರಕೃತಿ ಸೌಂದರ್ಯವೂ ಒಂದು ಬಂಡವಾಳವಾಗಿ ಪರಿಣಮಿಸುತ್ತಿದೆ. ಭಾರತೀಯರಲ್ಲಿ 'ಸೌಂದರ್ಯ'ವು ಬದುಕಿನೊಂದಿಗೆ ಅವಿನಾಭಾವ ಸಂಬಂಧ ಹೊಂದಿರುವಂತದ್ದು. ಸೌಂದರ್ಯಯುಕ್ತ ಪ್ರದೇಶಗಳು ಬಳಕೆಯ ವಸ್ತುಗಳಾಗಿದ್ದು ಅವುಗಳೊಂದಿಗೆ ಪೂಜ್ಯತೆಯ ಭಾವವನ್ನು, ಆರಾಧನೆಯಂತಹ ಸಂಪ್ರದಾಯಗಳನ್ನು ರೂಢಿಸಿಕೊಂಡಿರುತ್ತಾರೆ. ಪಾಶ್ಚಾತ್ಯರಲ್ಲಿ ಸೌಂದರ್ಯವೆಂಬುದು ಪ್ರದರ್ಶನದ ವಸ್ತು ಭಾರತೀಯ ಸಂದರ್ಭದಲ್ಲಿ ಬಳಕೆ ವಸ್ತುಗಳಲ್ಲಿ ಸೌಂದರ್ಯ ಇದ್ದಾಗ್ಯೂ, ಅದನ್ನು ನಿರ್ಬಂಧಿಸಿಟ್ಟು ಪ್ರದರ್ಶನದ ಲಾಭದಾಯಕ ಮಾರ್ಗಗಳಿಗೆ ಬಳಸಿಕೊಳ್ಳುವುದಿಲ್ಲ. ಪ್ರಕೃತಿ ಸೌಂದರ್ಯಗಳನ್ನು ಗುರುತಿಸುವ, ಅವುಗಳನ್ನು ಈ ರೀತಿ ಪ್ರದರ್ಶನದ ಲಾಭದಾಯಕ ಉದ್ಯೋಗಕ್ಕೆ ಬಳಸಿಕೊಳ್ಳುವ ಮನೋಭಾವಗಳು ನವವಸಾಹತುಶಾಹಿಯಿಂದಲೇ ಪ್ರೇರಿತವಾಗಿವೆ. ಇಂತಹ ಪ್ರೇರಣೆಗಳಿಗೆ ಬಂಡವಾಳ ಹಾಕುವ ಸ್ಥಳೀಯ ಇಲ್ಲವೇ ಹೊರಗಿನಿಂದ ಬಂದ ಸ್ಥಿತಿವಂತರಿಂದಾಗಿ ಜನಸಾಮಾನ್ಯರ ಬದುಕು ನಿಂತ ನೆಲವನ್ನು ಕಳೆದುಕೊಂಡು ದಿಕ್ಕೆಡುತ್ತಿದೆ. ಮಲ್ಲಯ್ಯನಂತವರಿಗೆ ಶಿವನಕೊಳ್ಳ ಅನುಭವದ ಭಾಗವಾಗಿ ಕಂಡು ಬಂದಂತೆ ಆತನ ಮಗನಲ್ಲಿ ಇಂತಹ ಭಾವನೆಗಳು ಇಲ್ಲವಾಗಿವೆ. ಅಲ್ಲದೆ ಸ್ವತಃ ಮಲ್ಲಯ್ಯನ ಸಮವಯಸ್ಕನಾದ ಷಣ್ಮುಖಪ್ಪ ಹೊಸ ಬದಲಾವಣೆಗಳಿಗೆ ತೆರೆದುಕೊಳ್ಳುತ್ತಿರುವುದು ಸೋಜಿಗವನ್ನು ಬದುಕಿನ ಅನಿವಾರ್ಯತೆಗಳನ್ನು ತಿಳಿಸುತ್ತದೆ. ಮೈನ್ಸ್ ಲಾರಿಗಳ ಓಡಾಟದಿಂದ ಗಾಳಿ, ನೀರಿನಲ್ಲಿ ಮೈನ್ಸ್ ಧೂಳಿನ ಕಣಗಳು ಸೇರಿ ಮನುಷ್ಯರ ಆರೋಗ್ಯಕ್ಕೆ ಹಾನಿಯನ್ನುಂಟು ಮಾಡುತ್ತಿರುವುದು ಸ್ವತಹೀನ ಮನುಷ್ಯ ಬದುಕಿನ ಪೂರ್ವ ಪರಿಚಯದಂತೆ ಕಂಡುಬರುತ್ತದೆ.

ಕೃಷಿಸಂಬಂಧಿ ಚಟುವಟಿಕೆಗಳು ಈ ಪ್ರದೇಶದ ಪ್ರಾಕೃತಿಕ ಕಾರಣಗಳಿಂದ ಏರಿಳಿತಗಳನ್ನು ಅನುಭವಿಸುತ್ತಿವೆ. ಇದರೊಂದಿಗೆ ನವವಸಾಹತುಶಾಹಿ ತಂದೊಡ್ಡಿರುವ ಆತಂಕಗಳು ಸಂಪೂರ್ಣವಾಗಿ

ಈ ಪ್ರದೇಶದ ಕೃಷಿಯನ್ನೇ ನಾಶ ಮಾಡುವಂತಿವೆ. ಕೃಷಿಯನ್ನೇ ಅವಲಂಬಿಸಿದ್ದ ಅಶಿಕ್ಷಿತರ ಬದುಕು ಹಾಗೂ ಶಿಕ್ಷಿತರಾಗಿದ್ದಾಗ್ಯೂ ತಕ್ಕ ಉದ್ಯೋಗ ದೊರಕದೆ ನರಳುವಂತವರು ಎಲ್ಲರೂ ಬದುಕಿನ ಭರವಸೆಗಳನ್ನು ಕಳೆದುಕೊಳ್ಳುವ ಸ್ಥಿತಿ ಈ ಪ್ರದೇಶದಲ್ಲಿ ನಿರ್ಮಾಣವಾಗುತ್ತಿದೆ.

ಸರಕಾರಿ ವಲಯದ ಉದ್ಯೋಗಗಳನ್ನು ಖಾಸಗೀಕರಣಗೊಳಿಸುತ್ತಿರುವುದು ನವವಸಾಹತುಶಾಹಿ ತಂದೊಡ್ಡಿರುವ ಮತ್ತೊಂದು ಸಮಸ್ಯೆ. ಖಾಸಗಿ ಉದ್ಯೋಗಗಳು ಭರವಸೆಯನ್ನು ಮೂಡಿಸುವ, ನಿರೀಕ್ಷಿತ ಸೌಲಭ್ಯಗಳನ್ನು ನೀಡಿ ಜನರನ್ನು ಆಕರ್ಷಿಸುವ ರೀತಿ ಸರಕಾರಿ ವಲಯದ ಉದ್ಯೋಗಗಳನ್ನು ಮಂಕಾಗಿಸಿದೆ. ಖಾಸಗೀಕರಣ ಪ್ರಾದೇಶಿಕವಾಗಿ ಉಂಟುಮಾಡಿರುವ ಪರಿಣಾಮಗಳನ್ನು ಇಲ್ಲಿನ ಕಥನ ತಿಳಿಸುತ್ತದೆ. 'ಏ ದಿಲ್ ಮಾಂಗೆ ಮೋರ್' (ಅಮರೇಶ ನುಗಡೋಣಿ) ಕತೆಯಲ್ಲಿ ಖಾಸಗೀಕರಣದಿಂದ ಕಂಡುಬರುವ ಸಮಸ್ಯೆಗಳ ಚಿತ್ರಣವಿದೆ. ಬೆಳಗ್ಗೆ ಆರು ಘಂಟೆಗೆ ಬರಬೇಕಾದ ಊರಿನ ಫಸ್ಟ್ ಬಸ್ಸ್ ಎಂಟು ಘಂಟೆಯಾದರೂ ಬರುವುದಿಲ್ಲ. ಗ್ರಾಮಪಂಚಾಯಿತಿ ಸದಸ್ಯಳಾದ ನಾಗಲಕ್ಷ್ಮೀ ಸರಕಾರಿ ಕೆಲಸಗಾರರ ಬೇಜವಾಬ್ದಾರಿಯನ್ನು ದೂಷಿಸಿ ಖಾಸಗೀಕರಣಕ್ಕೆ ಮೊರೆಹೋಗುವುದೇ ಉಚಿತವೆಂದು ಗೊಣಗುತ್ತಾಳೆ. ಆಕೆಯ ಮಾತಿಗೆ ಪ್ರತಿಕ್ರಿಯಿಸುವ ಶೀನಪ್ಪ ಸರಕಾರಿ ಬಸ್ಸುಗಳು ಸರಿಯಾಗಿ ಕಾರ್ಯ ನಿರ್ವಹಿಸುವುದಿಲ್ಲ. ಆದರೆ ಅವುಗಳನ್ನು ಹಿಡಿದು ಕೇಳುವ ಅಧಿಕಾರ ನಮಗಿರುತ್ತದೆ. ಖಾಸಗಿ ಬಸ್ಸುಗಳ ಬಗ್ಗೆ ನಮಗೆ ಇಂತಹ ಅಧಿಕಾರ ಬರುವುದಿಲ್ಲ. ಖಾಸಗಿ ಬಸ್ಸಿನವರು ಮಿತಿಮೀರಿ ಜನರನ್ನು ಬಸ್ಸಲ್ಲಿ ತುಂಬಿಸಿ ಕೊಳ್ಳುವುದು, ಹಣ ಸುಲಿಗೆ ಮಾಡುವುದು, ಯಾವುದನ್ನು ಪ್ರಶ್ನಿಸುವ ಅಧಿಕಾರ ಜನಸಾಮಾನ್ಯರಿಗೆ ಉಳಿಯುವುದಿಲ್ಲವೆಂದು ಹೇಳುತ್ತಾನೆ.

ಸರಕಾರಿ ಶಾಲೆಗಳು ಸರಿಯಾಗಿ ಕಾರ್ಯನಿರ್ವಹಿಸದೇ ಇರುವುದು, ಮಳೆಗಾಲ ಬಂದರೂ ಸೇತುವೆ ಕೆಲಸ ಸರಕಾರಿ ಕೆಲಸಗಾರರಿಂದ ದುರಸ್ತಿಗೊಳ್ಳದೆ ಇರುವುದು ಇತ್ಯಾದಿಗಳು. ಖಾಸಗೀಕರಣವನ್ನು ಒಪ್ಪುವಂತೆ ರೂಪಗೊಳ್ಳುವ ಸಂದರ್ಭಗಳೇ ಆಗಿವೆ. ಔದ್ಯೋಗಿಕ ವಲಯವನ್ನು ಆವರಿಸಿರುವ ಖಾಸಗೀಕರಣದಿಂದ ಉಂಟಾಗಿರುವ ಅಭದ್ರತೆಯನ್ನು 'ಒಡಲುಗೊಂಡವರು' (ಅಮರೇಶ ನುಗಡೋಣಿ) ಕತೆ ತಿಳಿಸುತ್ತದೆ. ರೇಣುಕಾ ತನ್ನ ಓದಿಗೆ ಎಲ್ಲೂ ಸರಕಾರಿ ನೌಕರಿ ದೊರೆಯದಿದ್ದಾಗ ಎನ್.ಜಿ.ಓ.ದಲ್ಲಿ ಕೆಲಸಕ್ಕೆ ಸೇರಿಕೊಳ್ಳುತ್ತಾಳೆ. ಖಾಸಗೀಕರಣಗೊಳ್ಳುತ್ತಿರುವ ಉದ್ಯೋಗವಕಾಶಗಳು ಹಾಗೂ ಹೆಸರಿಗೆ ಮಾತ್ರವೇ ಉಳಿದುಕೊಂಡಿರುವ ಸರಕಾರಿ ಉದ್ಯೋಗಗಳನ್ನು ಕುರಿತು ಚಿಂತಿತಳಾಗುತ್ತಾಳೆ. ಆದರೆ ಖಾಸಗೀಕರಣ ತಂದೊಡ್ಡಿರುವ ಅಪಾಯಗಳು ಶೈಕ್ಷಣಿಕ ಆಯ್ಕೆಯನ್ನು ನಿಯಂತ್ರಿಸುತ್ತೇವೆ. ಸಾರಿಗೆ, ಶೈಕ್ಷಣಿಕ ವಲಯ ಹಾಗೂ ಔದ್ಯೋಗಿಕ ವಲಯದಲ್ಲಿ ಖಾಸಗೀಕರಣಕ್ಕೆ ಅವಕಾಶ ಕೊಡದೆ ಸರಕಾರಿ ನೌಕರರೇ ಮುತುವರ್ಜಿಯಿಂದ ಕಾರ್ಯನಿರ್ವಹಿಸುವಂತೆ ಬಿಗಿ ಕಾನೂನುಗಳನ್ನು ರೂಪಿಸಿಕೊಳ್ಳುವ ಅವಶ್ಯಕತೆಯನ್ನು ಕತೆ ತಿಳಿಸುತ್ತದೆ. ನವವಸಾಹತುಶಾಹಿ ಸಂದರ್ಭದಿಂದ ಕಂಡುಬರುವ ಬದಲಾವಣೆಗಳು ಬದುಕಿನ ಶೈಲಿಯಲ್ಲಿಯೂ ಬದಲಾವಣೆಗಳನ್ನು ತಂದಿವೆ.

ಹೊರಗಿನ ಒತ್ತಡಗಳಿಂದ ಹಾಗೂ ಸಾಮಾಜಿಕ ಬದುಕಿನ ಒಳಗೆ ಕಂಡುಬಂದಿರುವ ಒತ್ತಡಗಳಿಂದ ಸಾಂಸ್ಕೃತಿಕ ಬದುಕಿನಲ್ಲಾದ ಬದಲಾವಣೆಗಳನ್ನು ಇಲ್ಲಿನ ಕಥನ ತಿಳಿಸುತ್ತದೆ. ಮತೀಯ ಹಿನ್ನೆಲೆಯ ಸಾಂಸ್ಕೃತಿಕ ಸಂಘರ್ಷ ಮೂಲಭೂತವಾದಿ ಸಮುದಾಯಿಕ ಆಲೋಚನೆಗಳನ್ನು ಬದಲಾಯಿಸಬಯಸಿತು. ಮತೀಯ ಹಿನ್ನೆಲೆಯ ಸಾಂಸ್ಕೃತಿಕ ಸಂಘರ್ಷ ಒಂದು ನಿರ್ದಿಷ್ಟ ಕೋಮಿನಲ್ಲಿಯೇ ಇರುವ ಜಡಗೊಂಡ ಸಾಂಪ್ರದಾಯಿಕ ಆಲೋಚನೆ, ಆಚರಣೆಗಳನ್ನು ವಿಮರ್ಶಿಸುತ್ತದೆ. ವಿಭಿನ್ನ ಕೋಮುಗಳ ನಡುವಿನ ಸಾಂಸ್ಕೃತಿಕ ಸಂಘರ್ಷ ಪರಸ್ಪರ ಶ್ರೇಷ್ಠ - ಕನಿಷ್ಠವೆಂಬ ತಾರತಮ್ಯವನ್ನು ವಿಮರ್ಶಿಸುತ್ತಲೇ ಬದಲಾವಣೆಗಳನ್ನು ತರಬಯಸಿತು. ಮತೀಯ ಹಿನ್ನೆಲೆಯ ಸಾಂಸ್ಕೃತಿಕ ಸಂಘರ್ಷ ಸಮುದಾಯಗಳ ಜಡತ್ವವನ್ನು ಬದಲಾಯಿಸಲು ಅಂತರ್‌ಜಾತಿಯ ವಿವಾಹ, ಶೈಕ್ಷಣಿಕ ಪ್ರಗತಿ ಕಂಡುಕೊಳ್ಳುವಿಕೆ, ಪಾರಂಪರಿಕ ಶ್ರೇಷ್ಠತೆಯನ್ನು ಪ್ರತಿನಿಧಿಸುವ ವೃತ್ತಿಯ ವಿರೋಧ ಮುಂತಾದವುಗಳನ್ನು ಜಾರಿಗೆ ತರುತ್ತಿದೆ. ಮತೀಯ ಹಿನ್ನೆಲೆಯ ಸಾಂಸ್ಕೃತಿಕ ಸಂಘರ್ಷವು ಡಿ.ಆರ್. ನಾಗರಾಜ್‌ರವರು ಹೇಳುವ 'ಜಾತಿ ಪದ್ಧತಿಯ ತಾತ್ವಿಕ ನೆಲೆಗಳನ್ನು'[17] ವಿರೋಧಿಸಿದಾಗಲೇ ಯಶಸ್ಸನ್ನು ಕಾಣಲು ಸಾಧ್ಯ. Sense of Pollution ಮತ್ತು ಅನುವಂಶಿಕ ಶ್ರೇಷ್ಠತೆಯನ್ನು ವಿರೋಧಿಸುವ ಕುವೆಂಪುರವರ ಕಾದಂಬರಿಗಳು ಕರ್ಮಸಿದ್ಧಾಂತವನ್ನು ಒಪ್ಪಿಕೊಳ್ಳುವ ಮಿತಿಗೆ ಒಳಗಾಗುವುದನ್ನು ಡಿ.ಆರ್. ನಾಗರಾಜ್‌ರವರು ಗುರುತಿಸುತ್ತಾರೆ. ಹೈದರಾಬಾದ್ ಕರ್ನಾಟಕದ ಕಥನ ಸಾಹಿತ್ಯದಲ್ಲಿ ಮತೀಯವಾಗಿ ಕಂಡುಬರುವ ವಿರೋಧದ ನೆಲೆಗಳು ಕಾಲಘಟ್ಟದ ಒತ್ತಡಗಳಿಗೆ ಅನುಗುಣವಾಗಿಯೇ ಕಂಡುಬಂದಿವೆ. ಸೆನ್ಸ್ ಆಫ್ ಪೊಲೂಷನ್ ಹಾಗೂ ಅನುವಂಶಿಕ ಶ್ರೇಷ್ಠತೆ ಸಮಾಜದಲ್ಲಿ ಬೇರೂರಿದ್ದು, ಮತೀಯ ಅಂತರಗಳನ್ನು ಉಂಟುಮಾಡಿರುವುದನ್ನು ಜಯತೀರ್ಥರಾಜ ಪುರೋಹಿತ, ಶಾಂತರಸ, ಚಂದ್ರಕಾಂತ ಕುಸನೂರ ಗುರುತಿಸುತ್ತಾರೆ. ಆದರೆ ಮತೀಯ ಅಂತರಗಳನ್ನು ಅನುಸರಿಸಿಕೊಂಡು ಹೋಗುತ್ತಿರುವ ಸಾಮಾಜಿಕ ಬದುಕಿನ ಅನಿವಾರ್ಯತೆಗಳನ್ನು ಮಾತ್ರವೇ ಇವರ ಕಥನ ತಿಳಿಸುತ್ತದೆ. ಬದಲಾವಣೆಯ ಅಪೇಕ್ಷೆಗಳು ಕಥನಕಾರರಲ್ಲಿರುವುದು ಸ್ಪಷ್ಟವಾದರೂ ಅದನ್ನು ಬದಲಾಯಿಸಲಾಗದ ಪರಿಸ್ಥಿತಿಗಳ ಉಗ್ರರೂಪದ ವಿರೋಧ ಇಲ್ಲಿ ಕಂಡುಬರುವುದಿಲ್ಲ. ರಜಾಕಾರರ ಹಾವಳಿಯ ಏಳು-ಬೀಳಿನ ಕಾಲಘಟ್ಟದ ಒತ್ತಡಗಳು ಸೌಹಾರ್ದತೆಯನ್ನು ಎಲ್ಲಾ ತಾರತಮ್ಯಗಳ ಮಧ್ಯೆಯೂ ಒಪ್ಪುವ ಜನ ಬದುಕು ವಿಶಿಷ್ಟವಾಗಿ ಕಂಡುಬರುತ್ತದೆ. ಆದರೆ ಈ ಸಂದರ್ಭದಲ್ಲಿ ಹಿಂದೂ-ಮುಸ್ಲಿಂ ಅಂತರ್‌ಜಾತಿಯ ವಿವಾಹವು ಮತೀಯ ಮೂಲಭೂತವಾದದ ಬದಲಾವಣೆಯ ಉದ್ದೇಶಗಳಿಗಿಂತ ರಕ್ತಪಾತ ರಹಿತ ಬದುಕಿನ ಅವಶ್ಯಕತೆಯಾಗಿ ಕಂಡು ಬರುತ್ತದೆ. ಇಂತಹ ಕಾಲಘಟ್ಟದ ಒತ್ತಡಗಳಾಚೆಗೆ ಈ ರೀತಿಯ ಸಾಂಸ್ಕೃತಿಕ ಸಂಘರ್ಷ ಕಂಡುಬರುವುದರ ಬಗೆಗೆ ನಿಖರವಾಗಿ ಹೇಳಲಾಗದು.

ಕೆಳವರ್ಗ ಹಾಗೂ ಮೇಲ್ವರ್ಗವೆಂಬ ಶ್ರೇಣೀಕರಣದ ವಿರುದ್ಧ ಪ್ರತಿಕ್ರಿಯಿಸುವ ಇಲ್ಲಿನ ಕಥನ ಈ ಶ್ರೇಣೀಕರಣಕ್ಕೆ ಕಾರಣವಾಗಿರುವ ಅಂಶಗಳನ್ನು ವಿರೋಧಿಸುತ್ತದೆ. ಮೇಲ್ವರ್ಗದ ಶೋಷಣೆಯನ್ನು ವಿರೋಧಿಸುವ ಪೂರ್ಣ ಪ್ರಮಾಣದ ಶಕ್ತಿ ಸಾಲದೆ ಉಳಿದಿರುವ ಕೆಳವರ್ಗದವರ ನೋವಿನ ವಿಭಿನ್ನ ರೂಪಗಳನ್ನು ಚೆನ್ನಣ್ಣ ವಾಲೀಕಾರರು ತಿಳಿಸುತ್ತಾರೆ. ಕೆಳವರ್ಗದ ಸ್ತ್ರೀ ಬದುಕಿನ ಮೇಲೆ ಮೇಲ್ವರ್ಗ

ಹೇರುವ ಆಚರಣೆಗಳು ಮತೀಯ ಹಿನ್ನೆಲೆಯಲ್ಲಿ ಶ್ರೇಷ್ಠ-ಕನಿಷ್ಠವೆಂಬ ತಾರತಮ್ಯವನ್ನು ಪ್ರತಿಷ್ಠಾಪಿಸುತ್ತವೆ. ಸ್ತ್ರೀ ನೆಲೆಯಿಂದಲೇ ಇಂತಹ ಹೇರಿಕೆಗಳನ್ನು ವಿರೋಧಿಸುವ ಇವರ ಕಥನ ಸಾಂಪ್ರದಾಯಿಕ ಬದುಕಿನ ನೇರ ಅನುಭವಗಳನ್ನು ಪಡೆದಿರುವ ಸ್ತ್ರೀಯರಲ್ಲಿ ಉಂಟಾಗಿರುವ ಜಾಗೃತಿಯನ್ನು ಮುನ್ನೆಲೆಗೆ ತರುತ್ತಾರೆ. ಇವರ 'ಪುಂಡಿ ಪೂಜಾರಿಯಾದದ್ದು' ಕತೆ ಸೆನ್ಸ್ ಆಫ್ ಪೊಲೂಷನ್, ಅನುವಂಶಿಕ ಶ್ರೇಷ್ಠತೆ ಹಾಗೂ ಕರ್ಮಸಿದ್ಧಾಂತಗಳನ್ನು ಸಂಪೂರ್ಣವಾಗಿ ಕಿತ್ತೊಗೆಯುವ ಸಾಧ್ಯತೆಗಳನ್ನು ತಿಳಿಸುತ್ತದೆ. ಶ್ರೇಣೀಕೃತ ವ್ಯವಸ್ಥೆಯಿಂದ ಕಂಡುಬರುವ ಶೋಷಣೆಯನ್ನು ಹಸಿಹಸಿಯಾಗಿಯೇ ಚಿತ್ರಿಸುವ, ಮತೀಯ ಸಮಾನತೆಯನ್ನು ಆಗ್ರಹಿಸುವ ಇವರ ಕಥನದ ರೀತಿ ವಿಶಿಷ್ಟವಾಗಿದೆ.

ಮೇಲ್ವರ್ಗದ ಮತೀಯ ಅಹಂಮಿಕೆಗಳು ಹಾಗೂ ಜಡಗೊಂಡಿರುವ ಜಾತಿವ್ಯವಸ್ಥೆಯ ರೂಢಿಗಳನ್ನು ಕುಂ. ವೀರಭದ್ರಪ್ಪ ಮತ್ತು ಅಮರೇಶ ನುಗಡೋಣಿಯವರ ಕಥನ ವಿಮರ್ಶಿಸುತ್ತದೆ. ಸಾಂಸ್ಕೃತಿಕ ಒಳಗೊಳ್ಳುವಿಕೆಗೆ ಅವಕಾಶಗಳನ್ನೇ ಕೊಡದ ಮೇಲ್ ಸಮುದಾಯದ ಸೀಮಿತ ಆಲೋಚನೆಗಳನ್ನು ಸ್ವತಃ ಆ ಸಮುದಾಯದ ಪ್ರಜ್ಞಾವಂತರೇ ಪ್ರಶ್ನಿಸುತ್ತಾರೆ. ಅನ್ಯ ಸಮುದಾಯದ ವಿರೋಧದ ರೀತಿಗಿಂತ ಭಿನ್ನವಾಗುವ ಈ ಸಂಘರ್ಷದ ಸ್ವರೂಪ ಸಾಂಸ್ಕೃತಿಕ ಬಲಾವಣೆ ಹಾಗೂ ಮತೀಯ ಪರಿಷ್ಕರಣೆಗೆ ಅವಕಾಶವನ್ನು ಕೊಡುತ್ತದೆ. ಈ ರೀತಿಯ ಸಂಘರ್ಷದಲ್ಲಿನ ಕೆಲ ನಕಾರಾತ್ಮಕ ಅಂಶಗಳನ್ನು ಇಲ್ಲಿನ ಕಥನ ತಿಳಿಸುತ್ತದೆ. ಪ್ರಜ್ಞೆಯ ಜಾಗೃತಿ, ಶಿಕ್ಷಣದಿಂದ ಹೊಸ ಬದುಕಿನ ಸಾಧ್ಯತೆಗಳಿದ್ದಾಗ್ಯೂ, ಸ್ವಾರ್ಥ, ಉನ್ನತ ಸ್ಥಾನಮಾನದ ಆಕರ್ಷಣೆಗಳಿಂದಾಗಿ ಸಮಾಜದ ಯಾವ ಸಮುದಾಯವೂ ಅಭಿವೃದ್ಧಿಯೆಡೆಗೆ ಚಲಿಸಲಾರದು. ಕೆಳವರ್ಗಕ್ಕೆ ಅನಿವಾರ್ಯವಾಗುವ ಸ್ವಾರ್ಥ ಹಾಗೂ ಜಾತ್ಯಾತೀತ ಬದುಕಿಗೆ ಕಾರಣವಾಗ ಬೇಕಾಗಿದ್ದ ಮಹತ್ವದ ಘಟನೆಗಳನ್ನು ಕೋಮುಗಲಭೆಗೆ ಬಳಸಿ ಪಕ್ಷದ ಅಭಿವೃದ್ಧಿ ಸಾಧಿಸುವ ಮೇಲ್ವರ್ಗದವರ ಹೊಸ ರಾಜಕಾರಣ ಅಮರೇಶ ನುಗಡೋಣಿಯವರ ಕಥನದ ವಿಶಿಷ್ಟ ಲಯವಾಗಿದೆ. ಹೈದರಾಬಾದ್ ಕರ್ನಾಟಕದ ಆಚೆಗೂ ಈ ರೀತಿ ಮತೀಯ ಹಿನ್ನೆಲೆಯ ಸಾಂಸ್ಕೃತಿಕ ಸಂಘರ್ಷ ಕಂಡುಬಂದಿರುವ ಸಾಧ್ಯತೆಗಳಿವೆ. ಆದರೆ ಈ ಪ್ರದೇಶಕ್ಕೆ ಅನ್ವಯಿಸುವಂತೆ ಕಂಡುಬರುವ ಮತೀಯ ಹಿನ್ನೆಲೆಯ ಸಂಪ್ರದಾಯಗಳು, ಬದುಕಿನ ರೀತಿನೀತಿಗಳು ವಿಶಿಷ್ಟವಾಗಿ ಕಂಡುಬರುತ್ತದೆ.

ಪ್ರಾದೇಶಿಕವಾಗಿ ಜನರ ಬದುಕಿನಿಂದಲೇ ಸಂಘರ್ಷವೊಂದು ರೂಪಿತಗೊಂಡು ಬದಲಾವಣೆಗಳನ್ನು ತರಬಯಸುವ ರೀತಿಗೂ ಹೊರಗಿನ ಒತ್ತಡಗಳ ಕಾರಣದಿಂದ ಸಾಂಸ್ಕೃತಿಕ ಸಂಘರ್ಷ ಕಂಡುಬರುವ ರೀತಿಗೂ ವ್ಯತ್ಯಾಸವಿದೆ. ನವವಸಾಹತುಶಾಹಿ ಸಂದರ್ಭದಿಂದ ಜನ ಬದುಕಿನಲ್ಲಿ, ಸಮಾಜದಲ್ಲಿ ವಿಸ್ಮೃತಿಯ ಆತಂಕಗಳು, ಸಂಬಂಧಿಸಿದಂತೆ ಅಭದ್ರತೆಗಳೇ ಹೆಚ್ಚಾಗಿ ಕಂಡುಬಂದಿವೆ. ಮನುಷ್ಯ ಬದುಕಿನ ಸೂಕ್ಷ್ಮ ಸಂವೇದನೆಗಳನ್ನು, ಜೀವಹಾನಿ, ಪ್ರಾಕೃತಿಕ ವಿನಾಶವನ್ನು ತಂದೊಡ್ಡುವ ಹೊರಗಿನ ಒತ್ತಡಗಳಿಂದಾಗಿ ಕಂಡುಬರುವ ಸಾಂಸ್ಕೃತಿಕ ಸಂಘರ್ಷ ಮನುಷ್ಯನ ಪ್ರಗತಿಗೆ ಪೂರಕವಾಗಿರುವಂತಹದ್ದಲ್ಲ. ಈ ರೀತಿಯ

ಸಂಘರ್ಷದಲ್ಲಿ ನಕಾರಾತ್ಮಕ ಪರಿಣಾಮಗಳ ಪ್ರಮಾಣವೇ ಅಧಿಕವಾಗಿರುವುದು ಕಂಡುಬರುತ್ತದೆ. ವಸಾಹತುಶಾಹಿ ಸಂದರ್ಭದ ಕೆಲ ಬದಲಾವಣೆಗಳು ಮನುಷ್ಯ ಪ್ರಗತಿಗೆ ಪೂರಕವಾಗಿದ್ದನ್ನು ಕುಂ. ವೀರಭದ್ರಪ್ಪ ಅವರ 'ಅರಮನೆ' ಕಾದಂಬರಿ ತಿಳಿಸುತ್ತದೆ. ನವವಸಾಹತುಶಾಹಿ ಕಾಲಘಟ್ಟದಿಂದ ಅತಂತ್ರಗೊಂಡಿರುವ ಮನುಷ್ಯ ಬದುಕಿನ ಅನೇಕ ಸಂಗತಿಗಳನ್ನು ಅಮರೇಶ ನುಗಡೋಣಿಯವರ ಕಥನ ತಿಳಿಸುತ್ತದೆ. ಆಯಾ ಕಾಲಘಟ್ಟಕ್ಕೆ ಅನುಗುಣವಾಗಿ ಕಂಡುಬಂದ ಬಾಹ್ಯ ಒತ್ತಡಗಳ ಪರಿಣಾಮ ಈ ಪ್ರದೇಶದ ಸಾಂಸ್ಕೃತಿಕ ಬದುಕಿನಲ್ಲಿ ಉಂಟುಮಾಡಿರುವ ಪರಿಣಾಮಗಳನ್ನು ತಿಳಿಸುವ ಇಲ್ಲಿನ ಕಥನಕ್ಕೆ ಸಾಂಸ್ಕೃತಿಕ ಸ್ಮಂತಿಕೆಯ ಮಹತ್ವಾಕಾಂಕ್ಷೆಯಿದೆ. ಹೊರಗಿನವರು ಹೇರುವ ಬದಲಾವಣೆಗಳಿಂದಾಗುವ ಅಪಾಯಗಳನ್ನು ಮನವರಿಕೆ ಮಾಡುವ ಮತ್ತು ನಮ್ಮದೆನ್ನುವ ಸಾಂಸ್ಕೃತಿಕ ಬದುಕನ್ನು ಪರಿಷ್ಕರಿಸಿ ಗಟ್ಟಿಗೊಳಿಸಿಕೊಳ್ಳಬೇಕಾದುದರ ಅಗತ್ಯತೆಯನ್ನು ಇಲ್ಲಿನ ಕಥನ ತಿಳಿಸುತ್ತದೆ.

ಸಾಂಸ್ಕೃತಿಕ ಸಂಘರ್ಷ ಎಲ್ಲಾ ಪ್ರದೇಶಗಳಲ್ಲಿಯೂ ಕಂಡುಬರುವಂತಹ ಸಂಗತಿ. ಈ ರೀತಿಯ ಸಂಘರ್ಷಗಳನ್ನು ದಾಟುತ್ತಲೇ ಸಾಂಸ್ಕೃತಿಕ ಚಲನಶೀಲತೆಯನ್ನು ಪ್ರತಿಯೊಂದು ಪ್ರದೇಶವೂ ಕಾಯ್ದುಕೊಂಡಿರುತ್ತದೆ. ಸಾಂಸ್ಕೃತಿಕ ಸಂಘರ್ಷದ ಸಕಾರಾತ್ಮಕ ಹಾಗೂ ನಕಾರಾತ್ಮಕ ಬದಲಾವಣೆಗಳಿಗೆ ಸಂಬಂಧಿಸಿದಂತೆ ಪ್ರತಿ ಪ್ರದೇಶವೂ ವಿಭಿನ್ನ ಅನುಭವಗಳನ್ನು ಕಟ್ಟಿಕೊಡುತ್ತದೆ. ಈಗಾಗಲೇ ಅಭಿವೃದ್ಧಿಯನ್ನು ಹೊಂದಿರುವ ಕರ್ನಾಟಕದ ಬೇರೆ ಬೇರೆ ಪ್ರದೇಶಗಳಲ್ಲಿನ ಸಾಂಸ್ಕೃತಿಕ ಸಂಘರ್ಷದ ಸ್ವರೂಪಕ್ಕೂ ಹಿಂದುಳಿದ ಪ್ರದೇಶವೆಂದು ಗುರುತಿಸಲಾದ ಹೈದರಾಬಾದ್ ಕರ್ನಾಟಕದಲ್ಲಿನ ಸಾಂಸ್ಕೃತಿಕ ಸಂಘರ್ಷದ ಸ್ವರೂಪಕ್ಕೂ ಪ್ರಾದೇಶಿಕವಾದ ಕೆಲ ಭಿನ್ನತೆಗಳಿವೆ. ಪ್ರಾದೇಶಿಕವಾಗಿ ಸಂಘರ್ಷದಲ್ಲಿರುವ ಭಿನ್ನತೆಗಳು ಪರಿಣಾಮದ ಹಿನ್ನೆಲೆಯಲ್ಲಿಯೂ ಭಿನ್ನತೆಗಳನ್ನು ಪಡೆದಿರುತ್ತವೆ. ಪ್ರದೇಶಕ್ಕೆ ಸಂಬಂಧಿಸಿದಂತೆ ಎಲ್ಲಾ ಸಮುದಾಯಗಳಲ್ಲಿ ಕಂಡುಬರುವ ಸಾಂಸ್ಕೃತಿಕ ಸಂಘರ್ಷಕ್ಕೂ ಪ್ರಾಧ್ಯಾನತೆ ದೊರೆಯಬೇಕೆಂಬುದು ಮುಖ್ಯ ಸಂಗತಿ. ಇದರಂತೆ ವಸಾಹತುಶಾಹಿ ಹಾಗೂ ನವವಸಾಹತುಶಾಹಿಯಂತಹ ಸಂದರ್ಭಕ್ಕೆ ಕರ್ನಾಟಕದ ಎಲ್ಲಾ ಪ್ರದೇಶಗಳ ಪ್ರತಿಕ್ರಿಯೆಯೂ ಸೇರ್ಪಡೆಯಾಗಬೇಕಾದದ್ದು ಮುಖ್ಯ ಸಂಗತಿಯಾಗಿದೆ. ಈ ಹಿನ್ನೆಲೆಯಲ್ಲಿ ಹೈದರಾಬಾದ್ ಕರ್ನಾಟಕದ ಕಥನ ಸಾಹಿತ್ಯ ಮುನ್ನೆಲೆಗೆ ತರುತ್ತಿರುವ ಸಾಂಸ್ಕೃತಿಕ ಸಂಘರ್ಷ ಗಣನೆಗೆ ಬರಲೇಬೇಕಾದ ವಿಶಿಷ್ಟ ವಿಷಯವಾಗಿದೆ.

**ಅಡಿಟಿಪ್ಪಣಿ**

೧. ಜಾತಿಪದ್ಧತಿಯನ್ನು ಸಂಘಟಿಸಿರುವ ತಾತ್ವಿಕ ನೆಲೆಗಳಾದ ೧. ಶುದ್ಧಿ ಮತ್ತು ಅಶುದ್ಧಿಯ ವಿರೋಧದ ಮೇಲೆ ನಿಂತ ಅಂತಸ್ತು (ಉದಾ: ಮೇಲಿನ ತುದಿಯ ಬ್ರಾಹ್ಮಣ ಪೂರ್ಣ ಶುದ್ಧ ಹಾಗೇ ಕೆಳಗೆ ಬಂದಂತೆ ಕೆಳತುದಿಯ ಪರಿಚಯ ಪೂರ್ಣ 'ಅಸ್ಪೃಶ್ಯ'- Sense of Pollution ಮೇಲೆ ಕರ್ಮ ಇದು ಆಧರಿಸಿದೆ. ೨. ಅನುವಂಶಿಕ ಶ್ರೇಷ್ಠತೆ. ೩. ವ್ಯಕ್ತಿಯ ಬದುಕಿಗೆ ಸಂಬಂಧಿಸಿದಂತೆ ಕರ್ಮಸಿದ್ಧಾಂತ. ೪. ಗೋತ್ರ ಪದ್ಧತಿ (ಸಂ) ಗುರುಪಾದ ಮರಿಗುದ್ದಿ; ೨೦೦೪; ಪುಟ ೧೨೭.

•••

# ಅಧ್ಯಾಯ ಆರು

# ಕಥನ ಸಾಹಿತ್ಯ ಮತ್ತು ಪ್ರಾದೇಶಿಕ ಭಾಷೆ

---

೬.೧. ಪ್ರಾದೇಶಿಕ ಭಾಷೆ ಮತ್ತು ಕಥಾ ನಿರೂಪಣೆಯ ಸ್ವರೂಪ

೬.೨. ಸಾಹಿತ್ಯ ಮತ್ತು ಪ್ರಾದೇಶಿಕ ಭಾಷೆಯ ವಿಶಿಷ್ಟತೆಗಳು

೬.೩. ಶ್ರೇಣೀಕೃತ ವ್ಯವಸ್ಥೆಯ ಭಾಷಿಕ ಅಭಿವ್ಯಕ್ತಿ

೬.೪. ಪ್ರದೇಶವನ್ನು ಪ್ರತಿನಿಧಿಸುವ ಇತರ ಭಾಷಿಕ ವಿಚಾರಗಳು

# ಅಧ್ಯಾಯ ಆರು

# ಕಥನ ಸಾಹಿತ್ಯ ಮತ್ತು ಪ್ರಾದೇಶಿಕ ಭಾಷೆ

ಪ್ರಾದೇಶಿಕತೆಯಾಗಲಿ ಅಥವಾ ಇನ್ನಾವುದೇ ವಿಷಯದ ಗ್ರಹಿಕೆ ಸಾಹಿತ್ಯದಲ್ಲಿ ಸಾಧ್ಯವಾಗುವುದು ಭಾಷೆಯಿಂದ. ಪ್ರಾದೇಶಿಕತೆ ಎಂಬುದು ಭೌಗೋಳಿಕತೆಯ ಜೊತೆಗೆ ಭಾಷಿಕವಾಗಿಯೂ ಮಹತ್ವ ಪಡೆಯುತ್ತದೆ. ಪ್ರಾದೇಶಿಕವಾಗಿ ಯಾವೆಲ್ಲ ಸಂವೇದನೆಗಳನ್ನು ತಿಳಿಯಲು ಸಾಧ್ಯವೋ ಅವುಗಳಿಗೆ ಭಾಷೆಯೆ ಪ್ರಮುಖ ಮಾಧ್ಯಮ. ಪ್ರದೇಶ ಪ್ರದೇಶಗಳ ನಡುವಿನ ಅಂತರ ಭಾಷಿಕ ವ್ಯತ್ಯಾಸಗಳಿಂದ ಗ್ರಹಿಕೆಗೆ ಬರುವುದು ಸಾಹಿತ್ಯದ ಆಚೆಗೂ ಸಾಧ್ಯವಾಗುವಂತಹ ಸಂಗತಿ. ಸಾಹಿತ್ಯ ಕೃತಿಯಲ್ಲಿ ಆಯಾ ಪ್ರದೇಶದ ಪ್ರಾದೇಶಿಕ ಭಾಷೆ ಇದ್ದಾಗಲೆ ಅಲ್ಲಿನ ಪ್ರಾದೇಶಿಕತೆ ತಿಳಿದು ಬರುತ್ತದೆ ಎಂದು ಹೇಳಲಾಗದು. ಕೃತಿಕಾರರು ತಮ್ಮ ಪ್ರದೇಶದ ವಿಶಿಷ್ಟ ಭಾಷೆಯನ್ನು ಬಳಸದೆ ಪಠ್ಯಭಾಷೆಯನ್ನು ಬಳಸಿಯೂ ಸಹ ಪ್ರಾದೇಶಿಕತೆಯನ್ನು ಸಾಹಿತ್ಯದಲ್ಲಿ ರೂಪಿಸುತ್ತಾರೆ. ಶಿಷ್ಟ ಭಾಷೆಯ ಬಳಕೆಯೇ ಸಾಹಿತ್ಯಿಕ ರಚನೆಯಲ್ಲಿರಬೇಕೆಂಬುದು ಮುಖ್ಯವಾಗಿ ಇದರಾಚೆಗಿನ ಉಪಭಾಷೆ, ಆಡುಭಾಷೆಯ ನೆಲೆಯಲ್ಲಿರುವ ಸಾಹಿತ್ಯಿಕ ಕೃತಿಗಳು ಮುಖ್ಯವಲ್ಲವೆಂಬುದು ಸೂಕ್ತಕ್ರಮವಲ್ಲ. ಅನ್ಯಭಾಷೆಯ ಆಡಳಿತದಲ್ಲಿ ಹೈದರಾಬಾದ್ ಕರ್ನಾಟಕದ ಭಾಷೆ ಸಂಕರಗೊಂಡಿತು. ಉರ್ದುವಿನ ಪ್ರಭಾವ ಮಾತ್ರವಲ್ಲದೆ ಈ ಪ್ರದೇಶ ತೆಲುಗು ಹಾಗೂ ಮರಾಠಿ ಭಾಷೆಗಳ ಪ್ರಭಾವಕ್ಕೂ ಒಳಗಾಗಿರುವುದು ಪ್ರದೇಶದ ಒಳಗೆ ಪ್ರಾದೇಶಿಕ ಭಿನ್ನತೆಗಳನ್ನು ರೂಪಿಸಿರುವುದು ಕಂಡು ಬರುತ್ತದೆ. ಹೈದರಾಬಾದ್ ಕರ್ನಾಟಕದ ಭಾಷೆ ಎಂದರೆ ಇದೆ ಎಂದು ಒಂದು ಚಿತ್ರಣವನ್ನು ಕೊಡಲಾಗದು. ವಿಭಿನ್ನ ರೀತಿಯ ಭಾಷೆಯ ವೈವಿಧ್ಯತೆಗಳೆಲ್ಲವೂ ಹೈದರಾಬಾದ್ ಕರ್ನಾಟಕದ ಭಾಷಿಕ ಸ್ವರೂಪವನ್ನು ತಿಳಿಸುತ್ತವೆ.

ಹೈದರಾಬಾದ್ ಕರ್ನಾಟಕದ ವೈವಿಧ್ಯಮಯ ಭಾಷೆಯನ್ನು ಸಾಹಿತ್ಯಿಕವಾಗಿ ಮುನ್ನೆಲೆಗೆ ತರುವುದು 'ಶಿಷ್ಟ' ಭಾಷೆಯ ಸಾಹಿತ್ಯಿಕ ರಚನೆಯನ್ನು ಬದಲಾಯಿಸುವುದೇ ಆಗಿದೆ. ತನ್ನ ಪ್ರದೇಶದ ಭಾಷೆಯನ್ನು ತರಲೇಬೇಕೆಂಬ ಒತ್ತಾಯ ಅಥವಾ ಹಿತಾಸಕ್ತಿಗಳಿಲ್ಲದೆಯೂ ಇಲ್ಲಿನ ಬರಹಗಾರರು ಈ ಪ್ರದೇಶದ ಭಾಷೆಯನ್ನು ಸಾಹಿತ್ಯಕ್ಕೆ ತಂದಿದ್ದಾರೆ. ಮುನ್ನೆಲೆಗೆ ಬರಲೇಬೇಕಾದ ಕೆಲ ಸಮುದಾಯಗಳನ್ನು ಅವುಗಳ

ಭಾಷೆಯ ಮೂಲಕವೇ ಚಿತ್ರಿಸುವ ಕಥನ ಸಾಹಿತ್ಯ ವಿಮರ್ಶೆಗೆ ಒಳಗಾಗಿದೆ. ಸಾಹಿತ್ಯ ಕೃತಿಯ ಸೃಜನಶೀಲತೆಯ ಮಾನದಂಡವಾಗಿ ಪ್ರಾದೇಶಿಕ ಭಾಷೆಯನ್ನು ಗುರುತಿಸಿರುವುದಲ್ಲದೆ ಅದು ಕೃತಿಯಲ್ಲಿ ಹೀಗೆಯೇ ಬರಬೇಕೆಂಬ ಪಾರಂಪರಿಕ ಯೋಚನೆಗಳು ಈ ರೀತಿಯ ವಿಮರ್ಶೆಗೆ ಕಾರಣವಾಗುತ್ತವೆ. ಸಾರ್ವತ್ರಿಕ ಸಂವಹನಕ್ಕೆ ದಕ್ಕುವ 'ಶಿಷ್ಟ' ಭಾಷೆಯನ್ನೇ ಉಳಿಸಿಕೊಳ್ಳುವ ಪ್ರೇರಣೆಯನ್ನು ಇಂತಹ ವಿಮರ್ಶೆಗಳು ನೀಡುತ್ತವೆ. ಇಂತಹ ಎಲ್ಲ ಹೇರಿಕೆಗಳನ್ನು ಮೀರಿ ಹೈದರಾಬಾದ್ ಕರ್ನಾಟಕದ ಕಥನ ಸಾಹಿತ್ಯದ ಭಾಷೆ ಅನನ್ಯತೆಯನ್ನು ಕಾಯ್ದುಕೊಂಡಿದೆ. "ಇಪ್ಪತ್ತೊಂದನೇ ಶತಮಾನದ ಆರಂಭದ ಹೊತ್ತಿಗೆ ಸಾಹಿತ್ಯ ಕೃತಿಗಳು ಕೇವಲ ಭಾಷಿಕ ನಿರೂಪಣೆಗಳು; ಅವುಗಳನ್ನು ಇತರ ಸಂಕಥನಗಳ ರೀತಿಯಲ್ಲೇ ಪರಿಶೀಲಿಸಬೇಕು; ಅವುಗಳಿಗೆ ನಾವು ಕಲ್ಪಿಸುವ ಕಾಲದೇಶಾತೀತವಾದ ಆಯಾಮಗಳು, ಆಯಾ ಹೊತ್ತಿನ ಸಾಂಸ್ಕೃತಿಕ ಸಂದರ್ಭಗಳ ಆರೋಪಣೆಯೇ ಹೊರತು ಆ ಕೃತಿಗಳಲ್ಲೇ ಅಂತಸ್ಥವಾಗಿರುವ ಗುಣಲಕ್ಷಣವಲ್ಲ. ಈ ತಾತ್ವಿಕತೆ ಸಾಹಿತ್ಯ ಕೃತಿಗಳಿಗೆ ಒದಗಿದ್ದು ಈವರೆಗಿನ ನಮ್ಮ ಎಷ್ಟೋ ಚರ್ಚೆಗಳನ್ನು ನಿರರ್ಥಕಗೊಳಿಸಿತ್ತು. ಏಕೆಂದರೆ ಒಂದು ಭಾಷಿಕ ನಿರೂಪಣೆಗೆ ಅಗತ್ಯವಾದ ಎಲ್ಲ ಪರಿಕಲ್ಪನಾತ್ಮಕ ನೆಲೆಗಳು ಸಾಂಸ್ಕೃತಿಕವಾಗಿ ದತ್ತವಾಗುತ್ತವೆಯೇ ಹೊರತು ಕೃತಿಕಾರನ ಅನನ್ಯತೆ ಎಂಬುದು ಒಂದು ಮುಖ್ಯ ಸಂಗತಿಯಲ್ಲ. ಈ ಗ್ರಹಿಕೆಯಿಂದ ಸಾಹಿತ್ಯಿಕವಾಗಿ ಏನು ಪರಿಣಾಮವಾಯಿತು ಅದು ನಮಗಿಲ್ಲಿ ಮುಖ್ಯವಲ್ಲ. ಆದರೆ ಭಾಷೆಯಲ್ಲಿ ಒಂದು ಕಾಲಘಟ್ಟದಲ್ಲಿ ತಳೆಯುವ ಲಿಖಿತ ನಿರೂಪಣೆಗಳ ವ್ಯಾಖ್ಯೆ ಮಾತ್ರ ಬದಲಾಗತೊಡಗಿತ್ತು. ಈ ವ್ಯಾಖ್ಯಾನ ಪಲ್ಲಟ ಸಾಹಿತ್ಯ ಕೃತಿಗಳೆಂದು ನಾವು ತಿಳಿದಿದ್ದ ಬರವಣಿಗೆಗಳನ್ನು ನೋಡುವ ವಿಧಾನದಲ್ಲಿ ಬದಲಾವಣೆಗಳನ್ನು ಉಂಟುಮಾಡಿತು.

ಏಳನೆಯ ದಶಕದಲ್ಲಿ ಕರ್ನಾಟಕದಲ್ಲಿ ನಡೆದ ಕೆಲವು ಸಾಮಾಜಿಕ ಪರಿವರ್ತನೆಗಳ ಪರಿಣಾಮವಾಗಿ ಆವರೆಗೆ ಸಮಾಜ ಒಪ್ಪಿದ ಸಾಂಸ್ಕೃತಿಕ ನಾಯಕತ್ವದ ಕಲ್ಪನೆ ಬದಲಾಯಿತು. ನಾಯಕರು ಒಂದು ಕಾಲದ ಸಮಾಜದ ಅಪೇಕ್ಷೆಗಳನ್ನು, ಬಯಕೆಗಳನ್ನು ಪ್ರತಿನಿಧಿಸುತ್ತಾರೆ. ಆದರೆ ಬದಲಾದ ಸಾಮಾಜಿಕ ಪರಿಸ್ಥಿತಿಯಲ್ಲಿ ಕರ್ನಾಟಕವು ತನ್ನ ಸಾಮಾಜಿಕ ರಚನೆಯಲ್ಲಿ ಮುಚ್ಚಿ ಹೋಗಿದ್ದ ಬಿರುಕುಗಳನ್ನು ಹೊರತೆಗೆದು ತೋರತೊಡಗಿತ್ತು. ಹಿಂದುಳಿದ ವರ್ಗಗಳ ಮತ್ತು ದಲಿತ ಸಮುದಾಯದ ಅಸ್ಮಿತೆಯ ಪ್ರಶ್ನೆಗಳು ಮುಂದೆ ಬಂದವು. ಇವೆಲ್ಲವೂ ಮೇಲೆ ಹೇಳಿದಂತಹ ನಾಯಕರನ್ನು ನಿರಾಕರಿಸುತ್ತವೆ. ತಮ್ಮ ನಾಯಕತ್ವವನ್ನು ತಾವೇ ಕಟ್ಟಿಕೊಳ್ಳಲು ಬಯಸುತ್ತವೆ. ದಲಿತ ಬಂಡಾಯ ಚಳುವಳಿಗಳ ಸಂದರ್ಭದಲ್ಲಿ ಕನ್ನಡದಲ್ಲಿ ಬರೆಯುವವರ ಸಾಹಿತ್ಯ ಸೃಷ್ಟಿ ಮಾಡುವವರ ಸಂಖ್ಯೆ ಹೆಚ್ಚಾಯಿತೆಂದು ಎಲ್ಲರೂ ಗುರುತಿಸುತ್ತಾರೆ. ಈ ಬದಲಾವಣೆಯನ್ನು ಧನಾತ್ಮಕವಾಗಿ ನೋಡುವವರು ತಲೆಮಾರುಗಳಿಂದ ಧ್ವನಿ ಕಳೆದುಕೊಂಡವರು ಈಗ ಮಾತಾಡುತ್ತಿದ್ದಾರೆ ಎಂದು ವಿವರಿಸುತ್ತಾರೆ. ಋಣಾತ್ಮಕವಾಗಿ ನೋಡುವವರು, ಓದುವವರಿಗಿಂತ ಬರೆಯುವವರೇ ಹೆಚ್ಚಾದರು. ಇದರಿಂದ ಬರೆದುದನ್ನು ಓದುವವರು ಯಾರು ಎಂದು ಗೇಲಿ ಮಾಡಿದರು. ಎರಡು ಪ್ರತಿಕ್ರಿಯೆಗಳೂ ಭಾಷಿಕ ನೆಲೆಯಲ್ಲೇ ಇವೆ. ಕೇಳಿಸಿಕೊಳ್ಳುವವರು ಮಾತನಾಡಲು ಬಯಸುವುದು, ತೊಡಗುವುದು ಇವೆಲ್ಲವೂ ಸಾಧ್ಯವಾಗುವುದು, ನಾಯಕರನ್ನು ಅಥವಾ

ತಮ್ಮ ಪ್ರತಿನಿಧಿಯಾಗಿ ಮಾತನಾಡುವವರನ್ನು ನಿರಾಕರಿಸಿದಾಗ ಮಾತ್ರ. ಕನ್ನಡ ಸಾಹಿತ್ಯ ವಲಯದಲ್ಲಿ ಈಗ ಗ್ರಹಿಕೆಯ ಭಾಷಾ ಕೌಶಲಗಳಿಗಿಂತ ಬಳಕೆಯ ಭಾಷಾ ಕೌಶಲಗಳು ಮುಖ್ಯವಾದವು" (ಕೆ.ವಿ. ನಾರಾಯಣ; ೨೦೦೭; ಪುಟ : ೩೧೧-೧೧೨).

ಸಾಹಿತ್ಯದಲ್ಲಿ ಭಾಷೆಯ ಬಳಕೆಗೆ ಸಂಬಂಧಿಸಿದಂತೆ ಈ ಹಿಂದೆ ಇದ್ದ ಸಿದ್ಧ ಮಾದರಿಯ ಒಪ್ಪಿತ ಕ್ರಮಕ್ಕೂ ಇಂದಿನ ಸಿದ್ಧ ಮಾದರಿಯನ್ನು ಮೀರುವ ಕ್ರಮಕ್ಕೂ ವ್ಯತ್ಯಾಸವಿದೆ. ಸಾಮಾಜಿಕವಾಗಿ ಆಗಿದ್ದ ಬದಲಾವಣೆಯಲ್ಲಿ ಮುಖ್ಯ ನೆಲೆಯಿಂದ ಹೊರಗುಳಿಸಲಾಗಿದ್ದ ಸಮುದಾಯ, ಸಂಸ್ಕೃತಿಯು ತನ್ನ ಅಸ್ತಿತ್ವಕ್ಕಾಗಿ ಮುನ್ನೆಲೆಯನ್ನು ಸಾಧಿಸಬಯಸಿದ್ದು ಸಾಹಿತ್ಯಿಕವಾಗಿ ಪ್ರಾಧಾನ್ಯತೆಯನ್ನು ಪಡೆಯಿತು.

ದಲಿತ ಬಂಡಾಯ ಸಾಹಿತ್ಯ ಮುನ್ನೆಲೆಗೆ ತರಬಯಸಿದ್ದು ಇದುವರೆಗೂ ಸಾಹಿತ್ಯಿಕ ಬರವಣಿಗೆಯ ಮಾನ್ಯತೆಯನ್ನು ಪಡೆಯದಿದ್ದ ಸಮುದಾಯ ಹಾಗೂ ಅದರ ಭಾಷಿಕ ಜಗತ್ತನ್ನು. ಆದರೆ ಹೀಗೆ ಪ್ರಾಧಾನ್ಯತೆಯನ್ನು ಪಡೆಯದಿದ್ದ ಸಮುದಾಯದ ಭಾಷೆಯನ್ನು ಮುನ್ನೆಲೆಗೆ ತರುತ್ತಿರುವುದರ ಹಿಂದೆ ಪ್ರಾದೇಶಿಕ ಅನನ್ಯತೆ ಇದೆ. ದಲಿತ ಬಂಡಾಯ ಸಾಹಿತಿಗಳ ಬರವಣಿಗೆಯಲ್ಲಿ ಮುನ್ನೆಲೆಗೆ ಬಂದ ತಳಸಮುದಾಯದ ಭಾಷೆ ಏಕರೂಪದ್ದಲ್ಲ. ದೇವನೂರರ 'ಕುಸುಮಬಾಲೆ' ಹಾಗೂ ಅವರ ಇತರ ಕತೆಗಳಲ್ಲಿನ ಭಾಷೆಗೂ ಚೆನ್ನಣ್ಣವಾಲೀಕರರು ತೆರೆದಿಡುವ ತಳಸಮುದಾಯದ ಭಾಷೆಗೂ ಪ್ರಾದೇಶಿಕ ಭಿನ್ನತೆಯಿದೆ. ಹೈದರಾಬಾದ್ ಕರ್ನಾಟಕದ ಕಥನ ಸಾಹಿತ್ಯ ಪ್ರಾದೇಶಿಕ ಹಾಗೂ ಸಮುದಾಯಿಕ ಅನನ್ಯತೆಯನ್ನು ಅದರದ್ದೇ ಆದ ವಿಶಿಷ್ಟ ಭಾಷೆಯಲ್ಲಿ ಮುನ್ನೆಲೆಗೆ ತರುತ್ತಿದೆ.

### ೬.೧. ಪ್ರಾದೇಶಿಕ ಭಾಷೆ ಮತ್ತು ಕಥಾ ನಿರೂಪಣೆಯ ಸ್ವರೂಪ

ಹೈದರಾಬಾದ್ ಕರ್ನಾಟಕದಲ್ಲಿ ನಿಜಾಂ ಆಳ್ವಿಕೆ ಹಾಗೂ ಉರ್ದು ಭಾಷೆಯ ಆಗಮನ ಪರಸ್ಪರ ಪೂರಕ ಸಂಬಂಧವನ್ನು ಹೊಂದಿವೆ. ಇವೆರಡರ ಆಗಮನ ರಾಜಕೀಯವಾಗಿ ಮಾತ್ರವಲ್ಲದೆ ಭಾಷಿಕವಾಗಿಯೂ ಮಹತ್ತರ ಇತಿಹಾಸವನ್ನೇ ಸೃಷ್ಟಿಸಿದೆ. 'ಭಾಷಾ ರಾಜಕಾರಣ'ವೆಂಬುದು ಪ್ರಭುತ್ವ ಜನ್ಯವಾದ ಪ್ರತಿಯೊಂದು ಭಾಷೆಗೂ ಅನ್ವಯಿಸುತ್ತದೆ. ಪ್ರಭುತ್ವ ಜನ್ಯವಾದ ಭಾಷೆ ಜಾತಿ ಕೇಂದ್ರಿತವಾಗಿ ಉಳಿಯುವುದಿಲ್ಲ. ಪ್ರಭುತ್ವದ ಕಾರಣಕ್ಕಾಗಿಯೇ ಈ ನೆಲದಲ್ಲಿ ಕಂಡುಬಂದ ಉರ್ದು ಭಾಷೆಯ ಉಗಮವು ಆಡಳಿತಾತ್ಮಕ ಪ್ರಾಧಾನ್ಯತೆಯನ್ನು ಪಡೆಯಿತು. ಅಂತೆಯೇ ಅದು ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಬದುಕಿನಲ್ಲಿ ಪ್ರಾಧಾನ್ಯತೆ ಪಡೆದದ್ದು ಪ್ರಭುತ್ವದ ಭಾಷೆಯಾದ ಕಾರಣದಿಂದಲೇ ಹೊರತು ಜಾತಿ ಕೇಂದ್ರಿತ ಭಾಷೆಯಾಗಿ ಅಲ್ಲ. ಇದರ ಪರಿಣಾಮ ಹೈದರಾಬಾದ್ ಕರ್ನಾಟಕದಲ್ಲಿ ಉರ್ದು ಮಿಶ್ರಿತ ಕನ್ನಡ ಉಪಭಾಷೆಯ ವಾತಾವರಣವೊಂದು ರೂಪಗೊಂಡಿತು. ಬೇರೆ ಬೇರೆ ಕಾರಣಗಳ ಹಿನ್ನೆಲೆಯಲ್ಲಿ ಉರ್ದು ಭಾಷೆಯನ್ನು ಮಾತೃಭಾಷೆಯಂತೆ ಬಳಸುವವರು, ಅದನ್ನು ಕಲಿಯದೇ ಸರಾಗವಾಗಿ ಬಳಸುವವರು, ಅದನ್ನು ಕಲಿಯಲೇಬೇಕೆಂಬ ಒತ್ತಡಕ್ಕೆ ಒಳಗಾದವರು, ಕನ್ನಡ ಭಾಷೆಗೆ ಒಗ್ಗಿ ಹೋದ ಉರ್ದುವನ್ನು ಆಡುಮಾತಿನಲ್ಲಿ ಬಳಸುವವರು ಹೀಗೆ ಅನೇಕ ರೀತಿಯಲ್ಲಿ ಉರ್ದು ಭಾಷೆ ರೂಢಿಯಾಗುತ್ತ ಸಾಗಿದ್ದನ್ನು

ಕಥನ ಸಾಹಿತ್ಯ ತಿಳಿಸುತ್ತದೆ. ಇಡೀ ಪ್ರದೇಶದಲ್ಲಿ ಉರ್ದು ಹಾಗೂ ಉರ್ದು ಮಿಶ್ರಿತ ಕನ್ನಡ ಭಾಷೆಯೇ ವ್ಯಾಪಿಸಿದೆ ಎಂದು ಹೇಳಿದರೆ ಈ ಪ್ರದೇಶದ ಭಾಷಾ ವೈವಿಧ್ಯತೆಯನ್ನು ಅಲ್ಲಗಳೆದಂತಾಗುತ್ತದೆ. ಉರ್ದು ಭಾಷೆಯನ್ನು ಹೊರತುಪಡಿಸಿ ತೆಲುಗು, ಮರಾಠಿ ಭಾಷೆಗಳ ಪ್ರಭಾವವೂ ಈ ಪ್ರದೇಶದ ಕನ್ನಡ ಭಾಷೆಯ ಮೇಲೆ ಉಂಟಾಗಿದೆ. ವಸಾಹತುಶಾಹಿ ಹಾಗೂ ನವವಸಾಹತುಶಾಹಿ ಸಂದರ್ಭದ ಭಾಷಾರಾಜಕಾರಣ ಇಂಗ್ಲೀಷ್ ಭಾಷೆಯನ್ನು ರೂಢಿಗೆ ತರುತ್ತಿರುವುದನ್ನು ಇಲ್ಲಿನ ಸಾಹಿತ್ಯಿಕ ಬರವಣಿಗೆ ತಿಳಿಸುತ್ತದೆ. ಜನಬದುಕಿನ ಸಂವೇದನೆಯ ಅಭಿವ್ಯಕ್ತಿಗೆ ಅನ್ಯಭಾಷೆಯ ಪ್ರಭಾವಕ್ಕೊಳಗಾದ ಕನ್ನಡವನ್ನು, ವಿಶಿಷ್ಟ ಸಮುದಾಯಗಳ ಆಡುಮಾತನ್ನು ಹೀಗೆ ಪ್ರದೇಶದೊಳಗಿನ ಭಾಷಿಕ ವೈವಿಧ್ಯತೆಗಳೆಲ್ಲವನ್ನೂ ಇಲ್ಲಿನ ಕಥನ ಸಾಹಿತ್ಯ ತೆರೆದಿಡುತ್ತದೆ. ಆದರೆ ಶಿಷ್ಟ ಭಾಷೆಯ ಬರವಣಿಗೆಯ ಸಾಹಿತ್ಯಿಕ ಶೈಲಿಯನ್ನು ಮೀರಿ ಬೆಳೆಯುವ ಇಲ್ಲಿನ ಕಥೆಗಾರರ ಸೃಜನಶೀಲತೆ ಪರಸ್ಪರ ಭಿನ್ನವಾಗಿದೆ.

ಹೈದರಾಬಾದ್ ಕರ್ನಾಟಕದ ಆರಂಭಘಟ್ಟದ ಕಥೆಗಾರರಾದ ಶಾಂತರಸ, ಜಯತೀರ್ಥ ರಾಜಪುರೋಹಿತರ ಕಥನ ಸಾಹಿತ್ಯದಲ್ಲಿ ಉರ್ದು ಭಾಷೆಯ ನೇರವಾದ ಬಳಕೆ ಹಾಗೂ ಕಥನದ ಭಾಷಿಕ ಅಭಿವ್ಯಕ್ತಿ ಕ್ರಮದ ವೈವಿಧ್ಯತೆಗಳೆಲ್ಲವೂ ತಿಳಿದುಬರುತ್ತವೆ.

ರಜಾಕಾರರ ಹಾವಳಿಯ ಸಂದರ್ಭದ ಕೆಲ ಸನ್ನಿವೇಶಗಳನ್ನು ಕಟ್ಟಿಕೊಡುವ ಶಾಂತರಸರ ಕತೆಗಳಲ್ಲಿ ಕನ್ನಡ ಭಾಷೆಯೊಂದಿಗೆ ಉರ್ದು ಭಾಷೆಯ ನಿರೂಪಣೆಯೂ ಕಂಡುಬರುತ್ತದೆ. ಇವರ 'ಕಿಡಿ' (ಶಾಂತರಸ) ಕತೆಯಲ್ಲಿ ಬುಡ್ಡಪ್ಪ ಹಾಗೂ ಬುದ್ಧಿವಂತಪ್ಪನ ನಡುವೆ ಜಗಳವಾಗಿರುತ್ತದೆ. ಈ ಜಗಳವನ್ನು ಹಿನ್ನೆಲೆಯಾಗಿಟ್ಟುಕೊಂಡು ಬುದ್ಧಿವಂತಪ್ಪನೊಂದಿಗೆ ಅನೈತಿಕ ಸಂಬಂಧ ಹೊಂದಿದ್ದ ಸೂಗಮ್ಮನನ್ನು ತಾನು ಒಲಿಸಿಕೊಳ್ಳಬೇಕೆಂದು ಪರಮಯ್ಯ ಯೋಚಿಸುತ್ತಾನೆ. ಈ ಸನ್ನಿವೇಶವನ್ನು ತನ್ನ ಹಿಡಿತ ತಪ್ಪುತ್ತಿರುವ ಬುದ್ಧಿವಂತಪ್ಪನನ್ನು ಪುನಃ ತನ್ನಂತೆ ಮಾಡಿಕೊಳ್ಳಲು ಸೂಗಮ್ಮ ಪ್ರಯತ್ನಿಸುತ್ತಾಳೆ. ಹೀಗೆ ಕಂಡು ಬಂದ ಜಗಳವನ್ನು ಅಮೀನ ಸಾಹೇಬರಲ್ಲಿ ವರದಿ ಮಾಡಲಾಗುತ್ತದೆ.

"ಬುಡ್ಡ ಅಮೀನ ಸಾಹೇಬರ ಕಡೆ ಮುಖ ಮಾಡಿ",

"ಬೀರಯ್ ಲಿಂಗನ ಆಣೆ ಮಾಡಿ ಏಳ್ತೀನಿ ಸಾಬ್ರೇ, ಒಲ್ದಾಗ ಓಗ್ ಬ್ಯಾಡಾ ಅಂದೆ. ಅಪ್ಪಕ್ಕಾ, ಕುರುಬ್ ಸೂಳೇಮಗ್ನೆ' ಅಂದು ಚೆಡಾವಿಲೆ ವೊಡ್ದ್ನ, ಆಮ್ಯಾಲೆ ಕಲ್ ತಗಂಡು ತೆಲಿಗೆ ಒಡ್ದು ನೂಕಿ ಓಗಿಬುಟ್ಟ' ಎಂದು ನೆಲಮುಟ್ಟಿ ನಮಸ್ಕಾರ ಮಾಡಿ ಕೈ ಜೋಡಿಸಿ ನಿಂತ.

"ಏ ಬದ್ಮಾಷ್ ಜೋ ಬೋಲ್ತಾಹೈ ಉಸ್ಕೆಲಿಯೆ ಗವಾ ಹೋನಾನಾ. ನಹಿತೋ ಕೈಸೆ ಮಾನ್‌ನಾ? ಅಮೀನ ಸಾಹೇಬ್ ಹೇಳಿದ".

"ಸಾಹೇಬ್ರು ಸಾಕ್ಷಿ ಬೇಕಂತಾರ ಬುಡ್ಡಪ್ಪಾ. ನೀನ್ ಹೊಡಿಸೆಂಡಂಗ ಯಾರಾದ್ರೂ ಸಾಕ್ಷಿ ಹೇಳವ್ರು ಆರೇನು?" ಗೌಡ ಕೇಳಿದ.

‘ಸಾಕ್ಷಿ ಎಲ್ಲಿಂದ ತರ್ಲಿ ದೇವ್ರು. ಅವ್ನು ಒಡ್ಡದ್ದು ಮಾತ್ರ ಕರೆ. ನಿಮ್ಮಿಂದ ಸುಳ್ಳೇಳಿ ನಾ ಬದಕಂಗೀನೇನು?’ ಬುಡ್ಡಪ್ಪ ಹೇಳಿದ.

ಅಮೀನ್ ಸಾಹೇಬರಿಗೆ ಕನ್ನಡ ತಿಳಿಯುತ್ತಿತ್ತು. ಆದರೆ ಅವರು ಉರ್ದು ಭಾಷೆಯಲ್ಲಿಯೇ ಮಾತಾಡುತ್ತಿದ್ದರು. ಆದರೆ ಕೆಲ ಜನಸಾಮಾನ್ಯರಿಗೆ ಅವರ ಮಾತು ಅರ್ಥವಾಗುತ್ತಿರಲಿಲ್ಲ. ಅರ್ಥ ಮಾಡಿಕೊಂಡರೂ ಮಾತನಾಡಲಾಗದಂತವರಿದ್ದರು. ಇಂತಹ ಸಂದರ್ಭದಲ್ಲಿ ಯಾರಾದರೂ ಮಧ್ಯಸ್ಥಿಕೆ ವಹಿಸಿ ಅಮೀನ ಸಾಹೇಬ ಹೇಳುತ್ತಿರುವುದನ್ನು ಕನ್ನಡದಲ್ಲಿ ಹೇಳುತ್ತಿದ್ದರು. ಇಲ್ಲಿ ಗೌಡ ಅಮೀನ ಸಾಬ ಹೇಳಿದ್ದನ್ನು ಆಡುಮಾತಲ್ಲಿ ಬುಡ್ಡಪ್ಪನಿಗೆ ಕೇಳುತ್ತಿದ್ದ. ಈಗಾಗಲೇ ಬುದ್ಧಿವಂತಪ್ಪನ ತಂದೆಯಿಂದ ಹಣ ಪಡೆದಿದ್ದ ಅಮೀನ ಸಾಹೇಬನಿಗೆ ಬುಡ್ಡಪ್ಪನೇ ತನ್ನ ಕೈಯಾರ ತಲೆ ಒಡೆದುಕೊಂಡಿದ್ದು ತಿಳಿದು ಆತನಿಗೆ ಶಿಕ್ಷಿಸುತ್ತಾನೆ. ಪೋಲೀಸ್‌ಗೌಡನ ವಿರೋಧವನ್ನು ತಳ್ಳಿ ಹಾಕುತ್ತ, “ಕ್ಯಾ ಪಟೇಲ್ ತೂಭಿ ಐಸಾಹಿ ಬೋಲ್ತಾ ಹೈ. ಕ್ಯಾಹುವಾ ಖೇತ್ಮೇ ಗಯೇ ತೋ? ಓ ಕ್ಯಾ ಚೋರ್ ಹೈಕ್ಯಾ? ಪೈರ್‌ಕು ಖರಾಬ್‌ಕಿಯಾಕಾ? ಎ ಬುಡ್ಯಾ ಗಾಲಿಯ್ಯಾಂ ದಿಯಾತೋ ಉಸ್ಕು ಗುಸ್ಸಾ ಆಕೆ ಮಾರಾ, ಠೀಕ್ ಹೈ, ಓಹ್ ಗುನಾಹ್ ಹೈ. ಲೈಕಿನ್ ಏ ಹರಾಮ್ಜಾದಾ, ಖುದ್ ಮಾರ್‌ಲೇಕೆ ಝೂಟ್ ಬೋಲಾನಾ. ಏಹ್ ಬಡಾ ಗುನಾಹ್ ಹೈ, ಇಸ್ಕು ಸಜಾಹೋನಾ ಚಾಹಿಯೆ. ಕ್ಯಂವ್‌ಬೇ ಹರಾಮ್ಜಾದಾ?” ಅಮೀನಸಾಹೇಬ ಮತ್ತೆ ಬುಡ್ಡಪ್ಪನಿಗೆ ಎರಡೇಟು ಬಾರಿಸಿದ. ಬುಡ್ಡಪ್ಪ ಹೊಯ್ಕೊಂಡ (ಶಾಂತರಸ; ೧೯೬೭; ಪುಟ : ೪೩). ಶಾಂತರಸರು ಉರ್ದು ಮಾತ್ರವಲ್ಲ ಕಥನದ ನಿರೂಪಣೆಯಲ್ಲಿ ಶಿಷ್ಟ ಭಾಷೆಯನ್ನು ಇನ್ನು ಕೆಲವೇಳೆ ಇಲ್ಲಿನ ಆಡುಮಾತಿನ ಕನ್ನಡವನ್ನು ಬಳಸುತ್ತಾರೆ. ಜಯತೀರ್ಥ ರಾಜಪುರೋಹಿತರು ಉರ್ದು ಭಾಷೆಯನ್ನು ಮಾತನಾಡಲು ಕಲಿಯಬೇಕೆಂದು ಅದಾಗ ತಾನೆ ಮುಸ್ಲಿಂ ಜನರಾಗಿ ಮತಾಂತರ ಹೊಂದಿದ್ದ ಕೇರಿಯ ಯುವಕರು ಬಯಸುವುದನ್ನು ‘ಹಾಲುಜೇನು’ ಕಾದಂಬರಿಯಲ್ಲಿ ತಿಳಿಸುತ್ತಾರೆ. ಉರ್ದು ಮಾತನಾಡುವ ಮಾದರ ನಿಂಗ, ದುರಗ, ಮತಾಂತರದ ನಂತರ ನಸೀರ, ದಸ್ತೀ (ದಸ್ತಗೀರ) ಆಗಿ ನಾಮಾಂತರಗೊಂಡಿದ್ದರು. “....ಸಾಬರಾದ ಹುಡುಗರು ಹುರುಪಿನಿಂದ ಉರ್ದು ಮಾತಾಡಲು ಹೋಗಿ ನಗೆಗೀಡಾಗುತ್ತಿದ್ದರು”.

“ಅಬೆ ನಸರಿಸಾ ಗಡಾನ್.... ಅಲ್ಲ ಜಲ್ದೀ .....ಜಾನಾ....” ಎಂದು ಒಬ್ಬನೆಂದರೆ ಇನ್ನೊಬ್ಬ...

“ಹೌಬಾ.... ಕಲ್ ಫಜರ್‌ಮೆ ಗೌಡರು... ಕುಂಟಿ ಕಟ್ಟೊಂ ಕರ್ರೊ ಬೋಲ್ಯಾಕತೆ?” ಎನ್ನುವ.

“ಅರೇ ಓ ಕ್ಯಾ ಭೊಲ್ ತಾ..... ನಮ್ ಬಳಗದೋರೆಲ್ಲಾ ಹೋಗ್ತಾ ಏಕ ಮಾರ ದೋ ತುಕಡಾ ಕರ್ತಾ.... ಪೋಷಿಮಾಮ ಬೋಲ್ತಾ ಹಮರಾ ಸರಕಾರ ಹೈ ಕರಕೊ, ಕರಕೊ ಮುಂದೆ ಹೊಳೆಯದೆ ತಬ್ಬಿಬ್ಬಾಗುವ ಇವರ ಒರಟು ಮಾತು ಕೇಳಿ ಇವರಲ್ಲಿಯೇ ಇದ್ದ ರಸೂಲ ನಗುವ. ದಸ್ತಿ ಸಿಟ್ಟಿಗೆದ್ದು ಅವನಿಗೆ ಬಯ್ಯುತ್ತ...” (ಜಯತೀರ್ಥ ರಾಜಪುರೋಹಿತ; ೧೯೬೭; ಪುಟ : ೭). ಮತಾಂತರ ಹೊಂದಿದ ಕೆಳವರ್ಗದವರು ಉರ್ದು ಮಾತಡಲು ಕಷ್ಟಪಡುತ್ತಿರುವುದು ಇಲ್ಲಿ ವಿಶಿಷ್ಟವಾಗಿ ಕಂಡು ಬರುತ್ತದೆ. ಆದರೆ ಶಿಕ್ಷಿತರಾದ, ಸರಕಾರಿ ಉದ್ಯೋಗದಲ್ಲಿದ್ದ ದ್ವೈಪಾಯನನ ಮಾವ ರಾಘವೇಂದ್ರರಾಯರು

ಉರ್ದುವನ್ನು ತನ್ನ ಮಾತೃಭಾಷೆಯಂತೆ ಬಳಸುತ್ತಿರುತ್ತಾರೆ. ತನ್ನ ಮಾವ ದೇವರ ಪೂಜೆಯನ್ನು ಉರ್ದುವಿನಲ್ಲಿ ಮಾಡುತ್ತಾನೆಂದು ಪೀರನಿಗೆ ದ್ವೈಪಾಯನ ತಿಳಿಸುತ್ತಾನೆ. ಅವರು ದೇವರ ಪೂಜೆಯ ಸಂದರ್ಭದಲ್ಲಿ ಹೆಂಡತಿಯೊಂದಿಗೆ ಮಾತನಾಡುತ್ತಾ, "ಹುಂ..... ಶಾರದಾ.... ಜಲ್ದಿ.......ಧೂಪಾರ್ತಿ ಕೊಡು..... ಸಾಡೇದಹಾಕ್ಕ ತನಖ್ಪಿಗೇ ದೂವಮ್‌ಸಾಬರ ತಷ್‌ರೀಫ್ ಅವರೀ ಆದs" (ಹತ್ತೂವರಿಗೆ ಪರಿಶೀಲನೆಗಾಗಿ ಡೆಪ್ಯುಟಿ ಕಲೆಕ್ಟರರ ಆಗಮನವಿದೆ) ಧೂಪಾರ್ತಿ ಮಂಗಳಾರ್ತಿಗಳ ಘಂಟೆಯ ಸಪ್ಪಳದ ಜೊತೆಗೆಯೇ ರಾಯರ ಕೂಗು ಕೇಳಿಸುತ್ತಲಿತ್ತು. "ಏ.... ಜಲ್ದಿ ನೈವೇದ್ಯ ಬರಲಿ.... "ವಂದ್ಯೇ ವಂದ್ಯಂ ಸದಾನಂದಂ ವಾಸುದೇವಂ...".

ಗಂಟೆಯ ಸಪ್ಪಳ ನಿಂತಿತು.... ರಾಯರು ಸಿಟ್ಟಿಗೆದ್ದರು ಹೆಂಡತಿಯ ಮೇಲೆ "ನಿನಗs ವಕ್ತದ ಲಿಹಾಜs ಇಲ್ಲಾ ನೋಡು (ನಿನಗೆ ವೇಳೆಯ ಕಲ್ಪನೆಯೇ ಇಲ್ಲ) ಹುಡುಗಿ ಊರಿಗೆ ಹೋಗೊ ಆಕಿ... ನಾನು ಕಚೇರಿಗೆ ಹೋಗೊವಾ... ಬರವಖ್ತ್ ನೇವೈದ್ಯ ಪೇಷ್ ಮಾಡು ಅಂತ ಹಜಾರ್ ಬಾರಿ ತಾಕೀದು ಮಾಡ್ದೆ ಇನ್ನೇನು ಸಖ್ತ ತದಾರುಕ ಮಾಡ್ಬೇಕಾಗ್ತದs" (ಸರಿಯಾದ ವೇಳೆಗೆ ನೈವೇದ್ಯ ತರಲು ಸಾವಿರ ಸಲ ಒತ್ತಾಯಿಸಿ ಹೇಳಿದೆ ಇನ್ನೇನು ಕಠಿಣ ಕ್ರಮ ತಗೋ ಬೇಕಾಗುತ್ತದೆ) (ಜಯತೀರ್ಥ ರಾಜಪುರೋಹಿತ; ೧೯೬೭; ಪುಟ : ೯೭).

ಮತಾಂತರ ಹೊಂದಿದ ಕೆಳವರ್ಗದವರು ಉರ್ದು ಮಾತನಾಡುವುದನ್ನು ಕಲಿಯಲು ಕಷ್ಟಪಡುವುದಕ್ಕೂ, ಬ್ರಾಹ್ಮಣ ವರ್ಗದ ರಾಘವೇಂದ್ರರಾಯರು ಸುಲಲಿತವಾಗಿ ಉರ್ದು ಮಾತನಾಡು ವುದಕ್ಕೂ ವ್ಯತ್ಯಾಸವಿದೆ. ಒಂದೇ ಪ್ರದೇಶದವರಾದರೂ ಉರ್ದು ಭಾಷೆಯನ್ನು ಮಾತನಾಡಲು ಅವರಿಗಿರುವ ಒತ್ತಡ ಹಿನ್ನೆಲೆಗಳು ಭಿನ್ನವಾಗಿವೆ. ಇಬ್ಬರೂ ತಮ್ಮ ಬದುಕಿನ ಅವಶ್ಯಕತೆಗೆ ಉರ್ದುವನ್ನು ನೆಚ್ಚಿಕೊಂಡು ಒಪ್ಪಿಕೊಂಡಿರುವುದು ಮಾತ್ರ ಒಂದೇ ಆಗಿದೆ.

ಕೆಲವು ವೇಳೆ ಅಮೀನ ಸಾಹೇಬರು ಮಾತನಾಡುವ ಉರ್ದುವನ್ನು ನೇರವಾಗಿ ಬಳಸುವುದು ಇವರ ಕಾದಂಬರಿಯಲ್ಲಿ ಕಂಡು ಬರುತ್ತದೆ. ರಾಜಪುರೋಹಿತರ ಇನ್ನೊಂದು ಕಾದಂಬರಿ 'ಸುಳಿಗಾಳಿ'. ಇದರಲ್ಲಿ ಶಿಕ್ಷಿತರಾದ ದೇವೇಂದ್ರ, ಆರಿಫ್ ಜಮರುದ್ ಬೇಗಂ ಇವರ ಸಂಭಾಷಣೆಯಲ್ಲಿ ಶಿಷ್ಟರೂಪವೇ ಕಂಡುಬರುತ್ತದೆ. ಆಗಾಗ ಜಮರುದ್ ಬೇಗಂ, ಆರಿಫ್ ಅವರ ಮಾತನಲ್ಲಿ ಉರ್ದು ಪದಗಳ ಬಳಕೆ ಕಂಡುಬರುತ್ತದೆ. ಆದರೆ ಅದು ಆಡುಮಾತಿನ ಲಯದಲ್ಲಿ ಅಲ್ಲ. ಶಿಷ್ಟ ಭಾಷೆಯ ರೀತಿಯಲ್ಲಿಯೇ ಅದರ ಬಳಕೆ ಕನ್ನಡ ಮಾತಿನಲ್ಲಿ ಸೇರಿದೆ. ಶಿಕ್ಷಿತ ತರುಣ ಸಮುದಾಯ ಇಂಗ್ಲೀಷ್ ಮಾತಾಡುವುದನ್ನು ಇವರು ನೇರವಾಗಿಯೇ ಸಂಭಾಷಣೆಗೆ ತರುತ್ತಾರೆ. ದೇವೇಂದ್ರರಾಯ್ ಡೆಪ್ಯೂಟಿ ಕಲೆಕ್ಟರ್ ಆಗಿ ಹೈದರಾಬಾದಿನಲ್ಲಿ ಚಾರ್ಜ್ ತೆಗೆದುಕೊಂಡಿದ್ದ. ಇದರ ಸಂತೋಷಕ್ಕೆ ಕ್ಲಬ್ಬಿನಲ್ಲಿ ಪಾರ್ಟಿ ಏರ್ಪಡಿಸುತ್ತಾನೆ. ಪಾರ್ಟಿಯಲ್ಲಿ ಕಾರ್ಡ್ ಆಡುತ್ತ ಕುಳಿತಿದ್ದ ಗುಂಪಿನಲ್ಲಿ ಸಂಭಾಷಣೆ ನಡೆಯುತ್ತದೆ.

ಆರಿಫ್ ಕಾರ್ಡು ಆಡುವುದನ್ನು ನಿಲ್ಲಿಸಿ ಆಡುವವರ ಸುತ್ತ ತಿರುಗುತ್ತಿರುತ್ತಾನೆ.

"ದೇವೇಂದ್ರರಾಯ್‌ನ ಹಿಂದೆ ಬಾಗಿ",

"ಯಾಕೆ? ನಿನ್ನ ಇನ್ನೊಂದು ಹಕ್ಕಿ ಎಲ್ಲಿ ಹಾರಿ ಹೋಯಿತು?" ಎಂದ ಮೆಲ್ಲಗೆ.

"ಓ ಯು ಮೀನ್ ಪ್ರತಿಮಾ? ಊರಲ್ಲಿಲ್ಲ. ಇಂದು ನಾಳೆ ಬಂದಾಳು. ಸಭ್ಯತೆಗೊಂದು ಉದಾಹರಣೆ". ಅಷ್ಟೇ ಮೆಲ್ಲನೆ ದೇವೇಂದ್ರ ಹೇಳಿ ತನ್ನ ಕಾರ್ಡು ಒಗೆದ.

"ಆದರೆ ಬಹಳ ರಿಸರ್ವ್ಡ್, ಸಂಕೋಚದ ವ್ಯಕ್ತಿ ಅಲ್ಲವೆ?"

ತಾರಾ ಮತ್ತೊಂದು ಜೋಕರ್ ಎತ್ತಿದ್ದುದರಿಂದ ಗುಂಪಿನಲ್ಲಿ ಹರ್ಷೋದ್ಗಾರವಾಯಿತು. ಆರಿಫ್ ತಾರಾನ ಬೆನ್ನ ಹಿಂದೆ ಬಂದ. ಅವಳ ಕಾರ್ಡು ನೋಡಿದ.

"ವಂಡರ್ ಫುಲ್" ಕೂಗಿದ.

"ಡೋಂಟ್ ಬಿ ಸಿಲ್ಲಿ. ಆಟವನ್ನೆಲ್ಲಾ ಬಯಲಿಗೆ ಹಾಕಬೇಡಿ" ತಾರಾ ಸಿಡುಕಿನಿಂದ ಹೇಳಿದಳು.

"ಆಟವಲ್ಲ ನೀನು. ನೀನು ವಂಡರ್‌ಫುಲ್" ಕಿವಿಯಲ್ಲಿ ಉಸುರಿದ

"ಡೋಂಟ್ ಟಾಕ್ ರಾಟ್(ಕೊಳಕು ಮಾತನಾಡಬೇಡ)ಯೂ ಫೂಲ್" ಎಂದು ಎಲೆಗಳನ್ನು ಜೋಡಿಸುವಂತೆಯೇ ತಾರಾ ಗದರಿಸಿಕೊಂಡಳು...." (ಜಯತೀರ್ಥ ರಾಜಪುರೋಹಿತ; ೧೯೬೭; ಪುಟ: ೧೯೨). ಮೇಲ್ವರ್ಗದ ಸುಶಿಕ್ಷಿತ ಜನತೆಯಲ್ಲಿ ಆಧುನಿಕತೆಯು ಕಂಡು ಬರುತ್ತಿರುವುದು ಇಲ್ಲಿ ತಿಳಿಯುತ್ತದೆ. ಬದಲಾದ ಕಾಲಘಟ್ಟಕ್ಕೆ ಅನುಗುಣವಾಗಿ ಇಂಗ್ಲೀಷ್ ಭಾಷೆಯ ಬಳಕೆಯೂ ಇಲ್ಲಿ ಕಂಡು ಬರುತ್ತದೆ. ಪ್ರಭುತ್ವದ ಹಿಡಿತದಿಂದ ಪಾರಾಗಿ ವಸಾಹತುಶಾಹಿ ಆಳ್ವಿಕೆಯ ಕರ್ನಾಟಕದ ಉಳಿದ ಪ್ರದೇಶಗಳೊಂದಿಗೆ ಸ್ವಾತಂತ್ರವನ್ನು ಹಂಚಿಕೊಳ್ಳುವ, ಆಡಳಿತ ಕ್ರಮ, ಭಾಷೆಯನ್ನು ಬದಲಾಯಿಸಿಕೊಳ್ಳುತ್ತಿರುವ ಹೈದರಾಬಾದ್ ಕರ್ನಾಟಕದ ವಾತಾವರಣವನ್ನು ಇದು ತಿಳಿಸುತ್ತದೆ. ಹೈದರಾಬಾದ್ ಕರ್ನಾಟಕದ ಆಡುಮಾತಿನ ಶೈಲಿ ಇವರ 'ಹಾಲುಜೇನು' ಕಾದಂಬರಿಯಲ್ಲಿ ಕಂಡು ಬರುತ್ತದೆ. ಬದಲಾಗುತ್ತಿರುವ ಕಾಲಘಟ್ಟದ ಭಾಷೆಯನ್ನು ಪ್ರಾದೇಶಿಕ ಉಪಭಾಷೆಯನ್ನು ಬಳಸುವುದಲ್ಲದೆ ಶಿಷ್ಟ ಭಾಷೆಯ ನಿರೂಪಣೆಯೂ ಇವರ ಕಥನದಲ್ಲಿ ಕಂಡುಬರುತ್ತದೆ.

ಚಂದ್ರಕಾಂತ ಕುಸನೂರರ 'ಗೋಹರಜಾನ್ ಮಾಲತಿ ಮತ್ತು ನಾನು', 'ಕೆರೂರನಾಮಾ', ಕಾದಂಬರಿಗಳಲ್ಲಿ ಶಿಷ್ಟಭಾಷೆಯ ನಿರೂಪಣೆ ಹಾಗೂ ಪ್ರಾದೇಶಿಕ ಭಾಷೆಯನ್ನು ಅಲ್ಲಲ್ಲಿ ಬಳಸುವುದು ಕಂಡು ಬರುತ್ತದೆ. 'ಗೋಹರಜಾನ್ ಮಾಲತಿ ಮತ್ತು ನಾನು' ಕಾದಂಬರಿಯಲ್ಲಿ ರವೀಂದ್ರನ ಪಾತ್ರವೇ ಇಡಿಯಾಗಿ ಕಾದಂಬರಿಯ ಎಲ್ಲಾ ವಿಷಯವನ್ನು ತಿಳಿಸುತ್ತಾ ಸಾಗುತ್ತದೆ. ಕೆರೂರನಾಮಾ ಕಾದಂಬರಿಯಲ್ಲಿ ಕಂಡು ಬರುವ ತುಳಸಕ್ಕ ಹಾಗೂ ಇತರೆ ಬ್ರಾಹ್ಮಣ ಕುಟುಂಬದವರ ಮಾತಿನಲ್ಲಿ ಪಾವಣೇರು, ಮೌಶಿ

ಇತ್ಯಾದಿ ಮರಾಠಿ ಪದಗಳು ಕಂಡುಬರುತ್ತವೆ. ಉರ್ದು ಮಿಶ್ರಿತ ಭಾಷೆಯ ಬಳಕೆಯೂ ಇವರ ಕಾದಂಬರಿಗಳಲ್ಲಿ ಕಂಡುಬರುತ್ತದೆ.

"ಮುಂಜಾನಿಂದ ಸಂಜೀತನಕ ಅದಾಲತನ್ಯಾಗ ಕಡೇ ನಿಂತು ಜಡ್ಜ್‌ನ ಮುಂದ ಬಹಸ್ ಮಾಡಿದರ, ಟೊಂಕದಾಗಿನ ಉಸಿರಾ ಪಾದುಕ್ಕಿಳಿದು ಮುಂದ ನೆಲದಾಗ ಹೋಗಿ ಬಿಟ್ರ ಮಕ್ಕಳ್ಯಾಂಗಾದಾವೊ?' (ಚಂದ್ರಕಾಂತ ಕುಸನೂರ; ಕೆರೂರ ನಾಮಾ; ಪುಟ : ೨) ಎಂಬ ಮಾತುಗಳಲ್ಲಿ ಪ್ರಾದೇಶಿಕ ಭಾಷೆಯಲ್ಲಿ ಉರ್ದು ಪದಗಳ ಸೇರ್ಪಡೆ ಕಂಡು ಬರುತ್ತದೆ.

ಚೆನ್ನಣ್ಣ ವಾಲೀಕಾರರ 'ಹೊಲಗೇರಿ' (ಕಥೆ), 'ಹುಲಿಗೆಮ್ಮ' (ಕಾದಂಬರಿ), 'ಒಂದು ಹೆಣ್ಣಿನ ಒಳಜಗತ್ತು' (ಕಾದಂಬರಿ) ಮುಂತಾದವುಗಳಲ್ಲಿ ಶಿಷ್ಟ ಭಾಷೆಯ ನಿರೂಪಣೆ ಹಾಗೂ ಜನರ ಆಡುಮಾತಿನ ಭಾಷೆಯನ್ನು ಬಳಸಲಾಗಿದೆ. ಪ್ರಾದೇಶಿಕವಾಗಿ ಕೆಳಸಮುದಾಯದ ಉಪಪ್ರಾದೇಶಿಕ ಭಾಷೆಯನ್ನು ಮುನ್ನೆಲೆಗೆ ತರುವ ಹಾಗೂ ಆ ಮೂಲಕವೇ ಅವರ ಬದುಕಿನ ರೀತಿನೀತಿಯನ್ನು ಕಟ್ಟಿಕೊಡುವ ಇವರ 'ಬೆಳ್ಯಾ' ಕಾದಂಬರಿ ವಿಶಿಷ್ಟವಾಗಿದೆ. ಇಲ್ಲಿ ನಿರೂಪಣೆಗೂ ಹಾಗೂ ಪಾತ್ರಗಳ ಮಾತಿಗೆ ಒಂದೇ ರೀತಿಯ ಭಾಷೆಯನ್ನು ಬಳಸಿಕೊಳ್ಳಲಾಗಿದೆ. ಕೆಳವರ್ಗದ ಮಾತಿನ ರೀತಿಯಲ್ಲಿಯೇ ಕಟ್ಟಿಕೊಡಲಾಗಿರುವ ಇಲ್ಲಿನ ಕಥನದ ಶೈಲಿ ಮೇಲ್ವರ್ಗವನ್ನು ಬಿಂಬಿಸುವಲ್ಲಿಯೂ ಇದೇ ಭಾಷೆಯನ್ನು ಬಳಸಿದೆ. 'ಬೆಳ್ಯಾ' ಕಾದಂಬರಿಯ ಬೀರಪ್ಪ ಹಾಗೂ ಆತನ ತಂಗಿ ಕುಂಟ ಶಂಕ್ರವ್ವರ ನಡುವೆ ಆಸ್ತಿಗೆ ಸಂಬಂಧಿಸಿದಂತೆ ಜಗಳ ಉಂಟಾಗುತ್ತದೆ. ಈ ಜಗಳನ್ನು ತಮ್ಮ ಸ್ವಹಿತಾಸಕ್ತಿಗೆ, ದ್ವೇಷಕ್ಕೆ ಬಳಸಿಕೊಳ್ಳಬಯಸುವ ಫ್ಯೂಡಲ್‌ಗಳಿಂದಾಗಿ ಇದು ಪಂಚಾಯಿತಿಯಲ್ಲಿ ಬಗೆಹರಿಯುವ ಪರಿಸ್ಥಿತಿ ಉಂಟಾಗುತ್ತದೆ.

'ಏ ಸೆಂಕ್ರೆವಾ ಇಪ್ಪತ್ತೊರ್ಸಲಿಂದುಣ್ಕೋತ್ ಬಂದೀದಿ. ಮನ್ಯ್ಯಾ ತುಂಬ್‌ಮಕ್ಳ ಮರ್ಗಳಾದ್ವ ಇನ್ನಾ ನಿಮ್ಮೂರಿಗ್ನೀ ವ್ಹೋಗ್ಬಾರ್ದಾ? ನಾಳ್ನೀ ಸತ್ ಮರ್ದಿನಾ ಇದು ನಮ್ ಹೊಲಮನಿಯಂತ್ನಿನ್ಮಕ್ಳ ಮರ್ಗ್ಗಳ ಜಗ್ಳಾ ತೆಗ್ದವಂದ್ರ ಮುಂದ್ಬಾರಿ ಕದ್ನ ನಡಿತದ್ನೋಡ್ ಹಾಂಗಾಗ್ಬಾರ್ದಂತ್ ಈ ನ್ಯಾಯಾ ಸ್ಯಾಂತಿಲಿಂದ್ಬಗಿಹರ್ಸಬೇಕಂತ್ನಾವ್ಬಂದೀವ್'.

ಅಂದಾಗ್ಲೋಲಿಸ್ಕೋಡ್ಕಣ್ಕೆಂ ಪಗ್ಮಾಡ್ಯ

"ಗಾಂಜಿ ಮುತ್ತೈನ್ಮಮ್ಮಕ್ಳ ಆಗೇರ್ಮಕ್ಳ. ಸ್ಯಾಂತೀಲ್ಬಗಿಹರ್ಸತಾರಂತ್ ಸ್ಯಾಂತಿಲ್ ಏ ಸೆಂಕ್ರೆವಾ ನಿನಗೇನನಾ ಮನ್ಯಾಗ್ಕೆಲ್ಸ ಬೊಗ್ಸಿ ಅದಾನೊ ಇಲ್ಲೊ ಯಾಕ್ಕುಂತಿದ್ ಹೊಂಜ್ನಂಗೆದ್ವೇಳ್. ನೀ ಜೀವ್ದಲಿರತಕ್ ಯಾಮಗಾ ನಿನ್ ಹೊಲಮನಿ ತೊಗೊತಾನೊ ನೋಡ್ತೀನ್" (ಚೆನ್ನಣ್ಣವಾಲೀಕಾರ; ೧೯೭೫; ಪುಟ : ೧೯).

ಶಿಷ್ಟಭಾಷೆಯ ನಿರೂಪಣಾಕ್ರಮ ಹಾಗೂ ಮೇಲ್ವರ್ಗ, ಕೆಳವರ್ಗವೆಂಬುದನ್ನು ಭಾಷಾ ಬಳಕೆ ಯಲ್ಲಿಯೇ ತಿಳಿಸುವ ರೀತಿಯನ್ನು ಈ ಕಾದಂಬರಿ ತಳ್ಳಿಹಾಕುತ್ತದೆ. ಮೇಲ್ವರ್ಗದ ಮಾತಿನ ರೀತಿಯನ್ನು

ಶಿಷ್ಟವಾಗಿ ಇಲ್ಲವೆ ನಯನಾಜೂಕಿನಿಂದ ಬಿಂಬಿಸುವ ನಿರೂಪಣೆ ಇಲ್ಲಿ ಕಂಡುಬರುವುದಿಲ್ಲ. ಎಲ್ಲಾ ಸಮುದಾಯವನ್ನು ಶಿಷ್ಟಭಾಷೆಯ ನಿರೂಪಣೆಯಲ್ಲಿಯೇ ಕಟ್ಟಿಕೊಡಲು ಹೇಗೆ ಸಾಧ್ಯವೋ ಹಾಗೆಯೇ ಸಮುದಾಯವೊಂದರ ಆಡುಮಾತಿನ ರೀತಿಯಲ್ಲಿಯೇ ಎಲ್ಲಾ ಸಮುದಾಯಗಳನ್ನು ನಿರ್ವಚಿಸಬೇಕೆಂಬುದನ್ನು ಕಾದಂಬರಿ ಉದ್ದೇಶಿಸಿದಂತಿದೆ. ಈ ರೀತಿಯ ಭಾಷಿಕ ಪ್ರಯೋಗದಲ್ಲಿ ಯಶಸ್ಸನ್ನು ಕಂಡಿದೆ. ಸಾರ್ವತ್ರಿಕ ಸಂವಹನಕ್ಕೆ ಕಾದಂಬರಿ ದಕ್ಕಲಿಲ್ಲ ಎನ್ನುವ ಕಾರಣಕ್ಕೆ ಇದನ್ನು ಕಡೆಗಣಿಸಲಾಗದು. ಮುನ್ನೆಲೆಗೆ ತರಬೇಕೆನ್ನುವ ಸಮುದಾಯವನ್ನು ಅವರ ಭಾಷೆಯಲ್ಲಿಯೇ ಕಟ್ಟಿಕೊಡುವುದು ಹೊಸ ಓದಿನ, ಹೊಸ ರೀತಿಯ ಬರವಣಿಗೆಯ ಸಾಧ್ಯತೆಗಳನ್ನು ತಿಳಿಸುತ್ತದೆ. ಇಂತಹ ಭಾಷಿಕ ಜಗತ್ತಿನ ಇರುವಿಕೆ ಅದನ್ನು ಮೊದಲ ಬಾರಿಗೆ ಬರವಣಿಗೆಗೆ ಇಳಿಸಿದಾಗ ಎದುರಿಸಬೇಕಾದ ವಿಮರ್ಶೆಗಳನ್ನು ಭಾಷೆಯ ಬಳಕೆಯ ಕಾರಣಕ್ಕೆ ಕಾದಂಬರಿ ಎದುರಿಸಿದೆ. ಸಾಹಿತ್ಯಿಕ ಅಭಿವ್ಯಕ್ತಿಯ ಹೊಸ ಮಾದರಿಯೊಂದು 'ಬೆಳ್ಳಾ' ಕಾದಂಬರಿಯಿಂದ ಕಂಡುಬಂದಿರುವುದು ಮಾತ್ರ ಒಪ್ಪಿತ ವಿಚಾರವಾಗಿದೆ.

ಜಂಬಣ್ಣ ಅಮರಚಿಂತರ 'ಕುರುಮಯ್ಯ ಮತ್ತು ಅಂಕುಶದೊಡ್ಡಿ' ಕಾದಂಬರಿಯ ನಿರೂಪಣಾ ಶೈಲಿಯಲ್ಲಿ ಪ್ರಾದೇಶಿಕವಾದ ಆಡುಮಾತಿನ ವಿಶಿಷ್ಟತೆ ಕಂಡು ಬರುತ್ತದೆ. ನಿರೂಪಣೆಯ ಆಡುಮಾತಿನ ಜೊತೆಗೆ ಕೊರವ ಸಮುದಾಯವನ್ನು ಭಿನ್ನವಾಗಿ ತೋರಿಸುವ ಭಾಷಿಕ ರೀತಿಯನ್ನು ಅಲ್ಲಲ್ಲಿ ಸಂಭಾಷಣೆಗಳಲ್ಲಿ ಕಟ್ಟಿಕೊಡುತ್ತಾರೆ. 'ಕುರುಮಯ್ಯ ಮತ್ತು ಅಂಕುಶದೊಡ್ಡಿ' ಕಾದಂಬರಿಯ ಭಾಷಿಕ ಅಭಿವ್ಯಕ್ತಿಯನ್ನು ಗಮನಿಸಿದರೆ ಈ ಅಂಶ ಹೆಚ್ಚು ಸ್ಪಷ್ಟವಾಗುತ್ತದೆ.

"ಕುರುಮಯ್ಯನನ್ನು ಕಂಡು ಕತಲಪ್ಪ",

"ಎಲ್ಲಿಗಪೋs ಈಟು ಮುಂಜಾಲಿ ವಂಟಿ?" ಕೇಳಿದ.

"ಎಲ್ಲಿಗಿಲ್ಲ ಯಜ್ಮಾನ ..... ಕುಚೇಲಪ್ಪ ಧಣಿ ಕರಿಶ್ಯಾನ. ಅದಕ ರಾಯಪುರಕ ವಂಟೇನಿ" ಎಂದು ಕುರುಮಯ್ಯ ಬೆಟ್ಟದ ಕಡೆ ಬೊಟ್ಟು ಮಾಡಿ ತೋರಿಸುತ್ತಾ;

"ಗುಂಟಿಗಳ್ಯಾಕ ಗಲಾಟಿ ನಡಿಸ್ಯಾವ" ಎಂದ.

"ಏನಿಲ್ಲ ಜಂಬಯ್ಯನ ದೊಡ್ಡ ಪಟ್ಟಿ ಗುಂಟ್ಯಾ ಮರಿ ಆಕ್ಯಾದ...."

ಅದಕ ಅವ್ವು ಮರಿಗಳ್ನ ಹಿಡ್ದುಕೇಸಿ ಕಿಂವಿ ಕೊಯ್ದು ಕೂನಾಕಾಕತ್ಯಾನ...

ಅದಕ ಹೆಣ್ಗುಂಟ್ಯಾ ಒದರಾಕತ್ಯದ" ಎಂದ ಕತಲಪ್ಪ (ಜಂಬಣ್ಣ ಅಮರಚಿಂತ; ೧೯೯೪; ಪುಟ: ೭). ಸಮುದಾಯದ ಭಾಷಿಕ ವಿಶಿಷ್ಟತೆಯನ್ನು ತಿಳಿಸುವ ಈ ಸಂಭಾಷಣೆಯ ಜೊತೆಗೆ ನಿರೂಪಣೆಯಲ್ಲಿ ಪ್ರಾದೇಶಿಕ ಆಡುಮಾತಿನ ರೀತಿಯೂ ಕಂಡುಬರುತ್ತದೆ. "ಗಿರಾಕಿಗಳು ಯಾರಿಲ್ಲದ್ದು ಕಂಡು, ಮೂಲೆಗಿಟ್ಟಿದ್ದ ಗಾಜಿನ ಗ್ಲಾಸ್‌ನ್ನು ಕೈಗೆತ್ತಿಕೊಂಡು, ಶಲ್ಯೆಯ ಚುಂಗಿನಿಂದ ಅದನ್ನು ಸ್ವಚ್ಛ ಮಾಡಿ ಕಟ್ಟೆಯ ಮೇಲೆ ಕುಳಿತು ಸೆರೆ ಮಾರುವ ಪೋತುರಾಜನ ಮುಂದಿಟ್ಟು; ಹಣ ಕೊಡುತ್ತಾ "ಯಯ್ಯೋs ಎಳ್ಡು ಗಿಟ್ಟಿ"

ಎಂದು ಕೈಯ ಎರಡು ಬೆರಳುಗಳನ್ನು ಅಗಲಿಸಿ ತೋರಿಸಿದ.... ದಮ್ಮಡಿ, ಪಾವಲಿ, ಗಾಡಿ, ಹಾಲಿಹಣ ಲೆಕ್ಕ ಮಾಡುವುದಗಲ್ಲಿ ಸರ್ವೀಸ್ ಹೊಂದಿದ ಕುರುಬುಯ್ಯನಿಗೆ ನಯಾ ಪೈಸೆಗಳ ಲೆಕ್ಕ ಎಡವಟ್ಟಾಗಿ ಕಂಡು ಬರುತ್ತಿತ್ತು.

"ಇವ್ನೇಂತಿ" ಎಂದು ಮುಡ್ಡಿ ಪಂಚೆಯಲ್ಲಿ ಚಿಲ್ಲರೆ ಸಿಕ್ಕಿಸಿಕೊಂಡು ತಾಂಡೆ ದಾರಿ ಹಿಡಿದ (ಜಂಬಣ್ಣ ಅಮರಚಿಂತ; ೧೯೯೪; ಪುಟ : ೯). ಸಮುದಾಯವೊಂದರ ಸಂಭಾಷಣೆಯಲ್ಲಿಯ ಭಾಷಿಕ ವಿಶಿಷ್ಟತೆ ಮತ್ತು ಆ ಸಮುದಾಯದವರ ವರ್ತನೆಯನ್ನು ಚಿತ್ರಿಸುವ ನಿರೂಪಣೆ ಪರಸ್ಪರ ಪೂರಕವಾಗಿವೆ.

ಲಲಿತಾದೇಮಶೆಟ್ಟಿಯವರ ಕಥನ ಶೈಲಿಯಲ್ಲಿ ಶಿಷ್ಟ ಭಾಷೆಯ ಪ್ರಯೋಗ ಹೆಚ್ಚಾಗಿ ಕಂಡು ಬರುತ್ತದೆ. 'ಸೋಲು', 'ಮಮತೆಯ ಕೊಲೆ' ಎಂಬ ಇವರ ಕತೆಗಳಲ್ಲಿ ಕೆಳವರ್ಗದ ಮಾತಿನ ರೀತಿಯನ್ನು ಪ್ರತ್ಯೇಕವಾಗಿ ಬಿಂಬಿಸಿದ್ದಾರೆ. ಪ್ರಾದೇಶಿಕ ಹಾಗೂ ಸಮುದಾಯದ ಭಾಷಿಕ ವೈವಿಧ್ಯತೆಗಳು ಇವರ ಕತೆಗಳಲ್ಲಿ ಕಂಡುಬರುವುದಿಲ್ಲ.

ಶ್ರೀಕಾಂತ ಪಾಟೀಲರ ಕತೆಯಲ್ಲಿ ಬೀದರ ಭಾಗದ ಆಡುಮಾತು ಕಂಡು ಬರುತ್ತದೆ. ಕತೆಯ ನಿರೂಪಣೆಯ ಭಾಷೆ ಮತ್ತು ಕತೆಯಲ್ಲಿನ ಪಾತ್ರಗಳ ಭಾಷೆ ಭಿನ್ನವಾಗುವುದಿಲ್ಲ. ಈ ಮಾತಿಗೆ 'ಮೂಡಲದಾಗ ಕೆಂಪರಾಶಿ ಮೂಡಿತ್ತು (ಶ್ರೀಕಾಂತ ಪಾಟೀಲ) ಕತೆಯಲ್ಲಿನ ನಿರೂಪಣೆಯೊಂದನ್ನು ಗಮನಿಸುವುದು ಸ್ಪಷ್ಟನೆಯನ್ನು ನೀಡುತ್ತದೆ.

"ಕಲ್ಲಿಗೂ ಮಾತಾಡ್ಸಿ, ಊರಿಗೇ ನಗಸಿ, ಒಂದ್ ಘಳಗಿ ಬಾಳಿನಗೋಳ ಮರ್ಸಾ ನಮ್ಮೂರ ಸಣ್ಣಿ, ತನ್ನ ಬಾಳ್ಯಾ ಮುಂದ ಹ್ಯಾಂಗಂತ ಪಂಚೇತಿ ಕಟ್ಟಿ ಕೆಳಗ ಕುಂತು ಕುದಿತಿದ್ಳು...." ಶ್ರೀಕಾಂತ ಪಾಟೀಲ; ೧೯೯೭; ಪುಟ ೧೮). ಈ ನಿರೂಪಣೆಯ ಜೊತೆಗೆ ಕತೆಯಲ್ಲಿ ಕಂಡುಬರುವ ಗೌಡನ ಮಾತಿನಲ್ಲಾಗಲಿ, ಸಣ್ಣಿ ಮತ್ತು ಆಕೆಯ ಕುಟುಂಬದವರ ಮಾತಿನ ರೀತಿಯಲ್ಲಾಗಲಿ ಹೆಚ್ಚು ವ್ಯತ್ಯಾಸ ಕಂಡುಬರುವುದಿಲ್ಲ. ಸ್ಥಾನಮಾನಕ್ಕೆ ಅನುಗುಣವಾಗಿ ಸಂಬೋಧನೆಗಳು ಭಿನ್ನವಾಗುತ್ತವೆಯೇ ವಿನಹ ಭಾಷೆಯ ಬಳಕೆಯಲ್ಲಿ ಭಿನ್ನತೆ ಕಂಡುಬರುವುದಿಲ್ಲ. ಪ್ರಾದೇಶಿಕ ಆಡುಮಾತಿನ ಬಳಕೆಯಿಂದಾಗಿ ಇವರ ಬರವಣಿಗೆ ವಿಶಿಷ್ಟವಾಗಿ ನಿಲ್ಲುತ್ತದೆ.

ಗೀತಾನಾಗಭೂಷಣ ಅವರ ಬರವಣಿಗೆ ಕಲಬುರ್ಗಿಯ ವಿಶಿಷ್ಟ ಭಾಷೆಯನ್ನು ಮುನ್ನೆಲೆಗೆ ತರುತ್ತದೆ. ಉರ್ದು ಮಿಶ್ರಿತ ಕನ್ನಡ ಉಪಭಾಷೆಯ ಬಳಕೆ ಜನ ಬದುಕಿನಲ್ಲಿ ಕಂಡುಬರುವಂತೆ ಸಾಹಿತ್ಯಿಕ ಬರವಣಿಗೆಯ ಸಾಧನವಾಗಿರುವುದು ಪ್ರಾದೇಶಿಕ ಹಾಗೂ ಸಾಹಿತ್ಯಿಕ ಬರವಣಿಗೆಯ ವಿಶಿಷ್ಟತೆಯ ಅಂಶವಾಗಿಯೇ ಕಂಡುಬಂದಿದೆ. ಗೀತಾ ನಾಗಭೂಷಣ ಅವರ ಕತೆ, ಕಾದಂಬರಿಗಳಲ್ಲಿ ಈ ಮಾತಿಗೆ ಹೆಚ್ಚು ನಿದರ್ಶನಗಳು ದೊರೆಯುತ್ತವೆ. 'ಕಾಗೆ ಮುಟ್ಟಿತು' ಕಾದಂಬರಿಯ ನಿರೂಪಣೆಯಲ್ಲಿ ಉರ್ದು ಮಿಶ್ರಿತ ಕನ್ನಡ ಉಪಭಾಷೆಯ ಬಳಕೆ ಕಂಡುಬರುತ್ತದೆ.

"ಮಾಡ್ಕೊಂಡ ಹೆಣ್ತಿ ಹೊಟ್ಯಾಗ ಒಂದು ಗಂಡ ಬೀಜಾ ಬಿತ್ತಲಕ್ಕ ಆಗಲಿಲ್ಲ. ನಿನ್ನ ಗಂಡಗs... ಊರ ಹೊಲಗೋಳೆಲ್ಲಾ ಹರಗ್ತಾನ...... ನೀ ಯಾಕ್ ಹಬ್ಬದ ದಿನ ಓಂಗ್ ಉಸರ ಹಾಕ್ತಿ ಬಿಡುಮಗಾ... ಆ ಪತ್ರಿಮಟದ ಶಂಭುಲಿಂಗ ಕಣ್ಣಮುಚಗೊಂಡೇ ಕೂಡ್ತಾನೇನು ಹಮೇಶಾ? ಎಂದರೆ ಅಂವಾ ಕಣ್ಣು ಬಿಟ್ಟು ನೋಡಿ ನಿನ್ನಡ್ಯಾಗೊಂದು ಮಗ ಆಡಂಗ ಮಾಡ್ತಾನೇಳು....." (ಗೀತಾ ನಾಗಭೂಷಣ; ೨೦೦೨; ಪುಟ : ೨೮). ಕಲ್ಬುರ್ಗಿಯ ಪ್ರಾದೇಶಿಕ ಭಾಷೆಯಲ್ಲಿಯೇ ಬರೆದ 'ಬದುಕು' ಕಾದಂಬರಿಯ ಭಾಷಿಕ ಶೈಲಿ ಕೆಳ ಸಮುದಾಯದ ಬದುಕಿನ ರೀತಿಯನ್ನು ಹಾಗೂ ಆಡುಮಾತಿನ ಎಲ್ಲಾ ವಿಶಿಷ್ಟತೆಗಳನ್ನು ಮೈಗೂಡಿಸಿಕೊಂಡಿದೆ. ನಿರೂಪಣೆಯ ರೀತಿಯೊಂದಿಗೆ ಇಲ್ಲಿನ ಪಾತ್ರಗಳ ಸಂಭಾಷಣೆಯೂ ವಿಶಿಷ್ಟವಾಗಿದೆ.

"ನಾಗವ್ವಾಯಿಯ ಹತ್ತಿರ ಏನಿಲ್ಲೆಂದರೂ ಚಾರಸೆ ಪಾನಸೆ ರುಪ್ಯೆಯೋಟು ಗಂಟಿದೆ. ಸಾಬಯ್ಯ ಮಾಡಿಸಿಕೊಟ್ಟಿದ್ದ ಬಂಗಾರದ ಜೀರಾಮಣಿ, ಸಿಬರೆಟಿಕ್ಕೆ, ಬೆಳ್ಳಿ ವಂಕಿ, ರಟ್ಟಿ ಖಿಡೆಗಳಿವೆ. ತಾನೇ ದುಡಿದು ಮಾಡಿಸಿಕೊಂಡ ಒಂದು ತೊಲೆ ಬಂಗಾರದ ಸಿಂಗಾರ ಕರಮಣಿ ಸರಯಿದೆ. ಆದರೆ ಮುದಕಿ ಎಲ್ಲ ಮುಚ್ಚಿ ಗಂಟುಕಟ್ಟಿ ಇಟ್ಟಿದೆ. ಕೊಳ್ಳಾಗ ಒಂದು ಜೀರಾಮಣಿ ಮಾತ್ರ ಯಾವಾಗಲೂ ಇರುತ್ತದೆ.

"ನಾ ಹೋಗ್ತೀನೇ ಶಾಣೂ..... ಕತ್ತಲಾಗಲಕತ್ತಾದ ಮಗಾ...." ನಾಗವ್ವಾಯಿ ಕೇಳಿದಳು. ಮಲ್ಲಪ್ಪ ಮತ್ತೊಂದು ಗಿಲಾಸು ತುಂಬಿಕೊಟ್ಟನು.

"ಇಲ್ಲೇ ಉಂಡು ಹೋಗಾಕೆಂತಿರೇ ನಿನ್ನವ್ವನಾ.... ಮಗಳು ಬಂದಾಳಂತ ನಿನ್ನ ಸೊಸಿ ಕೋಳಿಪಲ್ಯಾ, ಅಕ್ಕಿಬಾನಾ, ಬಿಸಿರೊಟ್ಟಿ ಮಾಡ್ಯಾಳ ಕೂಡು. ಅಡಗಿ ಇಲ್ಲೇ ತೆರಸ್ತೀನಿ. ಪಸಂದಾಗಿ ಬೆಳದಿಂಗಳದಾ. ಎಲ್ಲೋರೂ ಇಲ್ಲೇ ಕುಂತು ಉಣಾಮೆಂತ...." ಅಂದನು "ಹೊಯಿಂದೇ ಆಯೀ ಒಂಟಿ ಜಿಂವಾ ನಿಂದು. ಎಲ್ಲಿ ಉಂಡ್ರೇನು ಬಿಡು... ಉಂಡು ಹೋಗು....." ಶಾಣಮ್ಮನೂ ದನಿಗೂಡಿಸಿದಳು. "ಒಂದೀಟು ಪಲ್ಯಾ ಕುಡೇ ಕಾಶೀ... ಮನ್ಯಾಗ ರೊಟ್ಟಿ ಅವಾ... ಅಲ್ಲೇ ಉಣ್ತೆನೆಂತ..." ನಾಗವ್ವಾಯಿ ಅನುಮಾನಿಸಿದಳು (ಗೀತಾ ನಾಗಭೂಷಣ; ೨೦೦೭; ಪುಟ : ೩೨). ಸಮುದಾಯಗಳ ಸಂವೇದನೆಗೆ ಈ ಪ್ರದೇಶದ ಭಾಷೆ ಸಮರ್ಪಕವಾಗಿ ಬಳಕೆಯಾಗಿದೆ. ಇವರ 'ಮಾನಾಪಮಾ ನಿಮ್ಮದಯ್ಯ', 'ನೆಲನೊಂದೆ ಹೊಲಗೇರಿ ಶಿವಾಲಯಕೆ' ಇತ್ಯಾದಿ ಕತೆಗಳಲ್ಲಿ ಆಡುಮಾತಿನ ನಿರೂಪಣೆ ಹಾಗೂ ವಿಶಿಷ್ಟ ಸಮುದಾಯಗಳ ಮಾತಿನ ರೀತಿಯನ್ನು ಕಟ್ಟಿಕೊಟ್ಟಿದ್ದಾರೆ.

ಬಿ.ಟಿ. ಲಲಿತಾನಾಯಕ್‌ರವರ ಬರಹದಲ್ಲಿ ಶಿಷ್ಟಭಾಷೆಯ ನಿರೂಪಣೆ ಹಾಗೂ ಆಡುಮಾತಿನ ಬಳಕೆ ಕಂಡುಬರುತ್ತದೆ. 'ಗತಿ' ಕಾದಂಬರಿ ಹಾಗೂ 'ಹಬ್ಬ ಮತ್ತ ಬಲಿ' ಕತೆಯಲ್ಲಿ ವಿಭಿನ್ನ ಸಮುದಾಯಗಳನ್ನು ಚಿತ್ರಿಸುತ್ತಾರೆ. ಲಂಬಾಣಿ ಸಮುದಾಯವನ್ನು ಪ್ರತಿನಿಧಿಸುವ ವಿಶಿಷ್ಟ ಭಾಷಿಕ ನುಡಿಗಟ್ಟು ಗಳನ್ನು ಬಳಸುವ ಮೂಲಕ 'ಗತಿ' ಕಾದಂಬರಿಯಲ್ಲಿಯ ಬದುಕನ್ನು ಚಿತ್ರಿಸಿದ್ದಾರೆ. ಉಳಿದಂತೆ ಶಿಷ್ಟ ಭಾಷೆಯ ನಿರೂಪಣೆಯೇ ಇಲ್ಲಿ ಕಂಡುಬರುತ್ತದೆ. ಕೇವಲ ಲಂಬಾಣಿ ಬದುಕಿನ ಸಂವೇದನೆಗಳ ಅಭಿವ್ಯಕ್ತಿಗೆ

ಸೀಮಿತಗೊಳ್ಳದೆ ಅನ್ಯಸಮುದಾಯಗಳನ್ನು ಕಥನದ ವಸ್ತುವನ್ನಾಗಿಸಿಕೊಂಡಿರುವ ಇವರ ಬರವಣಿಗೆ ಶೈಲಿ ಆಯಾ ಕಥನಕ್ಕೆ ಒಗ್ಗುವ ಭಾಷೆಯನ್ನು ಬಳಸಿದೆ.

ಅಮರೇಶ ನುಗಡೋಣಿಯವರು ತಮ್ಮ ಕಥೆಗಳಲ್ಲಿ ರಾಯಚೂರು ಭಾಗದ ಆಡುಮಾತನ್ನು ಬಳಸಿದ್ದಾರೆ. ಪ್ರಾದೇಶಿಕ ಭಾಷೆಯ ವಿಶಿಷ್ಟತೆಗಳನ್ನು ಬಳಸಿಕೊಳ್ಳುವ ಇವರ ಬರಹದಲ್ಲಿ ನಿರೂಪಣೆಯ ಭಾಷೆಗೂ ಸಮುದಾಯಗಳ ಸಂಭಾಷಣೆಯಲ್ಲಿನ ಭಾಷೆಗೂ ಹೆಚ್ಚು ವ್ಯತ್ಯಾಸವಿಲ್ಲ. ಆಡುಮಾತಿನ ಬಳಕೆ ಎಂಬ ಒಂದೇ ಮಾದರಿಗೆ ಅಂಟಿಕೊಂಡಿರುವ ಕಥನದ ರೀತಿ ಇವರಲ್ಲಿಲ್ಲ. ಸಮಾಜದಲ್ಲಿರುವ ಭಾಷಿಕ ವೈವಿಧ್ಯತೆಗಳನ್ನು ವ್ಯಕ್ತಿ ಹಾಗೂ ಸಂದರ್ಭಕ್ಕೆ ಅನುಗುಣವಾಗಿ ಬಳಸಿದ್ದಾರೆ. ಆಡುಮಾತಿನಲ್ಲಿ ಉಂಟಾದ ಬದಲಾವಣೆಗಳು ಸಾಮಾಜಿಕವಾಗಿ ಉಂಟಾದ ಬದಲಾವಣೆಗಳಿಗೆ ಪೂರಕವಾಗಿಯೇ ಬಳಕೆಯಾಗುತ್ತವೆ. ಭಾಷಿಕ ಸ್ಥಿತ್ಯಂತರಗಳನ್ನು ಕಟ್ಟಿಕೊಡುವಲ್ಲಿ ಇವರ ಕಥೆಗಳು ಯಶಸ್ವಿಯಾಗುವುದು ಸಹಜತೆಯ ಕಾರಣಕ್ಕೆ. ಭಾಷಿಕ ಸ್ಥಿತ್ಯಂತರಗಳನ್ನು ಸಮಾಜದಲ್ಲಿ ಗುರುತಿಸುವುದಲ್ಲದೆ ಅವುಗಳನ್ನು ಸಹಜವಾಗಿ ಕಥನದ ಭಾಷೆಗೆ ಇಳಿಸಿರುವುದು ಇವರ ಕಥೆಗಳಲ್ಲಿ ತಿಳಿದುಬರುತ್ತದೆ. "ಕಥೆಗಳಲ್ಲಿ ಬಳಸುವ ಭಾಷೆ ಯಾವುದಿರಬೇಕು? ಈ ಪ್ರಶ್ನೆ ನನ್ನದಲ್ಲ. ನನಗೆ ಇದು ಎದುರಾಗಿಯೂ ಇಲ್ಲ. ಕಥೆ ಓದುವ ಕಥೆಗಾರರು ಆಗಾಗ ನನ್ನನ್ನು ಕೇಳುತ್ತಾರೆ. ನಾನು ನನ್ನ ಕಥೆಗೆ ಯಾವ ಭಾಷೆಯನ್ನು ಬಳಸಬೇಕೆಂದು ಯೋಚಿಸುವುದಿಲ್ಲ. ಅಂದರೆ ಗ್ರಾಂಥಿಕ, ಆಡುನುಡಿ, ಹಳ್ಳಿಗಾಡಿನ ಮಾತಿನ ಶೈಲಿ ಮುಂತಾದ ಯಾವುದನ್ನು ಯಾವ ಕಥೆಗೆ ಬಳಸಬೇಕೆಂದು ನಾನು ಪೂರ್ವಭಾವಿಯಾಗಿ ಯೋಚಿಸುವುದಿಲ್ಲ. 'ಹಳ್ಳಿಗಾಡಿನ (ಡಯಲೆಕ್ಟ್) ಭಾಷೆಯಲ್ಲಿ ಯಾಕೆ ಕಥೆ ಬರೆಯುತ್ತೀರಿ'? ಎಂದು ಕೇಳುವವರಿದ್ದಾರೆ. ನಾನು ಬಳಸುವ ಭಾಷೆ ಹಳ್ಳಿಗಾಡಿನದೆ? ಅಥವಾ ಅದು ನನ್ನ ಕನ್ನಡ ಅಲ್ಲವೆ? ಅಂತ ಯೋಚನೆ ಶುರುವಾಗುತ್ತದೆ. ಆಯಾ ಕಥೆಗಾರ ತನ್ನ ಕಥೆಗೆ, ಕಥೆ ಕೇಳುವ ಭಾಷೆಯಲ್ಲಿ ಬರೆಯುತ್ತಾನೆ. ಅಂದರೆ, ಕಥೆಯೇ ಭಾಷೆಯನ್ನು ರೂಪಿಸಿಕೊಳ್ಳುತ್ತದೆ ಎಂದಷ್ಟೇ ಹೇಳಬಲ್ಲೆ" (ಅಮರೇಶ ನುಗಡೋಣಿ; ೨೦೦೭; ಮುನ್ನುಡಿ; ಪುಟ : ೧೨). ಕಥನದ ಭಾಷೆಗೆ ಸಿದ್ಧಮಾದರಿಯ ಚೌಕಟ್ಟೊಂದನ್ನು ಒಪ್ಪಿಸುವ, ಅದರಲ್ಲಿಯೇ ಕತೆಯನ್ನು ಬರೆಯುವ ಮಿತಿಗಳಿಂದ ದೂರವಾದಾಗಲೇ ಸೃಜನಶೀಲತೆ ಕಂಡು ಬರುತ್ತದೆ. ಆದರೆ ಹೀಗೆ ಬರೆಯುವಾಗ ಪ್ರದೇಶವನ್ನು, ಸಮುದಾಯವನ್ನು ಪ್ರತಿನಿಧಿಸಲೇಬೇಕೆನ್ನುವ ಒತ್ತಡದಲ್ಲಿ ಬರೆಯುವುದು ಮುಖ್ಯವಲ್ಲ. ಸಹಜವಾಗಿಯೇ ಕಥೆಯೊಳಗೆ ಈ ಹಿಂದೆ ಶಿಷ್ಟ ಎನ್ನುವ ಕಥನ ಸಾಹಿತ್ಯದ ರೂಪ ಹೇಗೆ ಕಂಡುಬಂದಿತೊ ಅಷ್ಟೇ ಅನಾಯಸವಾಗಿ ಇದನ್ನು ಮೀರುವ ಇನ್ನೊಂದು ಬಗೆಯ ಬರವಣಿಗೆ ರೂಪ ಕಂಡುಬರುತ್ತಿದೆ. ಕನ್ನಡ ಭಾಷೆಗಿರುವ ವಿಭಿನ್ನ ಬರವಣಿಗೆ ಸಾಧ್ಯತೆಗಳನ್ನು ಇಂತಹ ಕಥನ ಸಾಹಿತ್ಯ ಕಟ್ಟಿಕೊಡುತ್ತದೆ. 'ಮಣ್ಣು ಸೇರಿತು ಬೀಜ', 'ಮುಸ್ಸಂಜೆಯ ಕಥಾನಕಗಳು', 'ತಮಂಧದ ಕೇಡು', 'ಸವಾರಿ' ಕಥಾ ಸಂಕಲನಗಳಲ್ಲಿ ಕತೆಗೆ ಸಹಜವಾಗಿ ಹೊಂದುವ ಭಾಷಿಕ ಪ್ರಯೋಗಗಳಿವೆ.

'ಹೊತ್ತು ಮೂಡುವ ಸಮಯ' (ಅಮರೇಶ ನುಗಡೋಣಿ) ಕತೆಯ ಸನ್ನಿವೇಶವೊಂದರ ನಿರೂಪಣೆ ವಿಶಿಷ್ಟವಾಗಿದೆ. ಅಕ್ಕಮ್ಮ-ಗೌರಮ್ಮರ ಗೆಳೆತನ ಚಿಕ್ಕವಯಸ್ಸಿನಿಂದಲೂ ಇದ್ದದ್ದು "....ಬಡವರ ಮನೆಗೆ

ಬಿದ್ದ ಗೌರಮ್ಮ ಹೊಲ, ಮನೆ ಕೆಲಸಗಳು ಮಾಡಬೇಕಾಗಿತ್ತು. ಮೇಲಾಗಿ ಆರೇಳು ವರ್ಷದಲ್ಲಿ ನಾಕು ಮಕ್ಕಳಾಗಿ ಅವುಗಳ ಪರಾಮರಿಕೆಯಲ್ಲಿ ಸರಿ ಹೋಗಿ ಪುರುಸೊತ್ತು ಸಿಗುತ್ತಿರಲಿಲ್ಲ. ಹೀಗಾಗಿ ಈಗೀಗ ಬರುವುದನ್ನೇ ಬಿಟ್ಟಿದ್ದಳು.

'ಯಾಕಲೇ ಎಂಗಾಗಿದ್ದಿ.... ಕೂಸ ಸಿಗದಂಗ!'

'ಇಂಗೀನಿ ನೋಡವ್ವ! ನೀನು?'

'ನನಗೇನಾಗ್ಯಾದ ದಾಡಿ' ಎಂದ ಅಕ್ಕಮ್ಮ ಕೊಂಕಳದಲ್ಲಿ ಕೂಸನ್ನು ಕರೆದು ಎತ್ತಿಕೊಂಡಳು. ಅದು ಬೇಕೋ ಬೇಡೋ ಬಂದು ಮತ್ತೆ ತಾಯಿ ಕಡೆ ಸಾಗರ ಬಿತ್ತು.

'ಏನಲೇ ಚಿನಾಲಿ, ನಿನ್ನೆಸುರು'?

'ಸಾಂತಮ್ಮಂತ ಕರಿತೀವಿ'

'ಸಾಕು ಸಾಂತಮ್ಮಂತೇನು?'

ತಲೆಮ್ಯಾಲಿದ್ದ ತುಂಬಿದ ಕೊಡ ಜೋಲಿ ಹೋಯಿತು. ಆ ಕೂಸೂ ಸಿಟಿ ಸಿಟಿದು ಅಳತೊಡಗಿತ್ತು. 'ನಡೆವ್ವ ಬಿದ್ದಿಗಿ....! ಸೊರಗಿ ಎಂಗಾಗಿದ್ದಿ ಕೋಡಿ.....! ಬಾ ಮನೆ ಕಡೆ. ಇಲ್ಲಂದ್ರ ಕೊಡ ಇಳಿಸಿ ಕಣಕ್ಕ ಬಾ. ಕೂಡಿಲ್ಲ ಬಾಳದಿನಾಯ್ತು ಮಾತಾಡಮು' (ಅಮರೇಶ ನುಗಡೋಣಿ; ೧೯೯೧; ಪುಟ : ೩೯-೪೦). ನಿರೂಪಣೆಯಲ್ಲಿ ಶಿಷ್ಟ ಭಾಷೆಯ ಪ್ರಯೋಗ ಅಷ್ಟಾಗಿ ಕಾಣದೆ ಆಡುಮಾತಿನ ಸಹಜ ಶೈಲಿ ಕಂಡು ಬರುತ್ತದೆ. ಇವರ 'ದಾರಿ ಮೂಡಿಸುವ ಹೆಜ್ಜೆಗಳು' (ಅಮರೇಶ ನುಗಡೋಣಿ) ಕತೆಯಲ್ಲಿ ಆಂಧ್ರದ ಬಿಜೆವಾಡದ ವ್ಯಕ್ತಿಯನ್ನು ಪ್ರತಿನಿಧಿಸಲು ತೆಲುಗು ಮಿಶ್ರಿತ ಕನ್ನಡವನ್ನು ಬಳಸುತ್ತಾರೆ. ಕತೆಯಲ್ಲಿ ತಿಮ್ಮಕ್ಕ ತನ್ನ ಎಮ್ಮೆಗೆ ಗರ್ಭ ಕಟ್ಟಿಸಲೆಂದು ಬಿಜೆವಾಡದ ಆಂಧ್ರದವರ ಮನೆಗೆ ಕರೆದುಕೊಂಡು ಹೋಗುತ್ತಾಳೆ. ಅವರ ಮನೆಯ ಕ್ವಾಣ ತನ್ನ ಎಮ್ಮೆಯೊಂದಿಗೆ ರಾಸಲೀಲೆಯಲ್ಲಿ ತೊಡಗಿರುವುದನ್ನು ನೋಡುತ್ತ ನಿಂತಿದ್ದ ತಿಮ್ಮಕ್ಕನನ್ನು ಕಂಡು ಬಿಜೆವಾಡದವನು, 'ಛೀ ಅದೇನು ಕೆಲಸವ್ವ. ಕೊಂಚಮು ಸರುದು ಹಿಂದಕ ನಿಂತಗವ್ವ' ಎನ್ನುತ್ತಾನೆ. ತೆಲಗು ಭಾಷೆಗೆ ಕನ್ನಡ ಭಾಷೆಯ ಮೂಲಕ ಸಂವಹನ ಸಾಧ್ಯತೆ ಒದಗಿಸಿರುವುದನ್ನು ಈ ನಿದರ್ಶನ ತಿಳಿಸುತ್ತದೆ. ಆಧುನಿಕ ಬದುಕಿನ ಇಂದಿನ ದಿನಗಳಲ್ಲಿ ನಡೆಯಂತೆ ನುಡಿಯಲ್ಲಿಯೂ ಪರಕೀಯತೆ ಬೆರಿಕೆಯಾಗುತ್ತಿರುವುದನ್ನು ಇವರ ಕತೆಗಳ ಭಾಷೆ ತಿಳಿಸುವುದು. ಕನ್ನಡದ ಆಡುಮಾತಿನ ಲಯಕ್ಕೆ ಹೊಂದಿಕೆಯಾಗಿಯೇ ಇಂಗ್ಲಿಷ್ ಪದಗಳು ಬಳಕೆಯಾಗಿರುವುದು ಇವರ ಕತೆಗಳಲ್ಲಿ ಕಂಡು ಬರುತ್ತದೆ. 'ಏ ದಿಲ್ ಮಾಂಗೇ ಮೋರ್' ಕತೆಯಲ್ಲಿ ಶಾಂತಿಯನ್ನು ಮದುವೆಯಾಗ ಬೇಕಿದ್ದ ವಿರೂಪಾಕ್ಷಿ ಗಿರೀಶನ ಗ್ಯಾಂಗಿನ ಜತೆ ಹುಸೇನವ್ವನ ಹೋಟೆಲ್ ಒಳಗೆ ನುಗ್ಗುತ್ತಾನೆ. ಒಳಗೆ ಇದ್ದ ಶಾಂತಿ, ಆಕೆಯನ್ನು ಪ್ರೀತಿಸುತ್ತಿದ್ದ ಗೋವಿಂದ, ಖಾಜಾವಲಿ, ಹುಸೇನವ್ವ ಇವರ ದಾಳಿಯಿಂದ ಬೆಚ್ಚಿ ಒಬ್ಬರಿಗೊಬ್ಬರು ಮಾತು ಪ್ರಾರಂಭಿಸುತ್ತಾರೆ.

'ಗಿರೀಶ್, ಸಾಂತಿ ಎಲ್ಲೂ ಓಡಿ ಹೋಗಿಲ್ಲ. ಹುಸೇನವ್ವನ ಗುಡಿಸಲಲ್ಲೇ ಇದ್ದಾಳ' ಖಾಜಾವಲಿ ಸಮಾಧಾನದಿಂದ ಹೇಳಿದ.

'ಸಾಂತಿ ಗೋವಿಂದನ್ನ ಲವ್ ಮಾಡ್ತಾಳ! ಬೇಕಾದ್ರೆಆಕಿನ್ನೇ ಕೇಳ್ರೀ?' ನರಸಪ್ಪ ಗುಡಗಿದ.

'ನನ್ಗ ಗೋವಿಂದ ಬೇಕು! ನೀವ್ಯಾರು ಕೇಳೋರು? ನಮ್ಮ ಅಪ್ಪ-ಅಮ್ಮನಿಗೆ ನಾನು ಹೇಳ್ತೀನಿ!' ಸಾಂತಿ ಸಿಟ್ಟನಿಂದ ಚೀರಿದಳು.

'ನಾಚ್ಕೇ ಬರ್ತಾದೇನು? ಜಾತಿ, ಕುಲ ನೋಡ್ದೆ!' ವಿರೂಪಾಕ್ಷಿ ಅಸಹಾಯಕನಾಗಿ ಒದರಿದ.

'ಸಾಂತಿ, ನೀನು ಅದ್ಹೆಂಗೆ ಗೋವಿಂದನ ಜತೆ ಮ್ಯಾರೇಜ್ ಆಗ್ತಿದ್ದಿ? ನಾವು ನೋಡ್ತೀವಿ!' (ಅಮರೇಶ ನುಗಡೋಣಿ; ೨೦೦೭; ಪುಟ : ೫೯). ಕತೆಯ ಆಶಯಕ್ಕೆ ದಕ್ಕುವ ಹಾಗೆ ಭಾಷೆಯನ್ನು ವಿಭಿನ್ನ ರೀತಿಯಲ್ಲಿ ಬಳಸಿಕೊಂಡಿದ್ದಾರೆ. ಇವರ ನಿರೂಪಣೆಯ ರೀತಿ ಆಡುಮಾತಿನ ವಿಶಿಷ್ಟತೆಯನ್ನು ಇಲ್ಲಿ ಮೈಗೂಡಿಸಿಕೊಂಡಿರುವುದು ಹೊರಗಿನ ಪ್ರೇರಣೆಯಿಂದಲ್ಲ. ಕತೆಗಾರರ ನುಡಿಯನ್ನು ತನ್ನಿಚ್ಛೆಯಂತೆ ಸಾಹಿತ್ಯಕ್ಕೆ ಒಗ್ಗಿಸುವಲ್ಲಿ ಹೊಸ ಪ್ರಯೋಗಗಳು ಸಹಜವಾಗಿಯೇ ಮೂಡುತ್ತವೆ. ವಿಶಿಷ್ಟ ಪ್ರಾದೇಶಿಕ ಭಾಷೆಯನ್ನು ಮುನ್ನೆಲೆಗೆ ತಂದಿಡುವ, ಅದರ ಮೂಲಕವೇ ಕತೆಯ ಆಶಯವನ್ನು ತೆರೆದಿಡುವುದು ಇವರೆಡೂ ಬರವಣಿಗೆಯ ವಿಭಿನ್ನ ಆಯಾಮಗಳೇ ಆಗಿವೆ.

ಕುಂ. ವೀರಭದ್ರಪ್ಪನವರ ಕಥನದ ನಿರೂಪಣೆಯು ಪ್ರಾದೇಶಿಕ ಮಾತಿನ ಶೈಲಿಯನ್ನೇ ಮುನ್ನೆಲೆಗೆ ತರುತ್ತದೆ. ಕತೆಯ ಆಶಯವನ್ನು ವ್ಯಂಗ್ಯದ ಮಾತುಗಳಲ್ಲಿ, ಹಾಸ್ಯದ ಸನ್ನಿವೇಶಗಳಲ್ಲಿ ಕಟ್ಟಿಕೊಡುವ ಇವರು ದುಡಿಯುವ ವರ್ಗದ ಬದುಕಿನ ನೋವುಗಳನ್ನೇ ಪ್ರಧಾನವಾಗಿ ಗಮನಿಸುತ್ತಾರೆ. ತೆಲುಗು ಮಿಶ್ರಿತ ಕನ್ನಡದ ವಿಶಿಷ್ಟ ಮಾತಿನ ರೀತಿ ಬಳ್ಳಾರಿ ಸುತ್ತಮುತ್ತಲಿನ ಪ್ರದೇಶದಲ್ಲಿ ಕಂಡು ಬರುತ್ತದೆ. ಈ ಭಾಗದ ಭಾಷೆಯನ್ನು ಇವರು ನಿರ್ದಿಷ್ಟ ಸಮುದಾಯವೊಂದು ಅದನ್ನು ಮಾತನಾಡುವ ಶೈಲಿಯಲ್ಲಿಯೇ ಕಟ್ಟಿಕೊಡುತ್ತಾರೆ. "ತನ್ನ ಹಂದಿಗಳಿಗೆ ತಲಾ ಒಂದೊಂದು ಹೆಸರಿಟ್ಟಿದ್ದರೆ ಹೆಸರಿನ ಮೂಲಕ ಗುಣಗಾನ ಮಾಡುತ್ತಾ ಅಳಬಹುದಿತ್ತು ಎಂದು ಪಶ್ಚಾತಾಪ ಪಟ್ಟವನಂತೆ ಕ್ಷಣ ಹೊತ್ತು ಮುಖ ಮಾಡಿದ್ದ ಎಲುಗನನ್ನು ಕಲ್ಲಗ ಒತ್ತಾಯದಿಂದ ಗಡಂಗಿಗೆ ಕರೆದೊಯ್ದು ಎರಡು ಗಳಾಸು ಕುಡಿಸಿ "ಸುಮ್ನಿರು ಪರಪಂಚ ದೊಡ್ಡದೈತಿ...." ಎಂದುಕು ಎಡುಸ್ತಾವ್ರ ಊರುಕುಂಡು ಎಂದು ಹೇಳಿ ಸುಮ್ಮನಿರಿಸಿದನು (ಕುಂ. ವೀರಭದ್ರಪ್ಪ; ೨೦೦೪; ಪುಟ : ೧೯). 'ದೇವರ ಹೆಣ; ಎಲುಗನೆಂಬ ಕೊರಚನು 'ಚೌಡನೆಂಬ ಹಂದಿಯೂ', 'ಕುಬುಸ', ಕುಡಾಲಕಾಡು ಸೋಸಿದ, 'ಬರಿಗೊಡಗಳು' ಇತ್ಯಾದಿ ಕತೆಗಳಲ್ಲಿ ಸಮುದಾಯವೊಂದು ರೂಢಿಸಿಕೊಂಡು ಬಂದ ಆಡುಮಾತಿನ ರೀತಿಯನ್ನು ಮುನ್ನೆಲೆಗೆ ತರುತ್ತಾರೆ. ನಿರೂಪಣೆಯಲ್ಲಿ ಕೆಲ ಶಿಷ್ಟಪದಗಳ ಬಳಕೆಯನ್ನು ಯಥಾವತ್ತಾಗಿ ತಂದರೂ ಆಡುಮಾತಿನ ಬಳಕೆಯೇ ಹೆಚ್ಚಾಗಿ ಕಂಡುಬರುತ್ತದೆ. "ಕಮತದಾಗ ಗೌಡರು ಇರಲಿಲ್ಲ. ಆದ್ದರಿಂದ ಆಳುಗಳೆಲ್ಲ ಜೋರು ಮಾತಿಗೆ ಹಚ್ಚಿದರು. ಅವನ ಹೆಂಡತಿ ಹಂಗ, ಇವನ ಮಗಳು ಹಿಂಗಂತ. ಧಂಧಕ್ಕಿಯಲ್ಲಿದ್ದ ಪರತ ಎವ್ವ...

ನಮ್ಮವ್ವ.... ಜಾಣೆಲ್ಲಾ.... ಹಂಗ ಸ್ವಲ್ಪ ಕಾಲೆತ್ತಿ..... ಹ್ಹಾ ಅಂಗೆ ಅಂತ ಎಮ್ಮೆಗಳನ್ನು ಮತ್ತು ಬಸಣ್ಣ.... ಸ್ವಲುಪ ಎದ್ದೇಳು..... ಅಡ್ಯಾಗ ಸೆಗಣಿ ಐತಿ, ಬಳಿತೀನಿ.... ಎದ್ದೇಳು ಕಲಕಲ ಹ್ಹೆ.... ಉಹ್ಹು..... ಎಂದು ಎತ್ತುಗಳನ್ನೂ ರಮಿಸುತ್ತ ಪ್ರೀತಿಯಿಂದ ಮಾತಾಡುತ್ತ ಸೆಗಣಿ ಕಸ ಬಳಿಯುತ್ತಿದ್ದನು" (ಕುಂ. ವೀರಭದ್ರಪ್ಪ; ಕಪ್ಪು ನೆಲದಲ್ಲೊಂದು ಕೆಂಪುಕಥೆ; ಪುಟ : ೯೭). ಪರತನು ದನಗಳ ಬಗ್ಗೆ ಹೊಂದಿದ್ದಷ್ಟೇ ಶ್ರದ್ಧೆ-ಭಕ್ತಿಯನ್ನು ಗೌಡನ ಮನೆಯವರ ಬಗ್ಗೆ ಹೊಂದಿದ್ದ. ಆ ಮನೆಯವರ ಬಗ್ಗೆ, ಆತನ ಸೇವೆಯ ಬಗ್ಗೆ ಒಟ್ಟಿಗೆ ತಿಳಿಸುವ ಇಲ್ಲಿನ ಮಾತುಗಳಲ್ಲಿ ಕೃತಜ್ಞತೆಯಿಲ್ಲದ ಮನುಷ್ಯರ ವಿಡಂಬನೆಯೆ ಇದೆ. ಇದರ ಬಳಕೆ ಆಶಯಕ್ಕೆ ಪೂರಕವಾಗಿದೆ. ಪ್ರಾಣಿ ಜಗತ್ತಿನಲ್ಲಿ, ಮನುಷ್ಯ ಬದುಕಲ್ಲಿ ಕಂಡುಬರುವ ಸಹ್ಯ, ಅಸಹ್ಯವೆಂಬ ಮಾತು ವರ್ತನೆಗಳೆಲ್ಲವನ್ನೂ ಭೇದವಿಲ್ಲದೆ ಕಥನ ಸಾಹಿತ್ಯದಲ್ಲಿ ತರುತ್ತಾರೆ. ಸಂದರ್ಭಕ್ಕೆ ತಕ್ಕಂತೆ ಶಾಬ್ದಿಕ ಜಗತ್ತಿನ ಅರ್ಥಗಳನ್ನು ವಿಭಿನ್ನ ರೀತಿಯಲ್ಲಿ ಒಗ್ಗಿಸಿಕೊಳ್ಳುವುದು ಕಥನಕ್ಕಿರುವ ಪ್ರಾಯೋಗಿಕ ಶಕ್ತಿಯನ್ನೇ ತಿಳಿಸುತ್ತದೆ. 'ಭಾಗೀರಥಿ ಮೇಡಂ', 'ಇನ್ನಾದರೂ ಸಾಯಬೇಕು', 'ಮೀಸೆಯುಳ್ಳ ಮೀನಾಕ್ಷಿ ಎಂಬ ಬೆಕ್ಕು' ಕತೆಗಳಲ್ಲಿ ಶಿಷ್ಟ ಭಾಷೆಯ ನಿರೂಪಣೆ ಕಂಡುಬರುತ್ತದೆ. ಇಂಗ್ಲೀಷ್ ಭಾಷೆಯ ಪದಗಳನ್ನು ಕಥನ ಸಾಹಿತ್ಯದಲ್ಲಿ ತರುವ ರೀತಿ ಎರಡು ನೆಲೆಗಳಲ್ಲಿ ಕಂಡುಬರುತ್ತದೆ. ಇಂಗ್ಲೀಷ್ ಪದಗಳನ್ನು ಸಮುದಾಯವೊಂದು ತನ್ನದೇ ಆದ ಆಡುಮಾತಿನ ಉಚ್ಚರಣೆಗೆ ಹೊಂದಿಸಿಕೊಂಡು ಬಳಸುವುದು ಒಂದು ನೆಲೆಯಾದರೆ ಇನ್ನೊಂದು ಇಂಗ್ಲೀಷ್ ಪದಗಳ ನೇರ ಬಳಕೆ ಕಂಡು ಬರುತ್ತದೆ. "ಹಾಗೆ ದವಡೆಯಲ್ಲಿ ತೊಂಬಲದುಂಡೆಯನ್ನು ಪ್ರತಿಷ್ಠಾಪಿಸಿಕೊಂಡು ಅಲಲಾ ನೆಟ್ಕಲ್ಲು.... ಸೆಕ್ಕಾರಿ ಸೆಂಬ್ಳ, ತಿಮ್ತಿದಿಯಾ ಎಂದು ಮೇಲುಮಾತಿಗೆ ಉದ್ಗರಿಸುತ್ತಿದ್ದ ಪಲಾನ ಮುದುಕಿಯನ್ನೂ ಮಾತಾಡಿಸಿಕೊಂಡು ಹೋಗುತ್ತಿದ್ದುದು, ಅದರಿಂದ ಪ್ರೇರೇಪಿತರಾಗಿ ತಂತಮ್ಮ ಕರುಳ ಕುಡಿಗಳನ್ನು ಇಸ್ಕೂಲಿಗೆ ಕಳಿಸಬೇಕೆಂದು ಯೋಚಿಸುತ್ತಿದ್ದುದು, ಇವೆಲ್ಲವೂ ಆ ಕ್ಷಣ ಮಿ. ವಡವಟ್‌ನ ಅರಿವಿಗೆ ನಿಲುಕಲಿಲ್ಲ" (ಕುಂ. ವೀರಭದ್ರಪ್ಪ; ೨೦೦೪; ಪುಟ: ೨೯೧). ಸಮುದಾಯವೊಂದರ ಅಶಿಕ್ಷಿತ ಜನರ ಮಾತಲ್ಲಿ ಸ್ಕೂಲ್ - ಇಸ್ಕೂಲ್ ಆಗಿ ಬಳಕೆಗೊಳ್ಳುತ್ತಿರುವುದು ಇಲ್ಲಿ ತಿಳಿದು ಬರುತ್ತದೆ. ಶಿಕ್ಷಿತರಾದವರು ಮಾತನಾಡುವ ಅಥವಾ ಬಳಸುವ ಇಂಗ್ಲೀಷ್ ಭಾಷೆಗೂ ಕನ್ನಡದ ದಾಟಿಯೇ ಸೇರಿರುವುದಕ್ಕೆ ಇವರ ಕಥೆಗಳಲ್ಲಿ ನಿದರ್ಶನಗಳಿವೆ. 'ಕೆಂಡದ ಮಳೆ ಕರೆವಲ್ಲಿ ಉದಕವಾಗಿದ್ದವರ ಕಥೆ' (ಕುಂ. ವೀರಭದ್ರಪ್ಪ) ಎಂಬ ಕಥೆಯಲ್ಲಿ ಶಿಕ್ಷಿತನಾಗಿದ್ದ ಪೀರಣ್ಣ ಪಂಚಾಯಿತಿಯವರೆದುರು ಮಾತನಾಡುತ್ತಾ ತನ್ನ ಅಭಿಪ್ರಾಯ ತಿಳಿಸುವ ಸಂದರ್ಭದಲ್ಲಿ "ನಾವು ವೆರ್‍ರಿ ಪೂರು.... ನಮ್ಗೆ ಇಂಥ ಶಿಕ್ಷೆ ವಿಧಿಸಬೇಡ್ರಿ.....ನೀವೇ ನಮ್ಗೆ ಫಾದರ್‍ರೂ... ಮದರ್‍ರೂ..." ಎಂದು ಮತ್ತೇನನ್ನೋ ಹೇಳುತ್ತಿದ್ದ ಪೀರಣ್ಣನ ಮಾತು ಕೇಳಲು ಅಲ್ಲಿ ಯಾರೂ ತಯಾರಿರಲಿಲ್ಲ" (ಕುಂ. ವೀರಭದ್ರಪ್ಪ; ೨೦೦೪; ಪುಟ : ೧೨೪). ಇಂಗ್ಲೀಷ್ ಪದಗಳು ಕನ್ನಡದ ಮಾತಿನ ದಾಟಿಗೆ ಅನುಗುಣವಾಗಿ ಬಳಕೆಯಾಗುತ್ತಿರುವುದು ಇಲ್ಲಿ ಕಂಡು ಬರುತ್ತದೆ. ಉನ್ನತ ಹುದ್ದೆಯ ಜನರಲ್ಲಿ ಇಂಗ್ಲೀಷ್ ಭಾಷೆಯ ಪದಗಳು ಯಾವ ಬದಲಾವಣೆಗಳಿಲ್ಲದೆ ನೇರವಾಗಿ ಬಳಕೆಯಾಗುವುದು ಕಂಡುಬರುತ್ತದೆ.

ಕನ್ನಡ ಭಾಷೆಯ ಬಳಕೆಗೆ ಸಂಬಂಧಿಸಿದಂತೆ ಹೊಸ ಪ್ರಯೋಗಕ್ಕಿಳಿಯುವ ಇವರ ಬರವಣಿಗೆ ಜನರಾಡುವ ಮಾತಿನಲ್ಲಿ ಶಿಷ್ಟರೂಪದ ಕನ್ನಡದ ಕಠಿಣಪದಗಳು ಉಚ್ಚರಣೆಯ ಸೌಲಭ್ಯಕ್ಕಾಗಿ ಪಡೆಯುವ ವಿಭಿನ್ನ ರೂಪಗಳನ್ನು ತಿಳಿಸುತ್ತದೆ. "ಕುಲಕರುಣಿ ಗೋಡ ಇಬ್ರೂ ತನಗೆ ಮಾಡಿರೋ ಅನ್ಯಯಾನ ಸರಕಾರದೋರಿಗೆ ತಿಳಿಸೇ ತೀರಬೇಕು. ತಕ್ಕ ಶಾಸ್ತೀ ಮಾಡಿಸಬೇಕು, ತಾನು ಎಲ್ಡೆಕರೆ ಹೊಲದ ಮಾಲಿಕನಾಗಿ ಏತೀರಬೇಕೆಂದು ಪರತಗೋಡನ ಮ್ಯಾಲೆ ಮೊದಲಿನಿಂದಲೂ ಹಲ್ಲು ಮಸೆಯುತ್ತಿದ್ದ" (ಕುಂ. ವೀರಭದ್ರಪ್ಪ; ೨೦೦೪; ಪುಟ : ೧೦೩). ಕೇವಲ ಜನರಾಡುವ ಮಾತಿನಲ್ಲಿ ಅಷ್ಟೇ ಅಲ್ಲ ನಿರೂಪಣೆಯಲ್ಲಿಯೂ ಉಚ್ಚರಣೆಗೆ ಅನುಗುಣವಾಗಿ ಕಠಿಣ ಪದಗಳನ್ನು, ದೀರ್ಘಸ್ವರಗಳನ್ನು, ರೂಢಿಯಲ್ಲಿದ್ದ ಬರವಣಿಗೆ ರೂಪವನ್ನು ಬಿಟ್ಟು ಭಿನ್ನವಾಗಿಯೇ ಬರೆಯುತ್ತಾರೆ. 'ಅರಮನೆ' ಕಾದಂಬರಿಯಲ್ಲಿ ಕತೆಗಾರನ ನಿರೂಪಣೆ ಹಾಗೂ ಪಾತ್ರಗಳ ಸಂಭಾಷಣೆ ಇದಕ್ಕೆ ನಿದರ್ಶನಗಳಾಗಿವೆ.

"ತಾಸುಗಳ ಪರ್ಯಂತರ ವಂದರ ಮ್ಯಾಲೊಂದು ಪ್ರಸ್ನೆಗಳನು ಹಾಕಿ ಯಿಚಾರಿಸಿದ ನಂತರ ಜೊನ್ನಗಿರಿಯ ರಾಜನಾದ ಕದಿರೆಪ್ಪನಾಯಕನು ಮದ್ದಿಕೇರಿಯ ಸಂತರಸ್ತರನ್ನು ತನ್ನ ಸಯ್ನಕ್ಕೆ ಸೇರಿ ಕೊಳ್ಳುತ್ತಿರುವಾಗ್ಗೆ....

ಯಿತ್ತ ಕುದುರೆಡುವು ಪಟ್ಟಣದ ಅರಮನೇಲಿದ್ದ ರಾಜಮಾತೆ ಭಯ್ರಮಾಂಬೆಯ ಕಳುವಿದ್ದ ವಂದೆಲ್ಡು ಮಂದಿ ಸಯ್ನಿಕರು ಥಳಗೇರಿಯಿಂದ ಹೊತ್ತು ತಂದ ಯಿದ್ಯಾಮಾನಗಳನ್ನು ಕಿವಿಯಾರೆ ಕೇಳಿ ತಿಳಿದು ಭ್ರಮಾಧೀನಳಾಗಿ ರಟ್ಟೇಲಿರದಿದ್ದ ರವುಸವನ್ನು ವಡಲೊಳಗೆ ತಂದುಕೊಂಡು "ಯಲವೋ... ವೋಬಯ್ಯನೇ.... ರಾಜಾಜ್ಞೆಯನ್ನು ದಿಕ್ಕರಿಸಿದೆಯಾ... ಮೂರು ತಲೆಮಾರು ದುಡಿದರೂ ತೀರದಪ್ಪಿರೋ ಸಾಲದ ರುಣವನ್ನು ಮರೆತೆಯಾ? ನಿನ್ನ ಯಕಃಶ್ಚಿತ್ ಮಯ್ಯೊಳಗೆ ಸಾಂಬವಿ ಹೊಕ್ಕೊಂಡಿರುವಳೆಂದು ಕಪಟ ನಾಟಕವನ್ನಾರಂಭಿಸಿರುವೆಯಾ.... ನಿನಗೆ ತಕ್ಕ ಶಾಸ್ತಿ ಮಾಡಿಸುತ್ತೇನೆ ನೋಡುತ್ತಿರು....ಮತ್ತೆ ನಿನ ಕಯ್ಲಿ ಪಿಕದಾನಿ ಹಿಡಿಸದಿದ್ದರೆ ನಾನು ರಾಜ ಮಾತೆಯೇ ಅಲ್ಲ"ಯಂದು ಮನದೊಳಗೆ ಸಪಥ ಮಾಡುತ ಹೊರಗಡೆ ಕೇಳಿಸುವಂತೆ "ಹೊಹೋಯ್ ಕಾಟಯ್ಯೋ"ಯಂದು ತನ್ನ ಸವತಿ ಮಗನನ್ನು ಕೂಗಿದ್ದಾಗ್ಗೆ.... (ಕುಂ. ವೀರಭದ್ರಪ್ಪ; ೨೦೦೫; ಪುಟ : ೨೩) ಎಂಬ ನಿರೂಪಣೆ ಹಾಗೂ ಸಂಭಾಷಣೆಯಲ್ಲಿ ಪದಗಳ ರೂಪ ಸಾಹಿತ್ಯಿಕವಾಗಿ ಈ ಹಿಂದಿನಿಂದಲೂ ನಡೆದು ಬಂದಿರುವ ಶಿಷ್ಟರೂಪದ, ಗ್ರಾಂಥಿಕ ರೂಪದ ಪದಪ್ರಯೋಗವನ್ನು ಮೀರಿದೆ. ಈ ರೀತಿಯ ಮೀರುವಿಕೆ ಪ್ರಜ್ಞಾಪೂರ್ವಕವಾಗಿಯೇ ಕಥನ ಸಾಹಿತ್ಯದಲ್ಲಿ ಕಂಡು ಬರುತ್ತದೆ. ಇಲ್ಲಿ ಭಾಷಿಕವಾಗಿ ಹೊಸ ಬರವಣಿಗೆಯನ್ನು ಸೃಷ್ಟಿಸಲಾಗಿದೆ ಮತ್ತು ಇದುವರೆಗಿನ ಭಾಷಿಕ ರೂಪಕ್ಕೆ ಸಿಕ್ಕ ಮಾನ್ಯತೆಗಳು ಇಂತಹ ಹೊಸ ಪ್ರಯೋಗಗಳಿಗೆ ಸಿಗಬೇಕೆಂಬ ಇವರ ನಿಲುವು ಇಲ್ಲಿ ಸ್ಪಷ್ಟವಾಗಿ ಕಂಡು ಬರುತ್ತದೆ. 'ಅರಮನೆ' ಕಾದಂಬರಿಯ ನಿರೂಪಣೆಗೆ ಸಂಬಂಧಿಸಿದಂತೆ ಸಿ.ಎನ್. ರಾಮಚಂದ್ರನ್‌ರವರು ಗುರುತಿಸುವ ಅಂಶಗಳು ಭಾಷಿಕವಾಗಿ ಗಮನಿಸಲೇಬೇಕಾದ ಅಂಶಗಳಾಗಿವೆ.

"ಇಲ್ಲಿ ನಾವು ಮುಖ್ಯವಾಗಿ ಗಮನಿಸಬೇಕಾದ ಸಂಗತಿಯೆಂದರೆ ಇವುಗಳ ನಿರೂಪಣಾ ಧಾಟಿ ದೇವದೇವತೆಗಳ ಮಹತ್ಕಾರ್ಯಗಳಾಗಲಿ ಅವರ ನಡುವಿನ ಕ್ಷುಲ್ಲಕ ಕಲಹಗಳಾಗಲಿ, ಅತಿ ಮಾನವರ

ಸಾಹಸ ಕೃತ್ಯಗಳಾಗಲಿ ಹುಲುಮಾನವರ ಹಾಸ್ಯಾಸ್ಪದ ದೌರ್ಬಲ್ಯಗಳಾಗಲಿ, ಮಾನವ ಜಗತ್ತಿನ ನೋವು-ನಲಿವುಗಳಾಗಲಿ, ಪ್ರಾಣಿ-ಕ್ರಿಮಿಕೀಟಗಳ ಕಷ್ಟ-ಕಾರ್ಪಣ್ಯಗಳಾಗಲಿ, ಒಂದೇ ಸಮಾನ ಧಾಟಿಯಲ್ಲಿ ಈ ಕಾವ್ಯಗಳ ನಿರೂಪಣೆ ಪ್ರಾರಂಭದಿಂದ ಮುಕ್ತಾಯದವರೆಗೂ ಸಾಗುತ್ತದೆ. ವಿಶ್ವಸೃಷ್ಟಿಯಿಂದ ಪ್ರಾರಂಭವಾಗುವ ಈ ಕಾವ್ಯಗಳ ಆಕೃತಿ ಮುಕ್ತವಾಗಿರುತ್ತದೆ; ಪೀಳಿಗೆಯಿಂದ ಪೀಳಿಗೆಗೆ, ಗಾಯಕನಿಂದ ಗಾಯಕನಿಗೆ, ಈ ಕಾವ್ಯಗಳು ಬೆಳೆಯುತ್ತವೆ, ಬದಲಾಗುತ್ತವೆ. ಕುಂ. ವೀರಭದ್ರಪ್ಪ ಅವರ 'ಅರಮನೆ' ಕಾದಂಬರಿಯ ಮಾದರಿ ಈ ಬಗೆಯ ಮೌಖಿಕ ಮಹಾಕಾವ್ಯಗಳು. ಆ ಕಾರಣದಿಂದಲೇ ಅವರು ತಮ್ಮ ಕೃತಿಯನ್ನು "ಐತಿಹಾಸಿಕ, ಪೌರಾಣಿಕ, ಸಾಮಾಜಿಕ ಕಥಾನಕ" ಎಂದು ನಿರ್ದೇಶಿಸುತ್ತಾರೆ (ಕುಂ. ವೀರಭದ್ರಪ್ಪ; ೨೦೦೫; ಪುಟ : viii). ಕಾದಂಬರಿಗೆ ಸಂಬಂಧಿಸಿದ ವಿಷಯ ಇತಿಹಾಸಕ್ಕೆ ಸಂಬಂಧಿಸಿದರೂ ಅದನ್ನು ಕಟ್ಟಿಕೊಡುವಲ್ಲಿ ಕಂಡು ಬರುವ ವಿಭಿನ್ನ ಹಾಗೂ ಹೊಸ ದೃಷ್ಟಿಕೋನಗಳೆಲ್ಲವೂ ಇದರಲ್ಲಿ ಬಳಕೆಗೊಂಡಿವೆ. ಜನ ಬದುಕಿನ ಮೂಲಕ ಇತಿಹಾಸವನ್ನು ಗ್ರಹಿಸುವ ಹಾಗೂ ಪುನರ್‌ರೂಪಿಸುವ ಕಾರ್ಯವನ್ನು ಇಲ್ಲಿನ ಭಾಷಿಕ ಶೈಲಿ ಪೂರ್ಣಗೊಳಿಸಿದೆ.

ಪ್ರಾದೇಶಿಕ ಭಾಷೆಯ ನಿರೂಪಣೆಯನ್ನು ಕತೆಗಾರರು ತಮ್ಮ ಕಥನ ಸಾಹಿತ್ಯದಲ್ಲಿ ತರುವ ರೀತಿಯಲ್ಲಿ ಏಕರೂಪತೆ ಇಲ್ಲ. ಸ್ವತಃ ಕತೆಗಾರನೇ ಕಾಲಘಟ್ಟಕ್ಕೆ ಅನುಗುಣವಾಗಿ ಅಥವಾ ಆಶಯಕ್ಕೆ ಅನುಗುಣವಾಗಿ ನಿರೂಪಣೆಯಲ್ಲಿ ಭಿನ್ನತೆಗಳನ್ನು ತಂದುಕೊಳ್ಳುತ್ತಾನೆ. ಇದೇ ರೀತಿ ಒಂದೇ ಪ್ರದೇಶದ ಕತೆಗಾರರು ಆ ಪ್ರದೇಶದ ವೈವಿಧ್ಯಮಯ ಭಾಷಿಕ ಜಗತ್ತನ್ನು ಪ್ರತಿನಿಧಿಸುತ್ತಾರೆ. ಪ್ರಾದೇಶಿಕ ಭಾಷೆಯ ಬಳಕೆಯನ್ನು ಹೊರತುಪಡಿಸಿಯೂ ಇಲ್ಲಿನ ಕತೆಗಾರರು ಪ್ರಾದೇಶಿಕ ಸಮುದಾಯಗಳ ವಿಶಿಷ್ಟತೆಗಳೆಲ್ಲವನ್ನೂ ತಿಳಿಸುವಲ್ಲಿ ಶಕ್ತರಾಗಿದ್ದಾರೆ. ಭಾಷಿಕವಾಗಿ ಹೊಸ ಪ್ರಯೋಗಗಳ ಸಾಧ್ಯತೆಗಳನ್ನು ಕಂಡುಕೊಂಡಿರುವ ಕತೆಗಾರರು ಇಂತಹ ಆಲೋಚನೆಗಳನ್ನು ಬರವಣಿಗೆಯಲ್ಲಿ ತರುವುದಕ್ಕೆ ಪ್ರೇರಿತರಾಗಿದ್ದು ಇಲ್ಲಿನ ಜನರ ಆಡುಮಾತಿನಿಂದ ಅನ್ಯಭಾಷೆಗಳ ಪ್ರಭಾವದಿಂದ ಕನ್ನಡದ ಭಾಷಿಕ ಜಗತ್ತಿನಲ್ಲಿ ಉಂಟಾದ ಬದಲಾವಣೆ ಗಳನ್ನು ಇಲ್ಲಿನ ಕಥನ ತಿಳಿಸುತ್ತದೆ. ಸಾಮಾಜಿಕ ಬದಲಾವಣೆಗಳನ್ನು ಭಾಷಿಕವಾಗಿಯೇ ಕಟ್ಟಿಕೊಡುವ ಕಥನದ ರೀತಿ ನಿರಂತರತೆಯನ್ನು ಕಾಯ್ದುಕೊಂಡಿದೆ. ತನ್ನದೇ ಆದ ವಿಶಿಷ್ಟತೆಯನ್ನು ಮೈಗೂಡಿಸಿಕೊಂಡಿರುವ ಇಲ್ಲಿನ ಕಥನ ಭಾಷಿಕವಾಗಿ ಪ್ರಧಾನ ನೆಲೆಯ ಗುರುತಿಸುವಿಕೆಯನ್ನು ಪಡೆಯುವುದರಲ್ಲಿ ಹಾಗೂ ಸೃಜನಶೀಲತೆಯನ್ನು ಸಾಧಿಸುವುದರಲ್ಲಿ ಕ್ರಿಯಾಶೀಲವಾಗಿದೆ.

### ೬.೨. ಸಾಹಿತ್ಯ ಮತ್ತು ಪ್ರಾದೇಶಿಕ ಭಾಷೆಯ ವಿಶಿಷ್ಟತೆಗಳು

ಪ್ರಾದೇಶಿಕ ಭಾಷೆಯೆಂಬುದಕ್ಕೆ ಒಂದು ನಿರ್ದಿಷ್ಟ ರೂಪವಿರುವುದಿಲ್ಲ. ವಿಶಿಷ್ಟ ಭಾಷಿಕ ಅಂಶ ಗಳೆಲ್ಲವೂ ಸೇರಿ ಪ್ರಾದೇಶಿಕ ಭಾಷೆಯೊಂದು ರೂಪಗೊಂಡಿರುತ್ತದೆ. ವಿಭಿನ್ನ ಭಾಷಿಕ ವಿಶಿಷ್ಟತೆಗಳನ್ನು ಅಧ್ಯಯನಕ್ಕೆ ಒಳಪಡಿಸುವುದು ಪ್ರಾದೇಶಿಕ ಭಾಷೆಯ ಅಧ್ಯಯನವೇ ಎನಿಸಿಕೊಳ್ಳುತ್ತದೆ. ಕಥನ ಸಾಹಿತ್ಯದಲ್ಲಿ ಪ್ರಾದೇಶಿಕ ಭಾಷೆಯನ್ನು ಅಂದರೆ ಭಾಷಿಕ ವಿಶಿಷ್ಟತೆಗಳನ್ನು ಬಳಸಿಕೊಳ್ಳುವ ರೀತಿಯಲ್ಲಿ ಸೃಜನಶೀಲತೆ

ಕಂಡುಬರುತ್ತದೆ. ಗಾದೆ ಮಾತುಗಳು, ಬೈಯ್ಗುಳಗಳು, ವ್ಯಕ್ತಿನಾಮುಗಳು, ಸಂಬೋಧನೆಗಳು ಎಲ್ಲವೂ ಪ್ರಾದೇಶಿಕ ಭಾಷೆಯ ಅಭಿವ್ಯಕ್ತಿಯ ವಿಭಿನ್ನ ನೆಲೆಗಳು. ಪ್ರಾದೇಶಿಕವಾಗಿ ಕಂಡು ಬರುವ ವಿಭಿನ್ನ ಜನಸಮುದಾಯದ ಸಂವೇದನೆಗಳ ಸೂಕ್ಷ್ಮ ನೆಲೆಗಳನ್ನು ತಿಳಿಸಲು ಭಾಷಿಕ ವಿಶಿಷ್ಟತೆಗಳು ಅಗತ್ಯವಾಗಿವೆ. ಭಾಷಿಕ ವಿಶಿಷ್ಟತೆಗಳ ಮೂಲಕ ಪ್ರಾದೇಶಿಕ ಸಂವೇದನೆಗಳು ಅಭಿವ್ಯಕ್ತಗೊಳ್ಳುವ ರೀತಿ ಈ ಭಾಗದ ಕಥನ ಸಾಹಿತ್ಯದಲ್ಲಿ ಕಂಡು ಬರುತ್ತದೆ. ಪರಸ್ಪರ ಪೂರಕವಾಗಿಯೇ ಕಂಡುಬರುವ ಸಂವೇದನೆಗಳ ಅಭಿವ್ಯಕ್ತಿ ಹಾಗೂ ಭಾಷಿಕ ವಿಶಿಷ್ಟತೆಗಳ ಬಳಕೆಯನ್ನು ಇಲ್ಲಿ ವಿಶ್ಲೇಷಿಸಲಾಗಿದೆ.

ಪ್ರಾದೇಶಿಕ ಭಾಷೆಯನ್ನು ಕಥನ ಸಾಹಿತ್ಯದಲ್ಲಿ ತರುವ ತುರ್ತು ಕೇವಲ ಸೃಜನಶೀಲತೆಯಾಗಿ ಮಾತ್ರವೇ ಗುರುತಿಸುವಂತಹದ್ದಲ್ಲ. ವೈವಿಧ್ಯಮಯ ಪ್ರಾದೇಶಿಕ ಭಾಷೆಗಳನ್ನು ಕಥನದಲ್ಲಿ ತರುವ ಮೂಲಕ ಈ ಪ್ರದೇಶದ ವೈವಿಧ್ಯಮಯ ಜನರ ಆಡುಮಾತನ್ನೇ ಕತೆಗಾರರು ತಿಳಿಸಿದ್ದಾರೆ. ಅನ್ಯಭಾಷೆಗಳ ಪ್ರಭಾವದಲ್ಲಿ ವಿಶಿಷ್ಟಗೊಂಡ ಇಲ್ಲಿನ ಭಾಷೆಯನ್ನು ಕಥನದ ಮುಖ್ಯ ಪರಿಕರವಾಗಿಯೇ ಬಳಸಿಕೊಂಡ ಇಲ್ಲಿನ ಕತೆಗಾರರಿಗೆ ಸೃಜನಶೀಲತೆಯೆಂಬುದು ಕಷ್ಟಪಟ್ಟು ರೂಢಿಸಿಕೊಂಡಿರುವ ಕಲೆಯಲ್ಲ. ಇಲ್ಲಿನ ಕಥೆಗಾರರ ಬರವಣಿಗೆ ಯಲ್ಲಿನ ಸೃಜನಶೀಲತೆಯ ಮುಖ್ಯ ಪ್ರೇರಕ ಶಕ್ತಿ ಜನ ಬದುಕಿನ ಆಡುಮಾತಿನಲ್ಲಿ, ಪ್ರಾದೇಶಿಕ ಜನಪದೀಯ ಅಂಶಗಳಲ್ಲಿದೆ. ಒರಟು, ಅನಾಗರೀಕ ಭಾಷೆಯೆಂಬ ಅವಗಣನೆಯನ್ನು ಹೊತ್ತುಕೊಂಡೆ ಬದುಕಿದ್ದ ಇಲ್ಲಿನ ಆಡುಮಾತು ಸಾಹಿತ್ಯಿಕ ಬರವಣಿಗೆಯಲ್ಲಿ ವಿಶಿಷ್ಟ ಸ್ಥಾನವನ್ನು ಪಡೆಯಲು ಸಾಧ್ಯವಾಗಿರುವುದು ಇಲ್ಲಿನ ಕಥೆಗಾರರಿಂದ. ಆಡುಮಾತಿನ ವಿಶಿಷ್ಟತೆಗಳನ್ನು ಬಳಸದೆಯೂ ಪ್ರಾದೇಶಿಕ ಸಂವೇದನೆಗಳನ್ನು ಕಟ್ಟಿಕೊಡಲು ಶಕ್ತವಾಗಿರುವ ಕತೆಗಾರರು ಈ ಪ್ರದೇಶದಲ್ಲಿ ಕಂಡು ಬರುತ್ತಾರೆ. ಸಾಹಿತ್ಯಿಕ ಬರವಣಿಗೆಯಲ್ಲಿ ಇದುವರೆಗೂ ಮಾನ್ಯತೆ ಪಡೆದುಕೊಂಡಿದ್ದ ಬರವಣಿಗೆಯ ಕ್ರಮದಿಂದ ಇಲ್ಲಿನ ಬರವಣಿಗೆಯನ್ನು ಹೊರಗುಳಿಸಲಾಗಿತ್ತು. ಸಾಹಿತ್ಯಿಕವಾಗಿ ಮಾನ್ಯತೆ ಪಡೆಯುವ ಮೂಲಕ ಕನ್ನಡ ಭಾಷೆಯ ಬರವಣಿಗೆಗೆ ಹೊಸ ಸಾಧ್ಯತೆಗಳನ್ನು ತಿಳಿಸುತ್ತಿರುವ ಈ ಪ್ರದೇಶದ ಭಾಷಿಕ ಸಾಧನೆ ಮಹತ್ವದ್ದಾಗಿದೆ. ಭಾಷಿಕ ವಿಶಿಷ್ಟತೆಗಳನ್ನು ಗುರುತಿಸಿ ರೂಪಕಾತ್ಮಕವಾಗಿ, ವಿಡಂಬನಾತ್ಮವಾಗಿ ಆಶಯ ಗಳನ್ನು ಕಟ್ಟಿಕೊಡಲು ಬಳಸಿಕೊಳ್ಳುವ ರೀತಿ ಕೇವಲ ಭಾಷಿಕ ಪ್ರಾಧಾನ್ಯತೆಯ ಅಂಶವಲ್ಲ. ಭಾಷೆಯನ್ನಾಡುವ ಜನ ಬದುಕಿಗೆ ಈ ಮೂಲಕ ಪ್ರಾಧಾನ್ಯತೆಯನ್ನು ನೀಡುವುದಾಗಿದೆ.

### ಗಾದೆ ಮಾತುಗಳು

ಪ್ರಾದೇಶಿಕ ಭಾಷೆಯ ವೈಶಿಷ್ಟ್ಯಗಳಲ್ಲಿ ಒಂದಾಗುವ ಗಾದೆ ಮಾತುಗಳು ಜನ ಬದುಕಿನ ಅನೇಕ ವಿಷಯಗಳನ್ನು ತಿಳಿಯುವಲ್ಲಿ ದಿಕ್ಸೂಚಿಗಳಂತೆ ಕಾರ್ಯನಿರ್ವಹಿಸುತ್ತವೆ. ಸಾಮಾಜಿಕ ಬದುಕಿಗೆ ಪ್ರತಿಕ್ರಿಯೆ ತೋರುವ ಗಾದೆ ಮಾತುಗಳು ಒಂದು ಸನ್ನಿವೇಶ ತಿಳಿಸುವ ಎಲ್ಲಾ ವಿಷಯವನ್ನು ಸಮಗ್ರವಾಗಿ ಬಿಂಬಿಸುತ್ತವೆ. ಇಂತಹ ಗಾದೆ ಮಾತುಗಳನ್ನು ಸಾಮಾಜಿಕ ಬದುಕಿನ ವಿಷಯ ವಿಶ್ಲೇಷಣೆಗೆ ಪೂರಕವಾಗಿ ಬಳಸಿಕೊಳ್ಳುವ ಕಥನದ ಶೈಲಿ ಜನ ಬದುಕಿಗೆ ಹೆಚ್ಚು ಹತ್ತಿರುವಾಗುವ ನಿರೂಪಣಾ ಕ್ರಮವನ್ನು

ರೂಪಿಸಿಕೊಳ್ಳುತ್ತದೆ. ಹೈದರಾಬಾದ್ ಕರ್ನಾಟಕದ ಕಥನ ಸಾಹಿತ್ಯ ಭಾಷಿಕವಾಗಿ ವಿಶಿಷ್ಟವಾಗುತ್ತಿರುವಲ್ಲಿ ಗಾದೆ ಮಾತುಗಳ ಬಳಕೆಯೂ ಮುಖ್ಯ ಅಂಶವಾಗಿದೆ. ಕಥೆಯ ಆಶಯ, ವ್ಯಕ್ತಿ-ಸಂದರ್ಭಗಳ ಹಿನ್ನೆಲೆಯ ಆಲೋಚನೆಗಳ ಅಭಿವ್ಯಕ್ತಿಗೆ ಗಾದೆ ಮಾತುಗಳನ್ನು ಪೂರಕವಾಗಿ ಬಳಸುತ್ತಿರುವ ರೀತಿ ವಿಶಿಷ್ಟವಾಗಿದೆ. ಈ ವಿಷಯಕ್ಕೆ ಸಂಬಂಧಿಸಿದಂತೆ ಕಥನ ಸಾಹಿತ್ಯದಲ್ಲಿ ಕಂಡುಬರುವ ಗಾದೆ ಮಾತುಗಳನ್ನು ನಿದರ್ಶನ ವಾಗಿರಿಸಿಕೊಂಡೆ ವಿಷಯವನ್ನು ವಿಶ್ಲೇಷಿಸಲಾಗಿದೆ.

"ಆಳೋ ಗಂಡ್ಸಿಗೆ ಸಾವಿರ ಹೆಂಗಸರು". (ಶಾಂತರಸ; ೧೯೯೭; ಪುಟ : ೧೪೨)

'ಬಡೇಸಾಬು ಪುರಾಣ' ಕತೆಯಲ್ಲಿ ಹಳ್ಳಿಗೆ ಬಂದು ನೆಲೆನಿಂತಿದ್ದ ಬಡೇಸಾಬು ರಜಾಕಾರನಾಗಿ ತನ್ನ ದರ್ಪ ನಡೆಸುತ್ತಿದ್ದ. ಬುಡ್ಡಮ್ಮನನ್ನು ಇಟ್ಟುಕೊಂಡಿದ್ದ. ಆತನು ಆಕೆಗೆ ದ್ರೋಹ ಬಗೆದು, ಕೇರಿಯ ನಿಂಗಿಯೊಂದಿಗೆ ಸಾಬು ಸಂಬಂಧ ಇಟ್ಟುಕೊಂಡಿರುವುದನ್ನು ತಿಳಿದ ಬುಡ್ಡಮ್ಮ ಕುಪಿತಳಾಗುತ್ತಾಳೆ. ನಿಂಗಿಯನ್ನು ಹೊಡೆಯುವ ಸಂದರ್ಭದಲ್ಲಿ ಬುಡ್ಡಮ್ಮನನ್ನು ತಡೆಯಲು ಬಂದ ಬಡೇಸಾಬು ರೂಢಿಯಲ್ಲಿರುವ ಈ ಮಾತನ್ನು ಹೇಳುತ್ತಾನೆ. ಇದು ಬಹುಪತ್ನಿತ್ವವನ್ನು ಒಪ್ಪುವ ಮುಸ್ಲಿಂ ಕಾನೂನನ್ನು ಜೊತೆಗೆ ಪುರುಷನ ಅನೈತಿಕ ಸಂಬಂಧಗಳು ಪ್ರಶ್ನಾತೀತವೆಂಬ ಪುರುಷವಾದಿ ಧೋರಣೆಯನ್ನು ತಿಳಿಸುತ್ತದೆ.

"ಇದ್ದುದು ಆಡಿದರೆ ಸಿದ್ಧಯ್ಯಗೆ ಸಿಡ್ಲು ಬಡಿಯಿತು" (ಶಾಂತರಸ; ೧೯೯೭; ಪುಟ : ೩೦೭).

ಮನೆ ಮನೆಗೆ ಹಿಟ್ಟು ಮಾಡಲು ಬರುತ್ತಿದ್ದ ಇರಪಮ್ಮ ಊರಿನ ಸುದ್ದಿ, ಅವರಿವರ ಅನೈತಿಕ ಸಂಬಂಧಗಳ ಸುದ್ದಿ ಎಲ್ಲವನ್ನು ಆಡಿಕೊಳ್ಳುವಂತಹ ವ್ಯಕ್ತಿತ್ವದವಳು. ಅವಳ ಸುದ್ದಿಯೇ ಒಂದು ದಿನ ಬಯಲಿಗೆ ಬಿದ್ದು ಗೌಡನೊಂದಿಗಿನ ಆಕೆಯ ಅನೈತಿಕ ಸಂಬಂಧ ಜನರಿಗೆ ಗೊತ್ತಾಗುತ್ತದೆ. ಇದರಿಂದ ಕಂಪಿತಳಾದ ಇರಪಮ್ಮನ ಸ್ಥಿತಿಯನ್ನು ಈ ಮಾತು ಸಮರ್ಪಕವಾಗಿ ಅರ್ಥೈಸುತ್ತದೆ.

'ತೆನೆ ಬರುವಾಗ ತಲೆ ಹೋಯ್ತು' (ಶಾಂತರಸ; ೧೯೮೮; ಪುಟ : ೪೪) ಸಣ್ಣ ಗೌಡಸಾನಿ ಕಾದಂಬರಿಯಲ್ಲಿ ಪ್ರಾದೇಶಿಕವಾಗಿ ಕಂಡು ಬರುವ ಕೃಷಿ ಪ್ರಾಧಾನ್ಯತೆಯನ್ನು ಇದು ತಿಳಿಸುತ್ತದೆ. ಇನ್ನೇನು ಕೆಲ ತಿಂಗಳಲ್ಲೇ ಬೆಳೆ ಕೈಗೆ ಬರುತ್ತದೆ ಎನ್ನುವ ಸಂದರ್ಭದಲ್ಲಿ ಸಾಮಾನ್ಯ ಕೃಷಿಕರಲ್ಲಿ ಆಹಾರ ಧಾನ್ಯಗಳ ಕೊರತೆ ಕಂಡು ಬರುತ್ತದೆ. ಇಂತಹ ಪರಿಸ್ಥಿತಿಯನ್ನು ಲಾಭ ಪಡೆದ ಜಮೀನ್ದಾರರು ಸಾಮಾನ್ಯ ರೈತರಿಂದ ಹೆಬ್ಬಟ್ಟಿನ ಸಹಿ ಪಡೆದು ಸಾಲದ ರೂಪದಲ್ಲಿ ಕಾಳುಕಡಿ ಕೊಡುತ್ತಾರೆ. ಒಂದಕ್ಕೆರಡು ಲೆಕ್ಕ ಬರೆದುಕೊಂಡು ವಂಚಿಸುವ ಜಮೀನ್ದಾರರ ಮೋಸಕ್ಕೀಡಾಗುವ ಒಕ್ಕಲು ಮಕ್ಕಳ ಪರಿಸ್ಥಿತಿಯನ್ನು ಈ ಮಾತು ತಿಳಿಸುತ್ತದೆ. ಕಾದಂಬರಿಯಲ್ಲಿ ಈ ಮಾತನ್ನು ಗಂಗಪ್ಪನಿಗೆ ಹೋಲಿಸುವ ರೀತಿ ವ್ಯಂಗ್ಯವಾಗಿ ಕಂಡುಬಂದಿದೆ. ರೈತರು ತನ್ನಲ್ಲಿ ಸಾಲಕ್ಕಾಗಿ ಬರುವುದನ್ನು ಕಾದು ಕುಳಿತಿದ್ದ ಗಂಗಪ್ಪ ಈ ಸಂದರ್ಭವನ್ನು ಸಣ್ಣಗೌಡಸಾನಿಯ ವಿರುದ್ಧ ಎಲ್ಲರನ್ನು ಎತ್ತಿಕಟ್ಟಲು ನಿರ್ಧರಿಸಿದ್ದ. ಆದರೆ ಗಂಗಪ್ಪನಂತೆ ವಂಚಿಸದೆ ಯಾವುದೇ ರೀತಿಯ ಹೆಬ್ಬೆಟ್ಟಿನ ಸಹಿ ಇಲ್ಲದೆ ಸಣ್ಣಗೌಡಸಾನಿ ಉಚಿತವಾಗಿ ಎಲ್ಲರಿಗೂ ಕಾಳುಕಡಿ ಹಂಚುತ್ತಿರುವುದು ತಿಳಿದು

ಎಲ್ಲ ರೈತರು ಆಕೆಯೆಡೆಗೆ ಸಾಗುತ್ತಾರೆ. ರೈತರ ಅಸಹಾಯಕ ಪರಿಸ್ಥಿತಿಯನ್ನೇ ಕಾದುಕುಳಿತಿದ್ದ ಗಂಗಪ್ಪನಿಗೆ ಸಣ್ಣಗೌಡಸಾನಿ ಈ ಮೂಲಕ ಸಹಿಸಲಾರದ ಪೆಟ್ಟನ್ನೇ ನೀಡುತ್ತಾಳೆ.

'ಮನೀಗೆದ್ದು ಮಾರಗೆದೀ' (ಜಯತೀರ್ಥರಾಜ ಪುರೋಹಿತ; ೧೯೬೭; ಪುಟ : ೧೧೫) ಹಾಲು-ಜೇನು ಕಾದಂಬರಿಯಲ್ಲಿ ಹಸೀನವ್ವನ ಮಗ ಜಲಾಲ ವಕೀಲ ವೃತ್ತಿಯನ್ನು ಮಾಡಲು ಇಚ್ಛಿಸಿ ವಕೀಲ ಪಾಸ್‌ಮಾಡಲು ಶ್ರಮಪಡುತ್ತಾನೆ. ಇಸ್ಲಾಂ ಧರ್ಮದ ಪರವಾಗಿ ಹೋರಾಡುತ್ತಿದ್ದ ಜಲಾಲನನ್ನು ಕುರಿತು ಜೋಯಿಸರು ಈ ಮಾತು ಹೇಳುತ್ತಾರೆ. ಮೊದಲು ತಾನು ಹುಟ್ಟಿ ಬೆಳೆದ ಮನೆಯಲ್ಲಿ ಪ್ರೀತಿಸಂಪಾದಿಸ ಬೇಕೆಂಬ ಈ ಮಾತು ಮೊದಲು ಹುಟ್ಟಿ ಬೆಳದ ನಾಡಿನ ಉದ್ಧಾರದ ಬಗ್ಗೆ ಯೋಚಿಸಬೇಕು ಎಂಬುದನ್ನು ತಿಳಿಸುತ್ತದೆ. ನಮ್ಮ ಮನೆಯನ್ನು ಗೆಲ್ಲಲಾಗದೆ. ಹೊರಗಿನದನ್ನು ಗೆದ್ದು ನಿಲ್ಲುವ ಸಾಹಸ ಒಂದರ್ಥದಲ್ಲಿ ನಿರರ್ಥಕವೆಂಬುದು ಇಲ್ಲಿ ಸೂಚ್ಯವಾಗಿ ತಿಳಿದುಬರುತ್ತದೆ.

"ಕಲ್ಲಿನಂಥಾ ಹುಡುಗಿ ಇಟ್ಟುಗೊಂಡು ನೆಲ್ಲಕ್ಕಿ ಬಾನಕ್ಕ ಅಳತಾರಾ" (ಜಯತೀರ್ಥ ರಾಜಪುರೋಹಿತ; ೧೯೬೭; ಪುಟ : ೪೯). ಹಾಲು-ಜೇನು ಕಾದಂಬರಿಯಲ್ಲಿ ವೇಶ್ಯಾವೃತ್ತಿಗೆ ಹೆಣ್ಣು ಮಕ್ಕಳನ್ನು ಬಿಡುವಂತೆ ಸೂಚಿಸುವ ಈ ಮಾತುಗಳು ಯೌವ್ವನಕ್ಕೆ ಕಾಲಿಟ್ಟ ಸುಂದರ ಹೆಣ್ಣು ಹಂಪಿಯನ್ನು ಕುರಿತು ಆಕೆಯ ತಾಯಿಗೆ ಓಣಿಯ ಹೆಂಗಸರು ಮೇಲಿನ ಮಾತನ್ನು ಹೇಳುತ್ತಾರೆ. ಚಂದುಳ್ಳ ಯುವತಿಯರಿಂದ ಸಂಪಾದನೆಯು ಚೆನ್ನಾಗಿ ಆಗುವುದರಿಂದ ಸಂಪತ್ತಿಗೇನು ಕಡಿಮೆಯಾಗುವುದಿಲ್ಲ ಎಂಬ ಇಲ್ಲಿನ ಮಾತುಗಳು ಬಸವಿ ಕುಲದಲ್ಲಿ ಹುಟ್ಟಿದ ಹೆಣ್ಣು ಸಂಪಾದನೆಯ ಸಾಧನವಾಗುವುದನ್ನು ತಿಳಿಸುತ್ತವೆ.

"ಊರು ಸಾಕಾಯಿತು ಗೌಡನೂ ಬ್ಯಾಡೆಂದ" (ಜಯತೀರ್ಥ ರಾಜಪುರೋಹಿತ; ೧೯೬೭; ಪುಟ: ೧೨೧) 'ಹಾಲು-ಜೇನು' - ಕಾದಂಬರಿಯಲ್ಲಿ ಕಂಡು ಬರುವ ಬಸವಿ ಹಂಪಿಯ ಬದುಕಿಗೆ ಸಂಬಂಧಿಸಿದಂತೆ ಈ ಮಾತು ವಿಶಿಷ್ಟವಾಗಿದೆ. ಹಂಪಿಯ ಚಲುವಿಕೆಯನ್ನು ಕಂಡು ಅಮೀನ ಸಾಹೇಬ ಆಕೆಯನ್ನು ತನ್ನ ಖಾಯಂ ಸೂಳೆಯನ್ನಾಗಿ ಉಳಿಸಿಕೊಳ್ಳುತ್ತಾನೆ. ಅಮೀನ ಸಾಹೇಬನಿಗೆ ವಯಸ್ಸಾಗುತ್ತಾ ಬಂದಂತೆ ಬೇರೆಡೆಗೆ ಆತನ ವರ್ಗವಾಗುವ ಸುದ್ದಿಯೂ ಕೇಳಿ ಬಂತು. ಹಂಪಿಗೂ ಆತನ ಸೆರೆಯಾಳಾಗಿ ಉಳಿಯುವುದು ಬೇಕಾಗಿರಲಿಲ್ಲ. ಅಮೀನಸಾಬನಿಗೆ ವಯಸ್ಸಾಗಿದ್ದು, ಹಂಪಿಗೂ ಆತನಲ್ಲಿ ಆಸಕ್ತಿ ಕಳೆದು ಹೋದದ್ದು ಎಲ್ಲವೂ ಸೇರಿ ಪುನಃ ಹಂಪಿ ತಾನು ಹುಟ್ಟಿ ಬೆಳೆದ ಹಳ್ಳಿಗೆ ವಾಪಾಸಾಗುತ್ತಾಳೆ. ಬೇಕೆಂದಾಗ ಬಳಸಿಕೊಳ್ಳುವ ಬೇಡಾದಾಗ ಬಿಟ್ಟುಕೊಡುವ ಪುರುಷ ವ್ಯವಸ್ಥೆಯಲ್ಲಿ ಬಸವಿತನಕ್ಕಿಳಿದಿದ್ದವರ ಬದುಕಿನ ಅತಂತ್ರ ಸ್ಥಿತಿಗಳನ್ನು ಇದು ತಿಳಿಸುತ್ತದೆ.

"ಕುಂದರಲಾರದs ಕುಲಕರ್ಣಿತಾಕ ಹೋದರs ಹಿಂದಲ ಬಾಕ್ಯಾಕ ಮುರ್‍ಕೊಂಡ' (ಜಯತೀರ್ಥ ರಾಜಪುರೋಹಿತ; ೧೯೬೭; ಪುಟ : ೧೨೨) ಕುಲಕರ್ಣಿಯಂತಹ ಸ್ಥಿತಿವಂತರು ತಮ್ಮ ಕೆಲಸ ಸಾಧಿಸಲು ಹೇಗಾದರೂ ಮಾಡಿ ಕೆಲಸಗಾರರಿಂದ ಲಾಭ ಪಡೆದುಕೊಳ್ಳುತ್ತಾರೆ. ಬಸವಿ ಹೆಂಗಸರ ಬಳಿ ಬಂದ ಹನುಮವ್ವ ತನ್ನ ಮಗಳು ಹಂಪಿಗೆ ದುಡ್ಡಿದ್ದ ಯಾರಾದರೂ ಗಿರಾಕಿ ಸಿಕ್ಕರೆ ಸಾಕೆಂದು ವಿಚಾರಣೆಗೆ

ತೊಡಗುತ್ತಾಳೆ. ನಾಗನಗೌಡನ ಬಗ್ಗೆ ಬಸವಿಯೊಬ್ಬಳ ಅಭಿಪ್ರಾಯ ಕೇಳಿದಾಗ ಆಕೆ ಈ ಮಾತನ್ನು ಆತನ ವ್ಯಕ್ತಿತ್ವಕ್ಕೆ ಸೂಕ್ತವಾಗುವಂತೆ ಹೇಳುತ್ತಾಳೆ. ಬಸವಿಯರಿಂದ ಸುಖಪಟ್ಟು ಏನೂ ಕೊಡಲಾರದೆ ಹೋಗುವ ನಾಗನಗೌಡನಿಂದ ಅನ್ಯಾಯವನ್ನು ಅನುಭವಿಸಿದವರ ಈ ಮಾತು ಸ್ಥಿತಿವಂತರ ದರ್ಪ ಹಾಗೂ ಬಸವಿಯರ ಅಸಹಾಯಕತೆಯನ್ನು ತಿಳಿಸುತ್ತದೆ. ಬಸವಿಯರ ಸಂದರ್ಭದ ಆಚೆಗೂ ಈ ಮಾತು ಸ್ಥಿತಿವಂತರಿಂದ ದುಡಿದುಣ್ಣುವವರಿಗೆ ಆಗುವ ಅನ್ಯಾಯಗಳನ್ನೇ ತಿಳಿಸುತ್ತದೆ.

"ಕಾಲು ಬಿದ್ದು ಕಾಲಿನ ಪಿಲ್ಲಿ ಉಚ್ಚಿಕೊಳ್ಳುವವನು" (ಚೆನ್ನಣ್ಣವಾಲೀಕಾರ; ೧೯೭೫; ಪುಟ: ೧೯) ಬೆಳ್ಯ ಕಾದಂಬರಿಯ ಕುಂಟ ಶೆಂಕ್ರವ್ವ ಹಾಗೂ ಬೀರಪ್ಪರ ನಡುವೆ ಆಸ್ತಿ ಸಂಬಂಧದ ಜಗಳದಲ್ಲಿ ಮಧ್ಯಸ್ತಿಕೆ ವಹಿಸಿದ್ದ ಶೇಶಪ್ಪ ಕುಲಕರ್ಣಿಯ ದುರ್ಬುದ್ಧಿಯನ್ನು ತಿಳಿಸಲು ಈ ಮಾತು ಸೂಕ್ತವಾಗಿದೆ. ಬೀರಪ್ಪ ಶಂಕ್ರವ್ವರ ಕೌಟುಂಬಿಕ ಜಗಳವನ್ನು ತಮ್ಮ ಹಿತಾಸಕ್ತಿಗೆ ಬಳಸಿಕೊಳ್ಳಲು ಬಯಸಿದ್ದ ಶೇಶಪ್ಪ ಕುಲಕರ್ಣಿ ಆ ಕೆಲಸವನ್ನು ಚಾಣಾಕ್ಷತನದಿಂದ ಮಾಡುತ್ತಾನೆ. ಉತ್ತಮನಂತೆ ಮಾತಾಡುತ್ತಲೇ ತನ್ನ ಕೆಲಸ ಸಾಧಿಸಿಕೊಳ್ಳುವ ಬುದ್ಧಿಯನ್ನು ತೋರುವ ಕುಲಕರ್ಣಿಯಂತವರ ವಿಷಯದಲ್ಲಿ ಜಾಗೃತರಾಗಿ ಇರಬೇಕಾದ ಅಗತ್ಯವನ್ನು ಇದು ತಿಳಿಸುತ್ತದೆ.

"ಹೊಳೆ ದಾಟಿದ ಅಂಬಿಗನ ಮಿಂಡ ಆದರಾಯಿತು" (ಚೆನ್ನಣ್ಣವಾಲೀಕಾರ; ೨೦೦೨; ಪುಟ: ೧೭೧) ಹುಲಿಗೆಮ್ಮ ಕಾದಂಬರಿಯಲ್ಲಿ ಸಿದ್ಧರೆಡ್ಡಿ ಹುಲಿಗಿಯ ಮೇಲೆ ಅತ್ಯಾಚಾರ ಮಾಡಲು ಬಯಸಿ ಮುನ್ನುಗ್ಗುತ್ತಾನೆ. ಊರಿನಲ್ಲಿ ಗೌಡನ ಮಗನನ್ನು ಎದುರು ಹಾಕಿಕೊಂಡು ಬಾಳಲಾಗದ, ಪರಿಸ್ಥಿತಿಯಿಂದ ತಪ್ಪಿಸಿಕೊಳ್ಳಲಾಗದ ಹುಲಿಗೆಮ್ಮ ಚಿಂತಿತಳಾಗುತ್ತಾಳೆ. ಬಲತ್ಕಾರದ ಪೂರ್ವದಲ್ಲಿ ಹುಲಿಗೆಮ್ಮ ತನ್ನದೊಂದು ಕೊರಿಕೆಯನ್ನು ಸಿದ್ಧರೆಡ್ಡಿಯ ಬಳಿ ಹೇಳುತ್ತಾಳೆ. ಹೇಗಾದರೂ ಮಾಡಿ ಹುಲಿಗೆಮ್ಮನ ಶೀಲ ಹಾಳು ಮಾಡಲು ಮುಂದಾಗಿದ್ದ ಸಿದ್ಧಾರೆಡ್ಡಿ ಆಕೆಯ ಕೊರಿಕೆ ಬಗ್ಗೆ ತಳೆಯುವ ಅಭಿಪ್ರಾಯಗಳನ್ನು ಈ ಮಾತು ತಿಳಿಸುತ್ತದೆ. ಕೆಳವರ್ಗದ ಸ್ತ್ರೀಯ ಬೇಡಿಕೆಯನ್ನು ತಮ್ಮ ಕಾರ್ಯ ಸಾಧನೆಯ ಮಟ್ಟಿಗೆ ಒಪ್ಪಿ ಆನಂತರ ಅದನ್ನು ತಳ್ಳಿ ಹಾಕುವ ಹುನ್ನಾರಗಳನ್ನು ಇದು ಸೂಚಿಸುತ್ತದೆ.

"ಬಲ ಇಲ್ದ ಕಾಲಕ್ಕೆಲ ಎದ್ಬಡ್ದಂಗ" (ಚೆನ್ನಣ್ಣವಾಲೀಕಾರ; ೧೯೭೫; ಪುಟ : ೨೬) 'ಬೆಳ್ಯಾ' ಕಾದಂಬರಿಯಲ್ಲಿ ಕುಂಟ ಶೆಂಕ್ರವ್ವ ಹಾಗೂ ಬೀರಪ್ಪರ ಆಸ್ತಿ ಸಂಬಂಧಿ ವಿಚಾರದಲ್ಲಿ ನಡೆದ ಪಂಚಾಯಿತಿ ಇಂದ ನಾನಾ ರೀತಿಯ ದುರ್ಗಟನೆಗಳು ಊರಲ್ಲಿ ನಡೆಯುತ್ತವೆ. ಇವರ ವಿಚಾರವನ್ನು ತಮ್ಮ ವೈಯಕ್ತಿಕ ಹಿತಾಸಕ್ತಿಗೆ ಬಳಸಿಕೊಳ್ಳುವ ಗೌಡ ಕುಲಕರ್ಣಿಯಿಂದ ಅಮಾಯಾಕರ ಬದುಕು ಸರ್ವನಾಶ ಹೊಂದುತ್ತದೆ. ಇದೆಲ್ಲಾ ಅವಾಂತರಗಳು ಮುಗಿದಾಗ ಊರು ತಣ್ಣಗಿರಬೇಕೆಂದರೂ ಬಿಡದಂತೆ ಎಂಥೆಂತವೊ ಘಟನೆಗಳು ಸಂಭವಿಸುತ್ತವೆ. ಆಳು ಮಗ ಮಲ್ಯಾ ಎತ್ತಿಗೆ ಬಾರಕೋಲಿನಿಂದ ಹೊಡೆವಾಗ ಬಾರಕೋಲಿನ ತುದಿ ಗೌಡನ ಹೆಂಡತಿ ಭಾಗೀರತಮ್ಮನಿಗೆ ಬಡಿದದ್ದೆ ನೆಪವಾಗಿ ಮುಂದೆ ನಡೆಯುವ ದುರ್ಘಟನೆಗಳನ್ನು ಈ ಮಾತುಗಳು ಸೂಚಿಸುತ್ತವೆ. ವಿಷಮ ಪರಿಸ್ಥಿತಿಯಿಂದ ಹೊರಬರಲಾಗದ ಪರಿಸ್ಥಿತಿಗಳೇ ಕಂಡುಬರುತ್ತಿರುವುದು ಇಂಥ ವಿಷಾದದ ಮಾತಿಗೆ ಕಾರಣವಾಗಿದೆ.

"ಊರ್ಚಿಂತಿ ತೊಗೊಂಡು ಮುಲ್ಲಾ ಬಡುವಾಗಿದ್ನಂತೆ" (ಚೆನ್ನಣ್ಣವಾಲೀಕಾರ; ೧೯೭೫; ಪುಟ: ೭೧) 'ಬೆಳ್ಳಾ' ಕಾದಂಬರಿಯಲ್ಲಿ ಗೌಡ, ಕುಲಕರ್ಣಿಯರ ಸ್ವಾರ್ಥಕ್ಕೆ ಬಲಿಯಾಗಿ ತಮ್ಮ ಬದುಕನ್ನು ಕಳೆದುಕೊಂಡ ಕೆಳವರ್ಗದ ಜನ ಇನ್ನು ಮುಂದೆ ಯಾರ ವಿಷಯಕ್ಕೂ ತಲೆ ಹಾಕದಂತೆ ಇರಲು ನಿರ್ಧರಿಸಿದರು. ಊರಿನ ವಿಷಯಕ್ಕೆ ತಲೆ ಹಾಕಿ ತಮ್ಮ ವೈಯಕ್ತಿಕ ಬದುಕನ್ನು ಕಳೆದುಕೊಳ್ಳುವ ಕೆಲಸ ಮಾಡಿಕೊಳ್ಳಬಾರದೆಂದು ಜನ ತಮ್ಮಲ್ಲಿಯೇ ಜಾಗೃತರಾದದ್ದನ್ನು ಇದು ತಿಳಿಸುತ್ತದೆ.

"ಬಳಗಾ ಇದ್ದವಳ ಹಾದರ, ದುಡ್ಡಿದ್ದವರ ಅವಗುಣ ಮುಚ್ಚಿತು" ಚೆನ್ನಣ್ಣವಾಲೀಕಾರ; ೨೦೦೩; ಪುಟ ೧೨) 'ಕಪ್ಪು ಕಥೆಗಳು' ಎಂಬ ಕತೆಯಲ್ಲಿ ನಾಗವ್ವ ತಮ್ಮ ವಂಶದಲ್ಲಿ ಉಳಿದಿದ್ದ ಭೀಮಣ್ಣನಿಂದಲೇ ವಂಶ ಉದ್ಧಾರ ಮಾಡಬೇಕೆಂದು ಬಯಸುತ್ತಾಳೆ. ಆದರೆ ಭೀಮಣ್ಣನಲ್ಲಿ ವಂಶೋದ್ಧಾರದ ಶಕ್ತಿ ಇಲ್ಲವೆಂಬುದು ತಿಳಿದ ನಾಗವ್ವ ಹಣಮಂತಿಯನ್ನು ಭೀಮಣ್ಣನ ಹೆಂಡತಿಯಾಗಿ ತರಲು ನಿರ್ಧರಿಸುತ್ತಾಳೆ. ಭೀಮಣ್ಣನಿಂದ ಆಗದಿರುವ ವಂಶೋದ್ಧಾರದ ಕಾರ್ಯವನ್ನು ಆಳು ಮಗ ಕಾಸಿಂಸಾಬನಿಂದ ಪೂರೈಸಿ ಮನೆತನ ಉಳಿಸಿಕೊಳ್ಳಬೇಕೆಂದು ನಾಗವ್ವ ಯೋಚಿಸುತ್ತಾಳೆ. ಪುರಾಣ ಕಾಲದ ಕುಂತಿದೇವಿಯೇ ದೇವರ ವರದಿಂದ ಮಗು ಪಡೆದಿರುವುದನ್ನು ಒಪ್ಪಿರುವ ಜನರಿಗೆ ಹಣಮಂತಿಯ ಅನೈತಿಕತೆ ತಿಳಿಯದು ಎಂದು ನಾಗವ್ವ ಧೈರ್ಯ ಪಡೆದುಕೊಳ್ಳುತ್ತಾಳೆ. ಬಳಗ ಇದ್ದವರು ಮಾಡುವ ಅನೈತಿಕ ಕೆಲಸವು ಮುಚ್ಚಿ ಹೋಗುತ್ತದೆ. ಏಕೆಂದರೆ ಅದನ್ನು ಪ್ರಶ್ನಿಸುವ ಧೈರ್ಯ ಯಾರೂ ಮಾಡುವುದಿಲ್ಲ. ದುಡ್ಡಿದ್ದವರ ಅವಗುಣವು ಹಾಗೆ ಮುಚ್ಚಿ ಹೋಗುತ್ತದೆ ಎಂಬ ನಾಗವ್ವನ ಆಲೋಚನೆಯನ್ನು ಈ ಮಾತು ತಿಳಿಸುತ್ತದೆ.

"ಹೆಣದವರು ಹೆಣಕತ್ತರೆ ಕೊರವ ತನ್ನ ದುಡ್ಡಿಗೆ ಅತ್ತ" (ಚೆನ್ನಣ್ಣವಾಲೀಕಾರ; ೨೦೦೩; ಪುಟ: ೩೩) ಕಪ್ಪು ಕಥೆಗಳು' ಎಂಬ ಕತೆಯಲ್ಲಿ ವೈಶಾಖ ಮಾಸದ ಮದುವೆ ಸಂಭ್ರಮಗಳು ಊರಿನಲ್ಲಿ ಪ್ರಾರಂಭವಾಗುತ್ತವೆ. ಊರಿನವರ ಈ ಸಂಭ್ರಮವನ್ನು ಗೌಡನಂತವರು ಗೌರವಿಸುವುದಿಲ್ಲ. ಮದುವೆ ಮಾಡುವ, ಬದುಕಿಗೆ ದಾರಿ ಕಂಡುಕೊಳ್ಳುವ ಮನೋಭಾವದಲ್ಲಿ ಜನಸಾಮಾನ್ಯರು ಮುಳುಗಿದ್ದರೆ, ಗೌಡ ಮದುವೆಯಾಗಿ ಬಂದ ಚೆಲುವಾದ ಹೆಣ್ಣು ಮಕ್ಕಳನ್ನು ಭೋಗಿಸುವ ಕಡೆಗೆ ಆಲೋಚಿಸುತ್ತಾನೆ. ತಮ್ಮ ಬದುಕನ್ನು ಗೌಡನಂತವರಲ್ಲಿ ಕಳೆದುಕೊಳ್ಳುವ ದುಃಖ ಕೆಳವರ್ಗದವರಲ್ಲಿ ತುಂಬಿದ್ದರೆ, ಆದುಃಖದಲ್ಲಿ ತನ್ನ ಲಾಭವನ್ನು ಹುಡುಕುವ ಗೌಡನಂತವರ ಕ್ರೌರ್ಯವನ್ನು ಈ ಮಾತು ತಿಳಿಸುತ್ತದೆ.

"ಕಟ್ಟೆಯ ಕಲ್ಲು ಕಟ್ಟೆಗೆ ಕುಂತಿತು" (ಗೀತಾ ನಾಗಭೂಷಣ; ೨೦೦೬; ಪುಟ : ೨೧೪) 'ಮಠದಯ್ಯ ಮತ್ತು ಧರ್ಮ' ಎಂಬ ಕತೆಯಲ್ಲಿ ಮಠದಯ್ಯನಿಂದ ಗರ್ಭಿಣಿಯಾದ ಶಿವಿಯನ್ನು ಖಾಸೀಮನೊಂದಿಗೆ ಬಂಬೈ ಪಟ್ಟಣಕ್ಕೆ ಮಠದ ಸ್ವಾಮಿ ಕಳಿಸಿಕೊಡುತ್ತಾನೆ. ಸ್ವಾಮಿಯ ಆಜ್ಞೆಯಂತೆ ಖಾಸೀಂ ಶಿವಿಯ ಬಾಣಂತನದ ಕಾರ್ಯವನ್ನೆಲ್ಲಾ ಮುಗಿಸಿ ಮಕ್ಕಳಿಲ್ಲ ತನ್ನ ಹೆಂಡತಿಗೆ ಶಿವಿಯ ಮಗುವನ್ನು ಕೊಡುತ್ತಾನೆ. ಶಿವಿಯನ್ನು ಮಠಕ್ಕೆ ಒಪ್ಪಿಸಿ ಸ್ವಾಮಿಯ ಕೆಲಸವನ್ನು ಮುಗಿಸಿ ಕೊಡುತ್ತಾನೆ. ಹೇಳಿದ ಕೆಲಸವನ್ನು ಮಾಡಿ ಕರ್ತವ್ಯ ಮುಗಿದದ್ದನ್ನು ತಿಳಿಸುವ ಈ ಮಾತು ಮಠದ ಸ್ವಾಮಿಯ ಅನೈತಿಕತೆಗೆ ಸಂಬಂಧಿಸಿದಂತೆ ಕಂಡು ಬರುತ್ತದೆ.

"ಗರಜಾಯ್ತು ಗಾಣಮಿಣಿ, ಹೊರಸು ಬಿಟ್ಟು ತೆಳಗಿಳಿ" (ಗೀತಾ ನಾಗಭೂಷಣ; ೨೦೦೭; ಪುಟ: ೪೫೮) 'ಬದುಕು' ಕಾದಂಬರಿಯ ಮಲ್ಲಪ್ಪ ಜಮಾದಾರನ ಮಗ ಕಲ್ಯಾಣಿ ಊರಿನಲ್ಲಿ ನಡೆದ ಜಗಳಕ್ಕೆ ಕೈ ಹಾಕಿ ಜೈಲುವಾಸಿಯಾಗುತ್ತಾನೆ. ಕಲ್ಯಾಣಿಯ ಹೆಂಡತಿ ಬೆಳ್ಳಿ ಜಮಾದಾರ ಮಲ್ಲಪ್ಪನ ಹಾಗೂ ಗಂಡನ ಕೀರ್ತಿ ಉಳಿಸಿಕೊಂಡು ಊರಲ್ಲಿ ಗೌರವದಿಂದ ಬಾಳುತ್ತಾಳೆ. ಕಲ್ಯಾಣಿ ಜೈಲಿನಿಂದ ಬರುವವರೆಗೂ ದಿನಾ ರಾತ್ರಿ ಬೆಳ್ಳಿಯೊಂದಿಗೆ ಮಲಗುತ್ತಿದ್ದ ನಾಗವ್ವಾಯಿ ಕಲ್ಯಾಣಿ ಜೈಲಿನಿಂದ ಬಂದಾಗ ಈ ರೀತಿ ನಗಚಾಟಿಕೆಯ ಮಾತನ್ನು ಆಡುತ್ತಾಳೆ. ಕೆಲಸ ಮುಗಿದ ಮೇಲೆ ಬಿಟ್ಟು ಹೋಗುವಂತೆ ಹೇಳುವ ಇಲ್ಲಿನ ಮಾತು ಕೃತಜ್ಞತೆಯನ್ನು ಸೂಚಿಸುವಂತಹದ್ದಲ್ಲ. ಕಲ್ಯಾಣಿ ಮತ್ತು ಬೆಳ್ಳಿಯರ ಬಹುದಿನಗಳ ನಂತರದ ಒಂದಾಗುವಿಕೆಯನ್ನು ಹರಸುವಂತಹದ್ದು.

"ಸಹವಾಸದಿಂದ ಸನ್ಯಾಸಿ ಕೆಟ್ನಂತೆ!" (ಬಿ.ಟಿ. ಲಲಿತಾನಾಯಕ್; ೧೯೯೫; ಪುಟ : ೫೬) 'ನೆಲೆ-ಬೆಲೆ' ಕಾದಂಬರಿಯು ಕಟ್ಟಿಕೊಡುವ ಹಳ್ಳಿ ಬದುಕಿನಲ್ಲಿ ತನ್ನ ವಿಚಾರಶಕ್ತಿಯನ್ನೆಲ್ಲಾ ಕಳೆದುಕೊಂಡಿದ್ದ ಜಯಾ ಕಾಂತಯ್ಯನ ಹೆಂಡತಿಯ ಬಾಣಂತನ ಕಾರ್ಯ ಮಾಡಲು ಪಟ್ಟಣಕ್ಕೆ ಬರುತ್ತಾಳೆ. ಮನೆಯ ಹತ್ತಿರವಿದ್ದ ರೇಖಾ ಎಂಬ ಬುದ್ಧಿವಂತ ವಿಚಾರವಾದಿಯೊಬ್ಬಳ ಗೆಳೆತನವನ್ನು ಸಂಪಾದಿಸುವ ಜಯಾಳನ್ನು ಕಾಂತಯ್ಯನ ಹೆಂಡತಿ ಮತ್ತಿತರ ಓಣಿಯ ಹೆಂಗಸರು ದೂರುತ್ತಾರೆ. ಯಾವುದೋ ದುರ್ಘಟನೆಗೆ ಸಿಕ್ಕು ಜಯಾಳ ಕೈಯಲ್ಲಿಯ ಬಳೆಗಳೆಲ್ಲ ಒಡೆದು ಹೋಗಿರುತ್ತವೆ. ಇದನ್ನೇ ನೆಪವಾಗಿಸಿಕೊಂಡ ಕಾಂತಯ್ಯನ ಹೆಂಡತಿ ಕನಕ ಕೈಗಳಿಗೆ ಬಳೆ ಹಾಕಿಕೊಳ್ಳುವಂತೆ ಜಯಾಗೆ ಸೂಚಿಸುತ್ತಾಳೆ. ಪ್ರಗತಿಪರಳಾದ, ಆಧುನಿಕ ಸ್ತ್ರೀಯಂತೆ ಬದುಕುತ್ತಿದ್ದ ರೇಖಾಳೊಂದಿಗಿನ ಅವಳ ಸ್ನೇಹವನ್ನು ಹಂಗಿಸುವಂತೆ ಈ ಮಾತನ್ನು ಆಡುತ್ತಾಳೆ. ಆಧುನಿಕ ಬದುಕಿನ ರೀತಿಗಳು ಅದರಲ್ಲೂ ಹುಡುಗಿಯರ ವರ್ತನೆಯಲ್ಲಾಗುವ ಬದಲಾವಣೆಗಳನ್ನು ವಿಚಾರವಾದಿಗಳಲ್ಲದ ಮಹಿಳೆಯರು ನೋಡುವ ಕ್ರಮ, ಟೀಕಿಸುವ ರೀತಿ ಇಲ್ಲಿ ತಿಳಿದುಬರುತ್ತದೆ.

"ಕೊಟ್ಟ ಹೆಣ್ಣು ಕುಲದ ಹೊರಗ" (ಶ್ರೀಕಾಂತ ಪಾಟೀಲ; ೧೯೯೭; ಪುಟ : ೧೯) 'ಮೂಡಲದಾಗ ಕೆಂಪು ರಾಶಿ ಮೂಡಿತ್ತು' ಕತೆಯ ಭೀಮಶಾ ತನ್ನ ತಮ್ಮನ ಮಗಳಿಗೆ ಆಸ್ತಿಯಲ್ಲಿ ಪಾಲು ಕೊಡಲು ನಿರಾಕರಿಸುತ್ತಾನೆ. ಭೀಮಶಾನ ತಮ್ಮನ ಹೆಂಡತಿ ಸಣ್ಣಿ ತನ್ನ ಮಗಳಿಗೂ ಉಳಿದವರಿಗೆ ಬರುವಂತೆ ಆಸ್ತಿಯಲ್ಲಿ ಪಾಲು ಬರಬೇಕೆಂದು ಕೇಳುತ್ತಾಳೆ. ಹೆಣ್ಣು ಮಕ್ಕಳಿಗೆ ಆಸ್ತಿ ಹಂಚಿಕೆಯನ್ನು ವಿರೋಧಿಸುವ ಭೀಮಶಾ ಈ ಮಾತನ್ನು ತಿಳಿಸುತ್ತಾನೆ. ಆಸ್ತಿಹಕ್ಕು ಗಂಡು-ಹೆಣ್ಣಿಗೆ ಸರಿಸಮಾನವಾಗಿ ಹಂಚಿಕೆಯಾಗಬೇಕೆಂಬುದನ್ನು ಈ ಮಾತು ತಳ್ಳಿ ಹಾಕುತ್ತದೆ.

"ಹೂವಿನೊಡನೆ ನಾರೂ ಸ್ವರ್ಗಕ್ಕೆ" (ಲಲಿತಾದೇಮಶೆಟ್ಟಿ; ೧೯೮೬; ಪುಟ : ೩೩) ಮಾತಂಗಿ ಕತೆಯ ಡಾ. ಮಾತಂಗಿ ಕೆಳವರ್ಗದಲ್ಲಿ ಹುಟ್ಟಿದರೂ ಉನ್ನತ ಸಾಧನೆ ಮಾಡಿರುತ್ತಾಳೆ. ಪ್ರಸಿದ್ಧ ವೈದ್ಯೆಯಾದ ಆಕೆಯನ್ನು ಮದುವೆಯಾಗಲು ನಾಮುಂದು, ತಾಮುಂದು ಎಂದು ಗಂಟುಬಿದ್ದಿದ್ದ ಆಸ್ಪತ್ರೆಯ ಡಾಕ್ಟರ್‌ಗಳಲ್ಲಿ ಡಾ. ಬಸವರಾಜನೂ ಒಬ್ಬ. ಮಾತಂಗಿಯೊಂದಿಗೆ ಮದುವೆ ವಿಷಯ ಪ್ರಸ್ತಾಪ ಮಾಡುವ

ಬಸವರಾಜ ಮಾತಂಗಿಗೆ ಮತಾಂತರ ಹೊಂದುವಂತೆ ಹೇಳುತ್ತಾನೆ. ಲಿಂಗದೀಕ್ಷೆ ಪಡೆದು ವೀರಶೈವ ಧರ್ಮದ ಸಂಪ್ರದಾಯ ಪಾಲಿಸಿದರೆ ಸಾಕು ಎನ್ನುವ ಡಾ. ಬಸವರಾಜನು ಜಾತಿ ಶ್ರೇಷ್ಠತೆಯ ಹಂಗನ್ನು ತೊರೆದಿರುವುದಿಲ್ಲ. ಕೆಳವರ್ಗದ ಮಾತಂಗಿಗೆ ತನ್ನಿಂದ ಈ ರೀತಿ ಉತ್ತಮ ಜಾತಿಯ ಸ್ಥಾನಗಳು ದೊರೆಯುತ್ತವೆ ಎಂದು ತಿಳಿಸುವ ಬಸವರಾಜನ ಸೀಮಿತ ಆಲೋಚನಾ ಕ್ರಮ ಇಲ್ಲಿ ತಿಳಿದು ಬರುತ್ತದೆ.

"ರಂಡೆಮುಂಡೆ ಮದುವೆಯಲ್ಲಿ ಉಂಡವನೆ ಜಾಣ" (ಕುಂ. ವೀರಭದ್ರಪ್ಪ; ೨೦೦೪; ಪುಟ : ೧೩೨) 'ಕೆಂಡದ ಮಳೆ ಕರೆವಲ್ಲಿ ಉದಕವಾಗಿದ್ದವರ ಕಥೆ' ಎಂಬ ಕತೆಯಲ್ಲಿ ತಮ್ಮ ತಂದೆಯ ಹೆಣವನ್ನು ವೀರಶೈವರ ಸನ್ಮಾಶನದಲ್ಲಿ ಹೂತಿಟ್ಟಿದ್ದಕ್ಕಾಗಿ ಗೌಡ ಮತ್ತಿತರರಿಂದ ಅವಮಾನ ಅನುಭವಿಸಿದ ಭಾಷಾ ಮತ್ತು ಪೀರ, ಶಾಲಮ್ಮ ದುಃಖಿತರಾಗುತ್ತಾರೆ. ಸ್ಮಶಾನದಿಂದ ಹೆಣವನ್ನು ತಂದು ಅಗಸೆ ಬಾಗಿಲಿಗೆ ಹಾಕಿಸುವ ಗೌಡನ ಕ್ರೌರ್ಯವನ್ನು ಸಹಿಸದ ಬಾಷಾ ತನ್ನ ತಂದೆ ಹೆಣವನ್ನು ಗೌಡನ ದೇವರ ಮನೆಗೆ ತಂದು ಹಾಕುತ್ತಾನೆ. ಗೌಡನು ಬಾಷಾನ ವಿರುದ್ಧ ಪೊಲೀಸರಲ್ಲಿ ದೂರುತ್ತಾನೆ. ವಿಚಾರಣೆಗೆ ಬಂದ ಪೊಲೀಸ ಪೇದೆಗಳು ಹೆಣವನ್ನು ಹೊರತರಲು ಹೋದ ಸಂದರ್ಭದಲ್ಲಿ ಗೌಡನ ಮನೆಯಲ್ಲಿ ಆದಾಗ ತಾನೆ ಮಾಡಿದ್ದ ಅಡುಗೆಯನ್ನು ಊಟ ಮಾಡುತ್ತಾರೆ. ಹೆಣದ ಕೆಳಗಿದ್ದ ಹಣದ ಪೆಟ್ಟಿಗೆಯಿಂದ ಬೇಕಾದ ಆಭರಣಗಳನ್ನು, ಹಣವನ್ನು ದೋಚಿಕೊಳ್ಳುತ್ತಾರೆ. ಎಂತಹದ್ದೇ ಹೀನಾಯ ಪರಿಸ್ಥಿತಿ ಇದ್ದರೂ ತಮ್ಮ ಸ್ವಾರ್ಥ ಸಾಧನೆಯನ್ನು ಮಾಡಿಕೊಳ್ಳುವವರ ಕುರಿತು ಹೇಳುವ ಮಾತು ಇಲ್ಲಿ ಸೂಕ್ತವಾಗಿ ಬಳಕೆಯಾಗಿದೆ.

"ಹಳ್ಳಾಟು ಕುಡಿವಾಗ ದಡ ಸೀನೀರಂತಿತ್ತಂತೆ" (ಕುಂ. ವೀರಭದ್ರಪ್ಪ; ೨೦೦೪; ಪುಟ : ೫೫೮) 'ಬರಗಾಲದ ಒಂದು ದಿನ' ಕತೆಯಲ್ಲಿ ಬರಗಾಲದಿಂದ ಜನ ಕಂಗಾಲಾಗಿದ್ದರು. ಹೊಟ್ಟೆ ತುಂಬ ಊಟವಿಲ್ಲದೆ ನಿತ್ರಾಣಗೊಂಡಿದ್ದ ಮನೆಯವರ ಬಗೆಗೆ ಯಂಕೋಬಿ ಯಾವ ಚಿಂತೆಯನ್ನು ಇಟ್ಟುಕೊಂಡಿರಲಿಲ್ಲ. ಹಾಸಿಗೆಯಿಂದ ಎದ್ದವನೆ ಹೆಂಡತಿಗೆ ಕಾಫಿ ಕೊಡುವಂತೆ ಗತ್ತಿನಿಂದ ಕೇಳುವ ಗಂಡನ ದರ್ಪವನ್ನು ಮೂದಲಿಸುವಲ್ಲಿ ಈ ಮಾತು ಸೂಕ್ತವಾಗಿದೆ. ಪಡೆದುಕೊಳ್ಳಲು ಸಾಧ್ಯವಿಲ್ಲದ್ದನ್ನು ಆಸೆಪಡುವ, ಜೀವನವೇ ದುಸ್ಥರವಾಗಿದ್ದಾಗ ಇಲ್ಲದ ಬಯಕೆಗಳಿಗೆ ಬಾಯಿ ಬಿಡುವ ಯಂಕೋಬಿಯಲ್ಲಿ ವಾಸ್ತವಿಕತೆಯ ಬಗ್ಗೆ ಕಾಳಜಿಯಿಲ್ಲದ್ದನ್ನೇ ಈ ಗಾದೆ ಮಾತು ತಿಳಿಸುತ್ತದೆ.

"ಕೆರೆಗೆ ಹೆದರಿ ತಿಕ ತೊಳಕೊಳ್ಳದಂಗ ಇರಲಿಕ್ಕಾಗ್ತದಾ" (ಕುಂ. ವೀರಭದ್ರಪ್ಪ; ೨೦೦೭; ಪುಟ: ೨೯) 'ಹೂವ ತರುವ ಮನೆಗೆ' ಕತೆಯಲ್ಲಿ - ಮಲ್ಲೇಶಿ ಎಂಬ ಯುವಕ ಮಲ್ಲಿಗೇನಹಳ್ಳಿಯ ಹೂವಿನ ಮೇಲೆ ಸರಕಾರ ನಿರ್ಬಂಧ ಹೇರಿದ್ದರ ಕಾರಣ ತಿಳಿಯಲು ಸ್ನೇಹಿತರೊಂದಿಗೆ ಬಂದಿರುತ್ತಾನೆ. ಗೆಳೆಯ ರೊಂದಿಗೆ ಊರಿನಲ್ಲಿ ಸುತ್ತಿಕೊಂಡು ಬರಲು ಹೊರಟ ಮಲ್ಲೇಶಿಯನ್ನು ಕಣಗಿಲಪ್ಪ ತಡೆಯುತ್ತಾನೆ. ಊರಿನ ದೇವರಿಗೆ, ಕೆರೆ ನೀರಿಗೆ ಒದಗಿಬಂದಿರುವ ದುರ್ಗತಿಯನ್ನು ಕಣಗಿಲಪ್ಪ ತಿಳಿಸುತ್ತಾನೆ. ಈ ದುರ್ಗತಿಯನ್ನು ನೋಡುವ ಬದಲು ಊರಿಗೆ ಹಿಂತಿರುಗಿ ಹೋಗಿ ಎಂಬ ಕಣಗಿಲಪ್ಪನ ಸಲಹೆಯನ್ನು ಹಿರೀಕನೊಬ್ಬ ತಳ್ಳಿ ಹಾಕುತ್ತಾನೆ. ಊರಿನಲ್ಲಿ ನಡೆಯುವ ಅವಾಂತರಗಳಿಗೆ ಹೆದರಿ ಊರು ಬಿಡಲಾಗದು. ಅವಶ್ಯವಿರುವ ಕೆಲಸವನ್ನು ಪೂರೈಸಿಕೊಳ್ಳಲೇಬೇಕಾದಾಗ ಹೆದರಬೇಕಿಲ್ಲವೆಂದು ಹೇಳುತ್ತಾನೆ.

"ಗಂಡ ಸೇರದ ಹೆಣ್ಣು ಗುಂಡಕಲ್ಲಿಗೆ ಸಮವಂತೆ" (ಕುಂ. ವೀರಭದ್ರಪ್ಪ; ೨೦೦೫; ಪುಟ : ೩೫) 'ಅರಮನೆ' ಕಾದಂಬರಿಯಲ್ಲಿ ಕುದುರೆಡವು ಪಟ್ಟಣದ ಅರಮನೆಯಲ್ಲಿ ಪಿಕದಾನಿ ಹಿಡಿಯುವ ಕಾಯಕ ದಲ್ಲಿದ್ದ ಓಬಯ್ಯನ ದೇಹದಲ್ಲಿ ದೇವಿಶಾಂಭವಿ ನೆಲೆ ನಿಲ್ಲುತ್ತಾಳೆ. ಗಂಡನು ಇದ್ದಕ್ಕಿದ್ದಂತೆ ಈ ರೀತಿ ದೈವದ ವಾಸಸ್ಥಾನವಾಗಿರುವುದನ್ನು ಕಂಡ ಜಗಲೂರೆವ್ವ ದುಃಖಕ್ಕೀಡಾಗುತ್ತಾಳೆ. ಆಕೆಯನ್ನು ಕಂಡು ಮರುಕ ವ್ಯಕ್ತಪಡಿಸುವವರು ಈ ರೀತಿಯಾಗಿ ಮಾತುಗಳಿಂದ ಸಾಂತ್ವಾನ ಹೇಳುತ್ತಾರೆ. ಇಲ್ಲಿ ಗಂಡ ಸೇರದಿರುವಂತಹ ಅವಗುಣ ಜಗಲೂರೆವ್ವನಲ್ಲಿಲ್ಲ. ಆದರೆ ಗಂಡನೇ ಸಂಸಾರದಿಂದ ದೂರಾಗಿ ಅಲೌಕಿಕದ ಕೈಗೊಂಬೆಯಾಗಿರುವಾಗ ಹೆಂಡತಿಯಾದವಳಿಗೆ ಆಗುವ ನೋವಿನ ಮಾತಾಗಿ ಈ ಗಾದೆ ಮಾತು ಅರ್ಥ ಪಡೆಯುತ್ತದೆ.

"ಸೆಟ್ಟಿ ಉಳಕೊಂಡಲ್ಲಿ ಪಟ್ಟಣ ಅಂಬುತಾರಲ್ಲ ಹಂಗೆ" (ಕುಂ. ವೀರಭದ್ರ; ೨೦೦೫; ಪುಟ: ೪೦೫) 'ಅರಮನೆ' ಕಾದಂಬರಿಯಲ್ಲಿ ಬರುವ ಮನ್ರೋಸಾಹೇಬ ಜನ ಪ್ರೀತಿಯನ್ನು ಗಳಿಸಿಕೊಂಡಿರುತ್ತಾನೆ. ಜನ ಪ್ರೀತಿಗಾಗಿ ಅನೇಕ ಸುಧಾರಣೆಯ ಕೆಲಸಗಳನ್ನು ಮಾಡಿರುತ್ತಾನೆ. ವಸಾಹತುಶಾಹಿಗಳ ಸುಧಾರಣೆಯ ಚಟುವಟಿಕೆಗಳು ಅವರ ಸ್ವಹಿತಾಸಕ್ತಿಯನ್ನೇ ಸೂಚಿಸುತ್ತವೆ. ವ್ಯಾಪಾರಿಗಳಾದ ಶೆಟ್ಟಿಗಳು ತಮ್ಮ ಲಾಭಕ್ಕಾಗಿ ಆಕರ್ಷಕ ವಸ್ತುಗಳ ಮಾರಾಟಕ್ಕಿಳಿದು ಜನರ ಮೆಚ್ಚುಗೆಗೆ ಪಾತ್ರರಾಗುತ್ತಾರೆ. ವಸಾಹತುಶಾಹಿಯಾದ ಥಾಮಸ್ ಮನ್ರೋ ಸಾಹೇಬನನ್ನು ಸೆಟ್ಟಿಗಳಂತಹ ಸ್ಥಳೀಯ ವ್ಯಾಪಾರಿಗಳಿಗೆ ಹೋಲಿಸುವಲ್ಲಿನ ವ್ಯಂಗ್ಯ ಈ ಮಾತಲ್ಲಿ ಸ್ಪಷ್ಟವಾಗುತ್ತದೆ.

"ಯಾರದೋ ದುಡ್ಡು ಯಲ್ಲಮ್ಮನ ಜಾತುರೆ" (ಕುಂ. ವೀರಭದ್ರ; ೨೦೦೫; ಪುಟ : ೫೧೭) 'ಅರಮನೆ' ಕಾದಂಬರಿಯಲ್ಲಿ ಕುಂಪಣಿ ಸರಕಾರ ಅನೇಕ ಚಿಕ್ಕ ಸಂಸ್ಥಾನಗಳನ್ನು ತನ್ನ ಕೈವಶ ಮಾಡಿಕೊಂಡಿತು. ಸಂಸ್ಥಾನದ ರಾಜರು ದಿಕ್ಕಾಪಾಲಾದರು, ಸಂಸ್ಥಾನದ ಸಿಂಹಾಸನಗಳೆಲ್ಲವೂ ಉರುಳಿದವು. ಸಂಸ್ಥಾನದಲ್ಲಿದ್ದ ಅನೇಕ ವಸ್ತುಗಳನ್ನು ದೋಚಲು ಜನ ಮುಂದಾದರು. ಅರಮನೆಯ ಛತ್ರಿ, ಚಾಮರ, ಕತ್ತಿ ಕಠಾರಿಗಳನ್ನು, ಬೆಲೆ ಬಾಳುವ ವಸ್ತುಗಳನ್ನು ದೋಚಲು ಎಲ್ಲರೂ ಪೈಪೋಟಿ ನಡೆಸಿದರು. ಹೀಗೆ ದೋಚಿಕೊಂಡು ಸುಖಪಟ್ಟವರನ್ನು ಉದ್ದೇಶಿಸಿ ಹೇಳುವ ಈ ಮಾತು ಸಂಸ್ಥಾನಗಳ ನಾಶವನ್ನು ಜನರು ಎದುರುಗೊಂಡ ರೀತಿಯನ್ನು ತಿಳಿಸುತ್ತದೆ.

"ಊದುವುದನ್ನು ಬಿಟ್ಟು ಬಾರಿಸುವುದನ್ನು ತಗೊಂಡಂಗೆ" (ಕುಂ. ವೀರಭದ್ರ; ೨೦೦೫; ಪುಟ: ೫೧೭) 'ಅರಮನೆ' ಕಾದಂಬರಿಯಲ್ಲಿ ಕಂಡು ಬರುವ ಸ್ಥಿತ್ಯಂತರದ ಬದುಕನ್ನು ಇದು ತಿಳಿಸುತ್ತದೆ. ಕುಂಪಣಿ ಸರಕಾರ ಸಂಸ್ಥಾನಗಳ ರಾಜರನ್ನು ಹೊರಗಟ್ಟಿ ಪ್ರಭುತ್ವದ ಆಡಳಿತವನ್ನು ನಿಲ್ಲಿಸಿದರು. ರಾಜರ ಸ್ಥಾನದಲ್ಲಿ ಅಮಲ್ದಾರ, ತಶೀಲ್ದಾರರನ್ನು ನೇಮಿಸಿ ಆಡಳಿತ ಮಾಡಲು ಪ್ರಾರಂಭಿಸಿದರು. ರಾಜನ ನಂತರ ವಸಾಹತುಗಳು ನೇಮಿಸಿದ ಈ ಅಧಿಕಾರಿಗಳಿಗೂ ಜನರಿಂದ ಯಾವ ಮರ್ಯಾದೆ ಸಿಗಲಿಲ್ಲ. ಈ ಹಿಂದೆ

ಇದ್ದ ರಾಜರಿಂದ ತಮ್ಮ ಆಡಳಿತ ಸ್ಥಾಪನೆಗೆ ಉಂಟಾಗಿದ್ದ ತೊಂದರೆ ನೀಗಿಸಿಕೊಳ್ಳಲು ಹೋಗಿ ಮತ್ತೊಂದು ರೀತಿಯ ತೊಂದರೆಯನ್ನು ತಂದುಕೊಂಡ ವಿದೇಶಿಗರ ಪರಿಸ್ಥಿತಿಯನ್ನು ಈ ವಾಕ್ಯ ಸೂಚಿಸುತ್ತದೆ.

"ಹೊಲ್ದಾಗ ಕಾಯಿ ಹಾಕಿ ಕರ್ಮ ಕಳ್ಕಬೇಕು. ಪಲ್ಲೆ ಹಾಕಿ ಪಾಪ ಕಳ್ಕಬೇಕು" (ಅಮರೇಶ ನುಗಡೋಣಿ; ೧೯೯೧; ಪುಟ : ೭) 'ಮಣ್ಣು ಸೇರಿತು ಬೀಜ' ಕತೆಯ ಜಂಬಣ್ಣ ಸಾವಿನ ಅಂಚಿನಲ್ಲಿದ್ದ ತನ್ನ ತಂಗಿಯ ಬಗ್ಗೆ ವಿಚಾರ ಮಾಡುವಾಗ ಈ ಮಾತನ್ನು ನೆನಪಿಸಿಕೊಳ್ಳುತ್ತಾನೆ. ಅತ್ಯಂತ ಜಿಪುಣೆಯಾಗಿದ್ದ ನಾಗಮ್ಮ ಕೈಯೆತ್ತಿ ಯಾರಿಗೂ ದಾನ ಮಾಡುತ್ತಿರಲಿಲ್ಲ. ಹಸಿದವರನ್ನು ಸತಾಯಿಸುವ, ಬೇಡಿದವರಿಗೆ ಏನನ್ನೂ ನೀಡದ ಆಕೆಯ ವರ್ತನೆ ಪಾಪವನ್ನು ಕಟ್ಟಿಕೊಳ್ಳುವಂತಹದ್ದೇ ಆಗಿದೆ ಎಂಬುದು ಇಲ್ಲಿ ಸ್ಪಷ್ಟವಾಗುತ್ತದೆ. ಹೊಲದಲ್ಲಿ ಬೆಳೆದ ಕಾಯಿಪಲ್ಲೆನ ಹಂಚಿ ತಿನ್ನುವ ಉತ್ತಮ ಮನಸ್ಥಿತಿ ಪ್ರಾದೇಶಿಕವಾಗಿ ಕಂಡುಬರುತ್ತದೆ. ಹೀಗೆ ಹಂಚಿ ತಿನ್ನದವರ ಬಗೆಗೆ ಹೇಳುವ ಈ ಮಾತುಗಳು ಉತ್ತಮ ಬದುಕಿಗೆ ಮಾರ್ಗದರ್ಶನ ನೀಡುತ್ತವೆ.

"ಊರಿಗತ್ತು ಕಣ್ಣುಕಳಕಂಡಂಗ" (ಅಮರೇಶ ನುಗಡೋಣಿ; ೧೯೯೧; ಪುಟ : ೧೦೧) 'ಮೂಡಲು ಹರಿಯಿತು' ಕತೆಯ ಸಿದ್ದಪ್ಪ ವಿಚಾರವಾದಿ. ಮತೀಯ ಅಂಧಾನುಕರಣೆಯನ್ನು ಒಪ್ಪದ ಆತ ಊರಲ್ಲಿ ಗುಡಿ ಕಟ್ಟುವ ವಿಚಾರಕ್ಕೆ ಸಂಬಂಧಿಸಿದಂತೆ ಭಿನ್ನಾಭಿಪ್ರಾಯ ವ್ಯಕ್ತಪಡಿಸುತ್ತಾನೆ. ಊರಲ್ಲಿ ಜನರಿಗೆ ಗ್ರಂಥಾಲಯವನ್ನು, ಶೌಚಾಲಯಗಳನ್ನು, ಬಾವಿಗಳ ಹೊಂಡ ತೆಗಿಸಿ ದುರಸ್ತಿ ಮಾಡಿಕೊಳ್ಳುವುದನ್ನು ಸಿದ್ಧಪ್ಪ ಮನವರಿಕೆ ಮಾಡಲು ಪ್ರಯತ್ನಿಸುತ್ತಾನೆ. ಸಿದ್ಧಪ್ಪನನ್ನು ನಾಸ್ತಿಕನೆಂದು ಜರಿದು ಜನ ಆತನ ವಿಚಾರಗಳಿಗೆ ಈ ರೀತಿ ಪ್ರತಿಕ್ರಿಯಿಸುತ್ತಾರೆ. ಸಮಾಜ ಸೇವೆ ನಿರರ್ಥಕವೆಂದೆ ಇಲ್ಲಿನ ಮಾತು ತಿಳಿಸುತ್ತದೆ.

"ಊರಿಗೆ ಉಪಕಾರ ಮಾಡದು ಹೆಣಕ್ಕ ಸಿಂಗಾರ ಮಾಡದು ಒಂದೇ" (ಅಮರೇಶ ನುಗಡೋಣಿ; ೧೯೯೧; ಪುಟ : ೧೦೧) 'ಮೂಡಲ ಹರಿಯಿತು' ಕತೆಯಲ್ಲಿ ಸಿದ್ಧಪ್ಪ ಜನರ ಸಾಂಪ್ರದಾಯಿಕ ಆಲೋಚನೆಗಳನ್ನು ವಿರೋಧಿಸುತ್ತಾನೆ. ಹಾಗೆಯೇ ಜನರು ಆತನ ಪ್ರಗತಿಪರ ಧೋರಣೆಯನ್ನು ಸಮಾಜ ಸ್ಮರಿಸದು ಅದು ನಿರರ್ಥಕವೆಂದು ವಿರೋಧಿಸುತ್ತಾರೆ. ಧಾರ್ಮಿಕ ಕಾರ್ಯ ಪುಣ್ಯದ ಕೆಲಸವೆಂದು ತಿಳಿಯುವ ಜನ ಅದನ್ನು ವಿರೋಧಿಸುವ ಮಾತುಗಳ ಬಗ್ಗೆ ಗ್ರಾಮೀಣ ಅಭಿವೃದ್ಧಿ ಕಾರ್ಯಗಳ ಬಗ್ಗೆ ಹೆಚ್ಚು ಆಲೋಚನೆಗೆ ತೊಡಗುವುದಿಲ್ಲವೆಂಬುದನ್ನು ಈ ಮಾತು ಮನದಟ್ಟು ಮಾಡುತ್ತದೆ.

"ಜನಕ್ಕಂಜದಿದ್ರೂ ಮನಕ್ಕಂಜಬೇಕು" (ಅಮರೇಶ ನುಗಡೋಣಿ; ೨೦೦೮; ಪುಟ : ೧೦೧) 'ಉತ್ಪಮಣ' ಕತೆಯ ನೀಲಮ್ಮನ ಗಂಡ ಬಸವರಾಜಪ್ಪಗೌಡ ಮಾದರ ಗಂಗವ್ವನ ಮೇಲೆ ಮನಸ್ಸಿಡುತ್ತಾನೆ. ತೋಟದ ಮನೆಯಲ್ಲಿ ಆಕೆಯೊಂದಿಗೆ ಇರಬೇಕೆಂದು ಬಯಸುವ ಆತನ ವರ್ತನೆಯಿಂದ ನೊಂದ ಹೆಂಡತಿ ಮಠದವ್ವ ಹಾಗೂ ತೆಕ್ಕೆಯ ಕಾಯಕದಯ್ಯನಿಂದ ಗಂಡನಿಗೆ ಬುದ್ಧಿ ಹೇಳಿಸುತ್ತಾಳೆ. ತನ್ನ ಅನೈತಿಕ ಸಂಬಂಧದಿಂದ ಮನೆಯವರ ನೆಮ್ಮದಿ ಕೆಟ್ಟಿದ್ದರೂ ಬಸವರಾಜಗೌಡ ಬದಲಾಗುವುದಿಲ್ಲ. ಎಲ್ಲರೆದುರು

ತಪ್ಪನ್ನು ಒಪ್ಪಿಕೊಂಡು ಪುನಃ ಗಂಗಮ್ಮನನ್ನು ತೋಟದ ಮನೆಗೆ ಕರೆಸಿಕೊಂಡು ಅಲ್ಲೇ ಉಳಿದ ಗೌಡನನ್ನು ಟೀಕಿಸುವ ಸಂದರ್ಭಕ್ಕೆ ಈ ಮಾತು ಸೂಕ್ತವಾಗಿ ಬಳಕೆಯಾಗಿದೆ.

ಪ್ರಾದೇಶಿಕ ಭಾಷೆಯ ವಿಶಿಷ್ಟ ಅಂಶವಾಗಿರುವ ಗಾದೆ ಮಾತುಗಳು ಅನುಭವದಿಂದ ಮೂರ್ತಗೊಂಡಿರುವಂತವುಗಳು. ಅನುಭವಕ್ಕೆ ಸಿಕ್ಕಂತೆ ಈ ಮಾತುಗಳಿಗೂ ಸರ್ವಕಾಲಿಕ ಮಾನ್ಯತೆ ಸಿಕ್ಕಿದೆ. ಗಾದೆ ಮಾತುಗಳನ್ನು ಸಂದರ್ಭೋಚಿತವಾಗಿ ರೂಪಕಾತ್ಮಕವಾಗಿ, ವ್ಯಂಗ್ಯದ ನಿರೂಪಣೆಗೆ ಬಳಸಿಕೊಳ್ಳುವಲ್ಲಿ ಪ್ರಾದೇಶಿಕ ಕಥನ ವಿಶಿಷ್ಟವಾಗುತ್ತದೆ. ಗಾದೆ ಮಾತಿಗೆ ಹೊಂದಿಕೆಯಾಗುವಂತೆ ಸಂದರ್ಭವೊಂದನ್ನು ಚಿತ್ರಿಸುವ ಅಥವಾ ಸಂದರ್ಭವೊಂದರ ವಿವರಗಳೆಲ್ಲವನ್ನೂ ನೀಡಿ ಅದರ ಸಮಗ್ರ ಅರ್ಥೈಸುವಿಕೆಗೆ ಒಗ್ಗುವ ಗಾದೆ ಮಾತನ್ನು ಹೇಳುವ ಎರಡೂ ಪ್ರಕ್ರಿಯೆಗಳು ಕಥನದಲ್ಲಿ ಕಂಡು ಬರುತ್ತವೆ. ಆದರೆ ಗಾದೆ ಮಾತಿನ ಅರ್ಥಕ್ಕೆ ಸಂಬಂಧಿಸಿದಂತೆ ಉಂಟಾಗಿರುವ ಬದಲಾವಣೆಗಳು ಇಲ್ಲಿ ವಿಶಿಷ್ಟವಾಗಿವೆ. ಗಾದೆ ಮಾತುಗಳಿಗಿರುವ ಬಹುಮುಖ ಅರ್ಥ ಸಾಧ್ಯತೆಯನ್ನು ಕಂಡುಕೊಳ್ಳುವಂತಹ ಕಥನ ಸಾಹಿತ್ಯದಲ್ಲಿನ ಪ್ರಯೋಗಗಳು ಪ್ರಾದೇಶಿಕವಾಗಿ ಕಂಡುಬರುವ ಇಂತಹ ವಿಶಿಷ್ಟತೆಗಳಿಗೆ ವ್ಯಾಪಕತೆಯನ್ನು ಒದಗಿಸುತ್ತವೆ. ಬದಲಾದ ಕಾಲಘಟ್ಟದ ವಿಚಾರ ಸರಣಿಯನ್ನು ತಿಳಿದುಕೊಳ್ಳಲು ಅಥವಾ ತಿಳಿಸಲು ಬಳಕೆಯಾಗುವ ಗಾದೆ ಮಾತುಗಳು ಸಾಂಸ್ಕೃತಿಕ ಬದುಕಿನ ಎಲ್ಲಾ ಬದಲಾವಣೆಗಳಿಗೂ ಹೊಂದಿಕೊಳ್ಳುವಂತಹ ಗುಣವನ್ನು ಹೊಂದಿವೆ.

### ಬೈಯ್ಗುಳಗಳು

ಬೈಯ್ಗುಳಗಳು ಸಾಮಾಜಿಕ ವ್ಯವಸ್ಥೆಯಲ್ಲಿ ತಮ್ಮದೇ ಆದ ವಿಶಿಷ್ಟ ಸ್ಥಾನವನ್ನು ಪಡೆಯುತ್ತವೆ. ಅವುಗಳ ಪ್ರಯೋಗ ಪರಸ್ಪರರ ನಡುವಿನ ಭಿನ್ನಾಭಿಪ್ರಾಯವನ್ನು, ಸಿಟ್ಟು ಸೇಡಿನ ಭಾವನೆಗಳನ್ನೇ ಅಭಿವ್ಯಕ್ತಿಸುತ್ತವೆ. ಗೌಡ-ಆಳು, ಗಂಡ-ಹೆಂಡತಿ ಪರಸ್ಪರ ವೈರಿಗಳು, ಹೀಗೆ ಜಗಳ ಏರ್ಪಟ್ಟಿರುವವರ ನಡುವಿನ ಸಂಬಂಧ ಹಾಗೂ ಸಂದರ್ಭವನ್ನು ಅನುಸರಿಸಿಯೇ ಬೈಯ್ಗುಳಗಳು ಕಂಡುಬರುತ್ತವೆ.

ಬೈಯ್ಗುಳಗಳು ಅಸಹ್ಯಕರವಾದ, ಕೆಟ್ಟ ಅರ್ಥಗಳನ್ನು ಪಡೆದುಕೊಳ್ಳುವುದು ಅಥವಾ ಬಿಡುವುದು ಪರಸ್ಪರ ಜಗಳ ಮಾಡುವವರ ಸಂಬಂಧವನ್ನು ಅವಲಂಬಿಸಿರುತ್ತದೆ. ಪರಸ್ಪರ ದ್ವೇಷ, ಕೋಪಗಳಿಲ್ಲದೆ ಪ್ರೀತಿಯ ಮಾತುಗಳಲ್ಲಿಯೂ ಬೈಯ್ಗುಳಗಳ ಬಳಕೆಯಾಗುತ್ತವೆ. ಇಂತಹ ಸಂದರ್ಭಗಳು ಬೈಯ್ಗುಳದ ಪದಗಳಿಗೆ ಹೀನಾರ್ಥವನ್ನು ಕೊಡದೆ ಪರಸ್ಪರರ ನಡುವಿನ ಸಂಬಂಧದ ಗಾಢತೆಯನ್ನು, ಪ್ರೀತಿ, ವಾತ್ಸಲ್ಯದ ಭಾವವನ್ನು ಅಭಿವ್ಯಕ್ತಿಸುವ ಪದಗಳೆಂಬ ಅರ್ಥವನ್ನು ಪಡೆಯುತ್ತವೆ. ಪ್ರಾದೇಶಿಕ ಬದುಕಿನ ರೀತಿಯಲ್ಲಿ ಕಂಡು ಬರುವ ಬೈಯ್ಗುಳಗಳಿಗೆ ಸಾಹಿತ್ಯಿಕ ಅಭಿವ್ಯಕ್ತಿಯ ಅವಕಾಶವನ್ನು ನೀಡುವುದರ ಮೂಲಕ ವ್ಯಕ್ತಿಯ ಸಾಮಾಜಿಕ ಸ್ಥಾನಮಾನವನ್ನು ಇಲ್ಲಿನ ಕಥನ ಸಾಹಿತ್ಯ ತಿಳಿಸುತ್ತದೆ. ಹೈದರಾಬಾದ್ ಕರ್ನಾಟಕದ ಕಥನ ಸಾಹಿತ್ಯದಲ್ಲಿ ಕಂಡುಬರುವ ಬೈಯ್ಗುಳಗಳ ಸ್ವರೂಪ ಹಾಗೂ ಅವುಗಳ ಬಳಕೆಯ ಸಂದರ್ಭವನ್ನು ನಿದರ್ಶನಗಳ ಮೂಲಕವೇ ವಿಶ್ಲೇಷಿಸುವುದು ಮುಖ್ಯವಾಗಿದೆ.

ನಿಜಾಂ ಆಳ್ವಿಕೆಯ ಸಂದರ್ಭ ಹುಟ್ಟು ಹಾಕಿದ್ದ ರಜಾಕಾರರ ಹಾವಳಿ ಹಾಗೂ ಆಡಳಿತ ಪದ್ಧತಿಯೂ 'ಉರ್ದು' ಭಾಷಿಕ ವಾತಾವರಣವನ್ನು ಈ ಪ್ರದೇಶದಲ್ಲಿ ರೂಪಿಸಿತು. ನಿಜಾಂ ಆಳ್ವಿಕೆಯ ಅಧಿಕಾರಿಗಳು ಮುಖ್ಯವಾಗಿ ಅಮೀನ ಸಾಹೇಬರು ತಪ್ಪಿತಸ್ಥರನ್ನು, ನಿಜಾಂ ಆಳ್ವಿಕೆ ವಿರೋಧಿಸುವವರನ್ನು ಬೈಯ್ಯುವ ರೀತಿಯಲ್ಲಿ ಉರ್ದು ಭಾಷಿಕ ಬೈಯ್ಗುಳದ ಪದಗಳೇ ಬಳಕೆಯಾಗುತ್ತವೆ.

'ಕಿಡಿ' (ಶಾಂತರಸ) ಕತೆಯಲ್ಲಿ ಅಮೀನ ಸಾಹೇಬರು ಬುಡ್ಡಪ್ಪನ ಮಾತಿಗೆ ಪ್ರತಿಯಾಗಿ ಮಾತನಾಡುತ್ತ... "ಏ ಬದ್ಮಾಷ್ ಜೋ ಬೊಲ್ತಾ ಹೈ ಉಸ್ಕೆಲಿಯೆ ಗವಾ ಹೊನಾನಾ. ನಹಿತೋ ಕೈಸೆ ಮಾನ್‌ನಾ? ಅಮೀನ ಸಾಹೇಬ್ ಹೇಳಿದ (ಶಾಂತರಸ; ೧೯೯೭; ಪುಟ : ೪೩). ಇಲ್ಲಿ ಪರಸ್ಪರ ಜನರ ನಡುವೆ ಹಾಗೂ ಅಮೀನ ಸಾಹೇಬರ ನಡುವೆ ದ್ವೇಷ ಇದ್ದಾಗ್ಯೂ ಇರದೆ ಇದ್ದಾಗ್ಯೂ ಬಳಕೆಯಾಗುವ ಬೈಯ್ಗುಳಗಳು ಅಧಿಕಾರಿಯ ದರ್ಪವನ್ನೇ ಸೂಚಿಸುತ್ತವೆ.

ಈ ಭಾಗದಲ್ಲಿ ನಿಜಾಂ ಆಳ್ವಿಕೆಯ ಅಧಿಕಾರಿಗಳ ನಂತರದ ಸ್ಥಾನವನ್ನು ಪಡೆದ ಫ್ಯೂಡಲ್‌ಗಳು ತಮ್ಮ ದರ್ಪ, ಸ್ಥಿತಿವಂತಿಕೆಯ ಪ್ರದರ್ಶನದಲ್ಲಿ ಬೈಯ್ಗುಳಗಳನ್ನು ಆಳುಗಳ ಮೇಲೆ ಪ್ರಯೋಗಿಸುತ್ತಾರೆ. ಕ್ಷುಲ್ಲಕ ವಿಚಾರಕ್ಕೆ ಆಳುಗಳನ್ನು ದೂಷಿಸುವ ಗೌಡ, ಕುಲಕರ್ಣಿಯಂತವರ ವರ್ತನೆಗಳು ಇಂತಹ ಸಂದರ್ಭಗಳಲ್ಲಿ ತಿಳಿದು ಬರುತ್ತವೆ. ಕೆಳವರ್ಗದವರು ತಪ್ಪು ಮಾಡಿದಾಗ ಅಥವಾ ಗೌಡನ, ಇನ್ನಿತರರ ದೃಷ್ಟಿಯಲ್ಲಿ ಕೆಳವರ್ಗದವರ ವರ್ತನೆಯನ್ನು ತಪ್ಪೆಂದು ಭಾವಿಸಿ ಬೈಯ್ಯುವಾಗ ಕಂಡು ಬರುವ ಬೈಯ್ಗುಳಗಳ ಸ್ವರೂಪಕ್ಕೆ ಈ ಭಾಗದ ಕಥನ ಸಾಹಿತ್ಯದಲ್ಲಿ ನಿದರ್ಶನಗಳು ದೊರೆಯುತ್ತವೆ.

"ಯಪ್ಪ....ಅಕಿ..... ಅಕಿ ಬರಂಗಿಲ್ಲೆಪ್ಪ....." ಮಾನಿಂಗ ಹೇಳಿದನು ಮೆತ್ತಗೆ.

"ಯಾಕೆ ಬರಂಗಿಲ್ಲ ಅಂ? ಆಕಿ ಕೇಳ್ದೋಸು ರೊಕ್ಕಾ ರುಪೈ ಕುಡ್ತಿನೆಂತೋ.... ಯಾಕ ಬರಂಗಿಲ್ಲಂತಾಳಕಿ?"

"ರೊಕ್ಕಾರುಪೈ ಮಾತಿಲ್ಲೆಪ್ಪ.... ಆಕಿಗಿ ಎಳ್ಕೊಂಡು ಬರ್ಲಿಕ್ಕಾಗಂಗಿಲ್ಲ ನಮ್ ಕೈಲೀ..."

"ನಿಮ್ ಕೈಲಿ ಆಗಂಗಿಲ್ಲಾ? ಹೆಂತಾ ಡರಪೋಕ ಸೂಳ್ಯಾಮಕ್ಕಳಿದ್ದೀರೆಲೆ ನಿಮ್ಮವ್ವನಾ....

ಒಂದು ಹೆಣ್ಣಿಗಿ ಎಳ್ಕೊಂಡು ಬರ್ಲಕ್ಕ ಆಂಗಗಿಲ್ಲಂತೀರಿ... ಥತ್....ನಾನೇ ಎಳ್ಕೊಂಡು ಬರತ್ತೀನಿ ಆಕೀಗೀ.....

ಅದೆಂತಾ ಹೆಣ್ಣದಾ ನಾನೂ ನೋಡೇ ಬಿಡ್ತೀನೀ...." ಅಂತಂದವನೇ ಗಸಕ್ಕನೆ ಎದ್ದು ನಿಂತನು (ಗೀತಾ ನಾಗಭೂಷಣ; ೨೦೦೨; ಪುಟ : ೩೩). 'ಕಾಗೆ ಮುಟ್ಟಿತು' ಕಾದಂಬರಿಯ ಉಗ್ರಪ್ಪಗೌಡ ತಾನು ಬಯಸಿದ ಹೆಣ್ಣನ್ನು ಆಳು ಮಕ್ಕಳು ಕರೆದುಕೊಂಡು ಬರಲಿಲ್ಲವೆಂದು ಬೈಯ್ಯುತ್ತಾನೆ. 'ಹಿಂಸೆ' (ಗೀತಾ ನಾಗಭೂಷಣ) ಕತೆಯಲ್ಲಿ ಲಕ್ಕಿ ಸಾಯುವ ಅವಸ್ಥೆಯಲ್ಲಿದ್ದ ಗೌಡನ ಬಾಯಿಗೆ ನೀರು ಹಾಕಿದ್ದು ದೊಡ್ಡ ತಪ್ಪಾಗಿ ಹೋಗುತ್ತದೆ. ಗೌಡನ ಮಕ್ಕಳು ಲಕ್ಕಿ ಗಂಡನನ್ನು ಎಳೆದು ತಂದು ಬೈಯ್ಯುತ್ತಾರೆ.

“ಭರಮ್ಯಾ ಕೈ ಜೋಡಿಸಿಕೊಂಡು ಬಂದು ಮೈ ಬಗ್ಗಿಸಿ ನಿಂತನು”, ಏನ್ಲೋ ಹಾದರಕ್ಕ ಹುಟ್ಟಿದ ರಂಡಿಮಗನೇ.... ನಿನ್ನೆಣ್ತಿಗಿ ನಮ್ಮಪ್ಪನ ಟೊಂಕದ ಕೆಳಗ ಹಾಕಿದ್ದೇನಲೆ ನಿನ್ನವ್ವನಾ? ಲಕ್ಕಿಗೀ ನಮ್ಮಪ್ಪಗಾ ಹೆಂತಾ ದೋಸ್ತಿ ಇತ್ತೆಲೆ? ಸಾಯಾ ಮುಂದ ನಮ್ಮಪ್ಪನ ಬಾಯಾಗ ನೀರ್ಹಾಕಿ ಅಂವನ ಜಾತಿ ಕೆಡಸದ್ರಿ.... ಮಂದಿ ಮಕ್ಕಳ ಮುಂದ! ಬೀಗರು ನೆಂಟರ ಮುಂದಾ, ಇಡೀ ಹಳ್ಳಿ ಮಂದಿ ಮುಂದೆಲ್ಲಾ ನಮ್ ಅಣತಮದೇರ ಮಾರಿ ಕೆಳಗ ಮಾಡೋಹಂಗ ಮಾಡಿ ಮಾನಾ ಕಳದ್ರಿ....ನಿನ್ನ ಹೆಣ್ತಿ ಲಕ್ಕಿಗಿ ನಮ್ಮಪ್ಪನ ಮಗ್ಗಲಾಗ ಹಾಕಿದ್ದೇನ್ಲೋ ಮಾದಗಾ? ಆ ಛಿನಾಲಿ ಹ್ಯಾಂಗ ನಮ್ಮಪ್ಪನ ಬಾಯಾಗ ನೀರ ಹಾಕದ್ಳೂ.... ಹಂತಾ ಧೈರ್ಯಾ ಆಕಿಗಿ ಹ್ಯಾಂಗ ಬಂತೋ.....?” ನಾಗಿಂದ್ರಪ್ಪ ಸಿಟ್ಟಿನಿಂದ ಕುದಿಯುತ್ತ ಗರ್ಜಿಸಿದಾಗ ಭರಮ್ಯಾ ತತ್ತರಿಸಿದ. ಅವನ ಮಾತಿಗೆ ಭರಮ್ಯಾ ಮೂಕನಾದಾಗ ಮತ್ತೆ ಅಬ್ಬರಿಸಿದ.

“ಬಾಯಿಬಿಟ್ಟು ಬಗಳೋ ನಿನ್ನವ್ವನಾ..... ನಿಂದೆಲ್ಲಾ ಏನು ಹಿಕ್ಮತಿಯಿತ್ತಂಬಾದು ಹೇಳಿಬಿಡು... ನಮ್ಮಪ್ಪಗಾ ಹೆಂತಾ ಸಂಬಂಧಿತ್ತಂತ ಬೊಗಳೋ ಬೋಸಾಡಿಕೆ?” (ಗೀತಾ ನಾಗಭೂಷಣ; ೨೦೦೬; ಪುಟ: ೨೯೩-೨೯೪). ಉಪಕಾರದ ಕೆಲಸ ಮಾಡಲು ಹೋದ ಲಕ್ಕಿಯ ಬದುಕು ಸಂಕಷ್ಟಕ್ಕೆ ಸಿಲುಕುತ್ತದೆ. ‘ಕಪ್ಪು’ (ಕುಂ. ವೀರಭದ್ರಪ್ಪ) ಕಾದಂಬರಿಯಲ್ಲಿ ಕರಿಗೌಡ ಊರಲ್ಲಿ ಸುತ್ತಾಡಲು ಬಂದಾಗ ಜನ ಸಂಚಾರ ಸ್ಥಗಿತವಾಗುತ್ತಿತ್ತು. ಅದರಲ್ಲೂ ಕೆಳವರ್ಗದವರು ಗೌಡನು ಬಂದಾಗ ಅಡಗಿಕೊಳ್ಳುವುದು ರೂಢಿಯಾಗಿತ್ತು. ಗೌಡ ಊರಲ್ಲಿ ಬಂದಾಗ ಭರಮಜ್ಜ ಮೈಮರೆತು ಹಾಗೆ ಕಟ್ಟೆ ಮೇಲೆ ಕೂತಿರುತ್ತಾನೆ. ಇದೇ ಕಾರಣಕ್ಕೆ ಸಿಟ್ಟಾದ ಗೌಡ ಭರಮಜ್ಜನನ್ನು ಮನೆಗೆ ಕರೆಸಿ “ಎಸ್ಟ್ ಪೊಕ್ರಲೇ ಸುಳ್ಯಾಮಗ್ನೆ ಕಟ್ಟೀಗೆ ಕುಂತ್ಗಂಡಿದ್ದೀ” ಅಂದವನೆ ಗೌಡ ಜಾಡಿಸಿ ಕಾಲಿನಿಂದ ಒದ್ದು ಬಿಟ್ಟಿದ್ದ (ಕುಂ. ವೀರಭದ್ರಪ್ಪ; ೧೯೯೯; ಪುಟ : ೬). ಒಂದೇ ಜಾತಿಯವರಾದ ಪುರುಷರು ಪರಸ್ಪರ ಜಗಳ ಮಾಡಿಕೊಳ್ಳುವಾಗ ಇಲ್ಲವೇ ಬೇರೆ ಜಾತಿಯವರೊಂದಿಗೆ ಜಗಳಕ್ಕೆ ನಿಂತಾಗ ಬೈಯ್ಗಳಗಳು ಕೇಳಿ ಬರುತ್ತವೆ. ಇಲ್ಲಿ ಗೌಡ - ಆಳು ಎಂಬ ಅಂತರ ಇರದೇ ಇದ್ದಾಗ ಪರಸ್ಪರರಲ್ಲಿ ಮಾತು ಬೆಳೆಯುವ ರೀತಿ ಬೈಯ್ಗಳಗಳನ್ನು ಬಳಸುವ ರೀತಿ ಭಿನ್ನವಾಗಿರುತ್ತದೆ. ‘ಕಿಡಿ’ (ಶಾಂತರಸ) ಕತೆಯಲ್ಲಿ ಬುಡ್ಡಪ್ಪನಿಗೆ ತನ್ನ ಹೊಲ್ದಾಗ ನಡೆದಾಡುತ್ತಿದ್ದ ಬುದ್ಧಿವಂತಪ್ಪನ ಮೇಲೆ ಸಿಟ್ಟು ಬಂದಿರುತ್ತದೆ. ಈ ಸಿಟ್ಟಿಗೆ ಇನ್ನೊಂದು ಕಾರಣವೆಂದರೆ ಬುಡ್ಡಪ್ಪನ ಹೆಂಡತಿಯೊಂದಿಗೆ ಬುದ್ಧಿವಂತಪ್ಪ ಅನೈತಿಕ ಸಂಬಂಧ ಹೊಂದಿದ್ದ ಎಂಬುದೂ ಸೇರಿಕೊಂಡಿರುತ್ತದೆ.

> “ಅವೊತ್ತು ಒಂದ್ ಕೈ ನೋಡೇ ಬುಡೋಣ ಎಂದು ಬುಡ್ಡಪ್ಪ ತಯಾರಾಗಿ ನಿಂತಿದ್ದ.
> ಜೋಳದ ದಂಟುಗಳನ್ನು ಸರಿಸುತ್ತ ಬುದ್ಧಿವಂತಪ್ಪ ಬಂದ.
>
> “ಯಾವ್ನಲೆ ಅವ್ನು ಹೊಲ್ದಾಗ ಬರಾವ; ಕಳ್ ಲೋಡಿ ಮಗ? ದೊಡ್ಡ ದನಿಯಲ್ಲಿ
> ಅಂದ ಬುಡ್ಡಪ್ಪ.
>
> “ಕಣ್ ಕಾಣಾದಿಲ್ಲೇನಲೆ ಕುರುಬ? ಕುಂಡೆ ತುಂಬ್ಯದೇನು?” ಅಂದ ಬುದ್ಧಿವಂತಪ್ಪ.
>
> “ಯಾಕಲೆ ಕಬ್ಲಿಗಿ ಜಾತಿ? ಒಲ್ದಾಗಿಂದ ಯಾಕೋಗ್ತೆಲೆ? ಅಕಡಿಂದ ಓಗಾಕ ಬರಾದಿಲ್ಲೇನ್ಲೆ

ಮಗನೆ?" ಎಂದ ಬುಡ್ಡಪ್ಪ.

"ಅಬಬಾ! ಇಷ್ಟ್ ಧೈರ್ಯ ಬಂತೇನ್ಲೆ ಕುರುಬಾ? ಯಾರೋ ಹೇಳಿ ಕೊಟ್ಟಂಗ ಕಾಣಸ್ತದ.

ಮಗನೇ ಅಂತೆಲೆ, ಭಾನ್‌ಚೋತ್, ಸೂಳೇಮಗ್ನೆ?" "ನೀ ಸೂಳೇಮಗ, ನಾನ್ಯಾಕಾಗ್ಲಿ?"

"ಏನಂದಲೆ" ಎಂದು ಬುದ್ಧಿವಂತಪ್ಪಕಾಲಿನ ಚಢಾವು ಕಿತ್ತಿ ನಾಲ್ಕೇಟು ಬಾರಿಸಿ ನೂಕಿದ. ದೊಪ್ಪನೆ ಬುಡ್ಡಪ್ಪ ಬಿದ್ದ (ಶಾಂತರಸ; ೧೯೭೭; ಪುಟ : ೩೪). 'ಕುರುಮಯ್ಯ ಮತ್ತು ಅಂಕುಶದೊಡ್ಡಿ' (ಜಂಬಣ್ಣ ಅಮರಚಿಂತ) ಕಾದಂಬರಿಯಲ್ಲಿ ಜಂಬಯ್ಯ ಮತ್ತು ಬುಡ್ಡಮ್ಮರ ಅನೈತಿಕ ಸಂಬಂಧ ತಿಳಿದು ಜನ ಜಂಬಯ್ಯನನ್ನು ಹೊಡೆಯುತ್ತಾರೆ. ತಮ್ಮ ಕುಲದವರೆಲ್ಲ ಸೇರಿ ಹೊಡೆದ ಸುದ್ದಿ ಕೇಳಿದ ಗ್ಯಾನಪ್ಪ ಜಂಬಯ್ಯನನ್ನು ಕಾಣಲು, ಆತನ ಸಂಬಂಧಿಯಾದ ತಾನು ಆತನಿಗೆ ಬೆಂಬಲಿಗನಾಗಿ ಬಂದಿರುವುದನ್ನು ಹೇಳುತ್ತಾನೆ. ಗ್ಯಾನಪ್ಪ ಮತ್ತು ಕುರಮಯ್ಯರಿಗೆ ಜಗಳ ಆಗುತ್ತದೆ.

"ಜಂಬಯ್ಯನ ನೆಂಟ ಗ್ಯಾನಪ್ಪ ಕಂಠಮಟ ಕುಡಿದು ಗಲಾಟೆ ನಡೆಸಿದ್ದ.

"ತಮ್ಮ ಹೆಂಡರ್ನ ತಾವು ಬಂದೋ ಬಸ್ತಿಯಾಗಿಡದವ್ರು ಮಂದಿನ್ಯಾಕವೊಡಿಬೇಕು.

...ಒಬ್ಬನ ನೋಡಿಕೊಂಡು ನಾಕು ನಾಕು ಜನ ವೋಡಿತಿರ್‍ಯಾ.... ಗಂಡಸ್ರಾದ್ರೆ ಬರ್‍ರಿಲೆ ಒಬ್ಬೊಬ್ರು ತೋರಿಸ್ತಿನಿ ಕೈ..... ಡಿರ್ರಿ ಸವಾಲ್" ತೊಡೆ ಕುಟ್ಟಿ ಕುಟ್ಟಿ ಕೂಗಾಡುತ್ತಿದ್ದ ಗ್ಯಾನಪ್ಪ.

ಕ್ರಿಸ್ತಾನರ ಸ್ಕೂಲಿನಲ್ಲಿ ಜವಾನನ ಕೆಲಸಕ್ಕಿದ್ದ ಗ್ಯಾನಪ್ಪ ತನ್ನ ಸೋದರ ಮಾವ ಜಂಬಯ್ಯನನ್ನು ಹಿಡಿದು ಹಾಕಿದ ಸುದ್ದಿ ಕೇಳಿ ಚಾಕರಿಗೆ ರಜೆ ಹಾಕಿ, ಧೈರ್ಯದ ಟಾನಿಕ್ ಹೆಂಡ ಭರ್ತಿ ಲಗಾಯಿಸಿ ಬಂದಿದ್ದ.

"...ಏನಶೆ ತಾಂಡೆಕ ಬಂದು ಎಳ್ಡು ತಿಂಗಳಾಗಿಲ್ಲ, ಆಗಲೆ ಮಂದಿಮ್ಯಾಗ ಡಿರ್ರಿ ಸವಾಲ್ ಅಂತಿದ್ಯಾ.... ಮಡ್ಡಿ ನೆತ್ತಿಗೇರಿದಂಗ ಕಾಣ್ತದ.... ಎಳ್ಡು ಗಡಿಗಿ ನೀರು ಸುರ್‍ರಿಕೇಸಿ ಇಳುಸಿರಿ ಇವಂದು ಮಡ್ಡಿ" ಎಂದ ಕುರುಮಯ್ಯ.

"ಮತ್ತೇನು.... ಒಬ್ಬನ್ನ ನೋಡಿಕೊಂಡು ಆಸು ಜನವ್ಹೊಡೀಬೇಕಾ? ಹೇಳವ್ರು, ಕೇಳವ್ರು ಯಾರಿಲ್ಲಂತ ತಿಳಕೊಂಡಾರ" ಎಂದ ಗ್ಯಾನಪ್ಪ.

"ಯಾನು ಶ್ಯಾಣೆ ಕೆಲ್ಸ ಮಾಡ್ಯಾನಂತ ಬುಡುಸುಕೋಬೇಕಶೆ, ನಿನ್ನೇತಿನ ಯಾರನ್ನಿಂಗ ಮಾಡಿದ್ರೆ ಸೂಸುಕೊಂತ ಸುಮ್ನೆ ಇರತಿದ್ಯಾ ಬಾಡುಖೋವು" ಎಂದು ರೇಗಾಡಿದ ಕುರುಮಯ್ಯ" (ಜಂಬಣ್ಣ ಅಮರಚಿಂತ; ೧೯೯೪; ಪುಟ : ೨೩-೨೪).

'ಸಣ್ಣಗೌಡಸಾನಿ' (ಶಾಂತರಸ) ಕಾದಂಬರಿಯಲ್ಲಿ ಮೆಹಬೂಬ್ ಜಾನಳನ್ನು ಪಡೆಯಲಾಗದ ಸಿಟ್ಟಿಗೆ ಗಂಗಪ್ಪಗೌಡ ತನ್ನ ಆಳುಗಳನ್ನೆಲ್ಲ ಹುರಿದುಂಬಿಸಿ ಸೂಗನಗೌಡ ಮತ್ತು ಆತನ ಪರವಾಗಿದ್ದವರ

ಮೇಲೆ ಜಗಳಕ್ಕೆ ಬಿಡುತ್ತಾನೆ. ಈ ಹಿನ್ನೆಲೆಯಲ್ಲಿ ಮಾದರಕಾಮ್ಯಾ ಮತ್ತು ಮೇಲ್ಜಾತಿಯ ಶಿವ್ಯಾನ ನಡುವೆ ಜಗಳ ಸಂಭವಿಸುತ್ತದೆ.

"ಮಾದರ ಕಾಮ್ಯಾ ಅವೊತ್ತು ಸಂಜೆ ಕಡೆ ಹೆಂಡದ ಕೇರಿಯಲ್ಲಿ ಸುಟ್ಟ ಮಾಂಸ ತಿನ್ನುತ್ತ ಕುಳಿತಿದ್ದ. ಮುಂದೆ ಹೆಂಡದ ಮಗಿಯಿತ್ತು. ಶಿವ್ಯಾ ಸೊಪ್ಪೆಹೊರೆ ಹೊತ್ತುಕೊಂಡು ಬರುವುದನ್ನು ಅವನು ನೋಡಿದ. ಕೂಡಲೇ ಮಗಿಯಲ್ಲಿಯ ಹೆಂಡವನ್ನು ಗಟಗಟ ಕುಡಿದು ಕೇಕೆ ಹೊಡೆದು, "ಏನ್ ಮನಿಸೇರಲೇ ಇವ್ರು ದೊಡ್ ಜಾತಿ ಜನ್ರು! ಏಳದೊಂದು ಮಾಡದೊಂದು! ಪಿಕನಾಸೆ ಮಕ್ಳು. ಎಂಡ ಕುಡಿತವ, ರಂಡೇರ್ನ ಮಾಡ್ತವ, ಮಾದ್ರಜತಿಗೆ ಮಕ್ಕಂತವ, ಜಾತಿಗೇರ ಜತಿಗೆ ತಿಂತವ" ಎಂದ ಕೂಗುತ್ತ ಜೋಲಿ ಹೊಡೆಯುತ್ತ ಶಿವ್ಯಾನಿಗೆ ಅಡ್ಡಡ್ಡವಾಗಿ ಹೋದ.

"ಸರೆಲೆ ಕಾಮ್ಯಾ, ಮುಟ್ಟೇಗಿ?" ಎಂದ ಶಿವ್ಯಾ.

"ಏನಾಗ್ತದೇಳ್ ಮುಟಿಗೆಂಡ್ರೆ? ದೊಡ್ ಜಾತೇರು ಯಾರ್ಯಾರ್ನೋ ಮುಟಿಗೆಂತರಂತ" ಎಂದು ಶಿವ್ಯಾನ ತೀರ ಹತ್ತಿರ ಬಂದ,

ಕಾಮ್ಯಾ.... "....ಬಾಯಿಗೆ ಬಂದದ್ ಬೊಗಳ್ಬ್ಯಾ, ತಿಕ್‌ನನ್ಮಗನೆ, ಕುಂಡ್ಯಾಗ ಬಾಲ ಇಟಗಂಡು ಸುಮ್ನೆ ನಡಿ, ಇಲ್ದಿದ್ರೆ ಕೊಲ್ಲಿ ಬುಟ್ಟೇನು ಎಂದ ಶಿವ್ಯಾ" (ಶಾಂತರಸ; ೧೯೮೮; ಪುಟ : ೩೧).

ಒಂದೇ ಕುಲದವರು ಇಲ್ಲವೆ ಬೇರೆ ಬೇರೆ ಜಾತಿಯ ಸ್ತ್ರೀಯರು ಪರಸ್ಪರ ಜಗಳಕ್ಕೆ ನಿಲ್ಲುವುದು ಇಲ್ಲಿನ ಕಥನ ಸಾಹಿತ್ಯದಲ್ಲಿ ಕಂಡುಬರುತ್ತದೆ. ಗಂಡನೊಂದಿಗೆ ಹೆಂಡತಿ ಇಲ್ಲವೆ ಹೆಂಡತಿಯೊಂದಿಗೆ ಗಂಡ ಜಗಳಕ್ಕೆ ನಿಲ್ಲುವಾಗ ಕಂಡುಬರುವ ಬೈಯ್ಗಳಗಳು ಆಕ್ರೋಶ, ಕೋಪ, ಅಸಹಾಯಕತೆಯ ಭಾವನೆಗಳನ್ನು ವ್ಯಕ್ತಪಡಿಸುತ್ತವೆ. 'ಕುರುಮಯ್ಯ ಮತ್ತು ಅಂಕುಶದೊಡ್ಡಿ' (ಜಂಬಣ್ಣಅಮರಚಿಂತ) ಕಾದಂಬರಿಯಲ್ಲಿ ಬುಡ್ಡಮ್ಮನೊಂದಿಗೆ ಆಕೆಯ ಗಂಡ ಕ್ಷುಲ್ಲಕ ಕಾರಣಕ್ಕೆ ಜಗಳಕ್ಕೆ ನಿಲ್ಲುತ್ತಾನೆ. ಬುಡ್ಡಮ್ಮ ಈ ಮುಂಚೆ ಇದ್ದ ಮಾರೆಪ್ಪನೆಂಬ ತನ್ನ ಗಂಡನನ್ನು, ಮಗುವನ್ನು ಬಿಟ್ಟು ಬಂದು ಜಂಬಯ್ಯ ನೆಂಬುವವನೊಂದಿಗೆ ಕೂಡಿಕೊಂಡಿರುತ್ತಾಳೆ. ಕೂಡಿಕೊಂಡವನು ಅವಳನ್ನು ಅನುಮಾನಿಸುತ್ತಿರುವುದೇ ವಿನಾಕಾರಣ ಜಗಳಕ್ಕೆ ಕಾರಣವಾಗಿರುತ್ತದೆ. ಬೆಕ್ಕಿನ ಮರಿಗಳ ನೆಪದಲ್ಲಿ ಪರಸ್ಪರರಲ್ಲಿ ಜಗಳ ಪ್ರಾರಂಭವಾಗುತ್ತದೆ.

"ಮರಿಗಳಿದ್ರೆ ನಿನಗಂಟೇನು ಲುಕ್ಸಾನ ಆಗುತಿತ್ತಾ?" ಅಂದಳು ಬುಡ್ಡಮ್ಮ.

"ಔದೇ ಆಗುತಿತ್ತು. ನಿನಮೊದ್ಲು ಗಂಡಗ ಮಗಗ ಇಟ್ಟು ಇಟ್ಟು ಸಾಕಾಗಿಲ್ಲೇನು ನಿನಗ? ಬೆಕ್ಕಿನ ಮರಿಕಡ್ಮಿ ಬಿದ್ದಿದ್ವೇನು ಹಾಳು ಮಾಡಾಕ ನಿನಗ" ಎಂದ ಜಂಬಯ್ಯ.

"ಅಯ್ ಗಳಿಸಿಟ್ಟಿದ್ದಿ ಬಚ್ಚಿಟಗೆಂಡು ಬಚ್ಚಿಟಗೆಂಡು ಮೊದ್ಲ ಗಂಡಗ ಕೂಸೀಗ ಕೊಡಾಕ".

"ಗೊತ್ತಿಲ್ಲೇನೆ ನನಗ ಬಾರಿಗಿ" ಜಲ್ದಿ ಮಾರಿದ ರೊಕ್ಕ ಯಾರಿಗೆ ಕೊಟ್ಟಿದ್ದಿ ನೀನು; ಹೇಳೀ ವಯ್ಯಾಲಿ ಬುಡ್ಡಕ್ಕ.

ಅಷ್ಟರಲ್ಲಿ ಹಾಳು ಬಿದ್ದ ಜೋಪಡಿಯಿಂದ ಬೆಕ್ಕಿನ ಚೀರಾಟ ಕೇಳಿ ಬಂತು. ಬುಡ್ಡಮ್ಮ ಆ ಕಡೆ ಓಡಿದಳು... ಯಾರೋ ಕಲ್ಲೊಂದನ್ನು ಎತ್ತಿ ಕಾದಾಡುತ್ತಿದ್ದ ಬೆಕ್ಕುಗಳ ಕಡೆ ಬೀಸಿ ಬಗೆದರು. ಬಾವುಗ ಓಡಿತು. ತಾಯಿ ಬೆಕ್ಕು ಪಾಳುಬಿದ್ದ ಜೋಪಡಿಗೆ ಓಡಿ ಸತ್ತ ಮರಿಯನ್ನು ಮೂಸಿ ನೋಡಿ ಆರ್ತ ಧ್ವನಿಯಿಂದ ಕೂಗಿತು. ಯಾಕೋ ಏನೋ ಬುಡ್ಡಮ್ಮ ಉಗ್ರವಾದಳು. ಗಂಡನ ಕಡೆ ಕೆಕ್ಕರಿಸಿ ನೋಡಿ ಸಿಟ್ಟಿನಿಂದ ಮುಂದೋಡಿ ಅವನ ಮುಂಗೂದಲ್ಹಿಡಿದು.

"ನೀವರ್‍ರೆ ನೀವರ್‍ರೆ" ಎಂದು ಅವನ ಎದೆಯ ಮೇಲೆ ನಾಲ್ಕು ಗುದ್ದು ಗುದ್ದಿದಳು. ....ಹೆಂಡತಿಯಾದವಳು ನಾಲ್ಕು ಜನರೆದುರು ಆಕ್ರಮಣ ಮಾಡಿ ಅವಮಾನಗೊಳಿಸಿದ್ದಳು.

ಸಿಟ್ಟಿನಿಂದ ಕಟಕಟ ಹಲ್ಲು ಕಡಿದು, ಚಂಗನೆ ನೆಗೆದು; ಅವಳ ತುರುಬು ಹಿಡಿದು ಬಗ್ಗಿಸಿ; ಬೆನ್ನಿನ ಮೇಲೆ ಗುದ್ದಿದ..... "ಚಿನಾಲಿ" ಎಂದು ಗುದ್ದಿದ. "ನಾಡ ಬೋಸುಡಿ" ಎಂದು ಮತ್ತೊಂದು ಏಟು ಹಾಕಿದ (ಜಂಬಣ್ಣ ಅಮರಚಿಂತ; ೧೯೬೪; ಪುಟ : ೭೮-೭೯).

'ಕಾಗೀಕೂಟ' (ಅಮರೇಶ ನುಗಡೋಣಿ) ಕತೆಯಲ್ಲಿ ಸುಮಿಯ ಗಂಡನಾಗಬೇಕಿದ್ದ ಲಿಂಗರಾಜ ಸತ್ತನೆಂಬ ಸುದ್ದಿ ಬಂದು ಮುಟ್ಟಿ ಮನೆಯವರೆಲ್ಲ ದುಃಖಿತರಾದರು. ಸುಮಿಯ ತಾಯಿ ನಾಗಕ್ಕ ಈ ಸಂದರ್ಭದಲ್ಲಿ ಮೈದನನ ಹೆಂಡತಿಯನ್ನು ದೂಷಿಸುತ್ತಾಳೆ. ಮೈದನನ ಹೆಂಡತಿಯಾದ ಹನುಮಕ್ಕ ಗಂಡನ ಸಹಾಯದಿಂದ ಜಗಳಕ್ಕೆ ನಿಲ್ಲುತ್ತಾಳೆ.

".... ಯಾ ಸೂಳೇರು ಕಣ್ಣುಬುಟ್ಟರೋ.... ನಾ ಕಾಣೆ.... ಯವ್ವಾ! ಅವುರು ಕಣ್ಣಿಗೆ ಕಳ್ಳಿ ಹಾಲಾಕಿ ಬೇಲಿ ಬಡಿಯಾ! ಇದೇ ಈಗ ಗೌರಮ್ಮಗ ಹೋಗಿ ಬಂದು ಮನೆ ತುಂಬ ದೀಪ ಬೆಳಗಿದಂಗ ನಿಂತಿದ್ದಳಲ್ಲೋ... ಯವ್ವಾ! ನನ್ನ ಮಗಳ್ನ ನೋಡಿ ಸಹಿಸಲಿಲ್ಲಪ್ಪೋ.... ಈ ಚಿನಾಲೇರು! ಮೂರು ಹೆಣ್ಣು ಹಡಕಂಡ ಈ ತಂಗಿ ಹನುಮಕ್ಕ ಎಲ್ಲಿ ತನ್ನ ಮಗಳಿಗಿ ಲಿಂಗೂನ್ನ ಮಾಡಿಕೊಳ್ಳಬೇಕಂತ ಡಾವು ಹಾಕ್ಕೆಂಡು ಕುಂತು ಕಣ್ಣುಬುಟ್ಟಳೋ..... ಯವ್ವಾ! ಊರು ಸೂಳೆ ಹನುಮಕ್ಕ ತ್ವಾಡೆ ನೀರಿನ್ಯಾಗ ಮುಳುಗ್ಯಾಕಲ್ಲೋ.... ಯವ್ವಾ!....ಅಂತ ನಾಗಕ್ಕ ಅಳುತ್ತ, ಹನುಮಕ್ಕನ ಮ್ಯಾಲೆ ಇಶಕಾರಲು ನಿಂತದ್ದು ಕಂಡ ಯಮುನ, ತನ್ನ ಹತ್ತು ವರ್ಷದ ಒಳಗಿನ ಮೂರು ಹೆಣ್ಣುಮಕ್ಕಳನ್ನ ತೊಡೆಮ್ಯಾಲೇ ಕುಂದ್ರಿಸಿಕೊಂಡಿದ್ದವನು. "ಅದೇನು ಬೊಗಳಕತ್ಯಾಳಲ್ಲಲೇ" ಅಂತ, ಈ ಕಡೆ ಕ್ಯಾಲ ಕೊಟ್ಟು, "ಲೇ ಸೂಳೇ" ಎಂದು ಹೇಣ್ತಿಗೆ ಕುಂತಲ್ಲಿಂದಲೇ ಒದ್ದು, "ಕೇಳಲೇ ಬೋಗಬಡಿ! ನಿಮ್ಮಕ್ಕ ಅದೇನು ಬೊಗಳಾಕ ಹತ್ಯಾಳಲ್ಲ...." ಅಂದ. ಸಲುಪು ಸಲುಪು ಕಿವಿಗೆ ಹಾಕಿಕೊಂಡಿದ್ದ ಹನುಮಕ್ಕ ಗಂಡನ ಮಾತಿನಿಂದ

ಬಲಬಂದುಗಾಗಿ, "ಅದೇನು ಬೊಗಳಾಕ ಹತ್ತಿದ್ದೆಲೇ ನಾಗಕ್ಕ! ನಮ್ಮಪ್ಪ, ನಮ್ಮವ್ವ, ಲಿಂಗೂಪಾರ ನಿನಗೊಂದೇ ಕಳ್ಳುಬಳ್ಳಿಯಂತ ತಿಳಕೊಂಡಿದ್ದೇನಲೇ! ಲಿಂಗೂರಾಜ ಬಂದ್ರು ನನ್ನ ಬಿಟ್ಟು ಇರತಿದ್ದಿಲ್ಲವ್ವೋ...! ಅಂಥವುನು ಇವತ್ತು ಕುಣ್ಯಾಗ ಹೋದನಲ್ಲೋ ಯಪ್ಪಾ....! ಈ ಹೊಲಸು ರಂಡೆ ನಾಗಕ್ಕ, 'ನನ್ನ ಮಗ್ಳಗಂಡಾ.... ನನ್ನ ಮಗ್ಳ ಗಂಡಾಂತ' ಊರು ಕೇರಿಗೆ ಹೇಳಿಕೆಂತ ತಿರುಗಿ ಸಾವು ತಂದಿಟ್ಟಳಲ್ಲವ್ವೋ..... ಯಪ್ಪಾ! ನನ ತಮ್ಮನ್ನ ಕೊಲ್ಲಿದರಲ್ಲೋ.... ಯಪ್ಪಾ....!" ಅಂತ ಸುರುಮಾಡಿ ಬಿಟ್ಟಳು. ಹನುಮಕ್ಕನಿಗೆ ಜವಾಬು ಎಂಬಂತೆ, "ನನ ತಮ್ಮನ್ನ ನನ ಮಗ್ಳ ಗಂಡಾಂತ, ಸುಮ್ಮೀ ಗಂಡಾಂತ ಹೇಳಿಕಂಡು ತಿರುಗುತಿನಲೇ ಚಿನಾಲಿ! ಊರು ಬಿಡಿಕಿ! ನಮ್ಮಪ್ಪ ಅವ್ವನೇ 'ಸುಮ್ಮಿ ನನ್ನ ಸೊಸೆಯಂತ' ಅಂದಿದ್ರಲೇ ಊರು ಸೂಳೆ!" ಅಂತ ನಾಗಕ್ಕ ಎದೆ ಎದೆ ಬಡಕಂಡು, ಎದ್ದು ಹನುಮಕ್ಕನ ಮುಂದೆ ನಿಂತು, ಕೈ ಕೈ ಗುದ್ದಿಕೊಳ್ಳುತ್ತ ಅಣಕಿಸಿ ಕೆಣಕಿ ಬುಟ್ಟಳು. ಭೀಮಕ್ಕಗ, ನಾಗಕ್ಕನ ಆರ್ಭಟ ಕಂಡು ಯಾಕೋ ಸಹಿಸಲಾಗದೆ ಸಿಟ್ಟಂಬದು ಒಳಗಿನಿಂದ ಗುದ್ದಿ ಬಂದು, "ಅಲಲಲಲಲಲ. ಅದ್ವೇನ್ ಹರಕಂತಿದ್ದೆವ್ವ..... ಹರಕ ಆಕಿದು! ಎದ್ದು ಬಂದಾಳ ಎದ್ದು, ಹರಕಂಬಾಕ! ಬಿಡಿಕಿ ನಾಡ ಬಿಡಿಕಿ" ಅಂದಳು. ತಂಗಿಯರಿಬ್ರು ಒಂದಾದಂಗೆ ಕಂಡಿತೋ ನಾಗಕ್ಕ, "ಹರಕಂಬಾಕ ಎದ್ದು ಬಂದಿನಲೇ ಸೂಳೆ! ಗೌಡನ ಮಗನ ಸೂಳೆ!" ಅಂತಂದ ತನ್ನ ತಂಗಿ ಭೀಮಕ್ಕನ ಕೂದಲು ಹಿಡಿದು ಎಳೆದುಬುಟ್ಟು! ಅದೇನು ನಡಿತದಂಬೋ ವೇಳೆಗೆ ಅವರಿಬ್ರಲ್ಲಿ ಘನ ಘೋರ ಕೇಶಕಾಳಗ ಸುರುವಾಗಿ ಬುಟ್ಟಿತು" (ಅಮರೇಶ ನುಗಡೋಣಿ; ೨೦೦೮; ಪುಟ : ೮೫-೮೬).

'ಗತಿ' (ಬಿ.ಟಿ. ಲಲಿತಾನಾಯಕ್) ಕಾದಂಬರಿಯಲ್ಲಿ ಸೋನಿಬಾಯಿ ಸೀರೆಯುಟ್ಟು ತಾನು ಕಲಿತ ಅಕ್ಷರಗಳನ್ನು ಬರೆದು ತೋರಿಸಲು ವೇದಿಕೆಗೆ ಬರುತ್ತಾಳೆ. ಸೋನಿಯ ಗಂಡ ಇದನ್ನೆಲ್ಲ ಸಹಿಸದೆ ಆಕೆಗೆ ಅವಮಾನವಾಗುವಂತೆ ಬೈಯ್ಯುತ್ತಾನೆ. "ಇನ್ನೇನು ಅವಳು ವೇದಿಕೆಯಿಂದ ಇಳಿಯಬೇಕೆನ್ನುವಷ್ಟರಲ್ಲಿ "ಏಯ್ ಹಾದರಗಿತ್ತಿ ರಂಡೇ! ಈಸೊಂದು ಮಂದಿ ಕಲ್ತಾರ.... ಅವರ ಮುಂದೆಲ್ಲ ಸೀರಿಯುಟಕೊಂಡ್ ಬಂದು ಮಿಂಡಗಾರನ ಕೂಡ ಚಕ್ಕಂದ ಆಡ್ತಿದ್ದಿಯೇನಲೆ!" ಎಂದು ಅಬ್ಬರಿಸುತ್ತ ಮಾನ್ಯಾ ವೇದಿಕೆಗೆ ಓಡಿ ಬಂದ. ಎಡಗೈಯಿಂದ ಅವಳ ಕುತ್ತಿಗೆ ಹಿಡಿದು ಬಗ್ಗಿಸಿ ಬಲಗೈಯಿಂದ ಬೆನ್ನಿಗೆ ಗುದ್ದಲಾರಂಭಿಸಿದ. ಅನಿರೀಕ್ಷಿತವಾಗಿ ಈ ಘಟನೆ ಎಲ್ಲರನ್ನೂ ಕ್ಷಣಕಾಲ ದಿಙ್ಮೂಢರನ್ನಾಗಿಸಿತು. "ಏಯ್ ಮಾನಗೆಟ್ಟ ಭಾಡಖಾವ್, ಯದಕ್ಕೋ ಆಕಿನ ಬಡೀತಿ?" ಎಂದು ಬೈಯುತ್ತ ಲಚ್ಮಿ ವೇದಿಕೆಯತ್ತ ನುಗ್ಗಿ ಬಂದಳು (ಬಿ.ಟಿ. ಲಲಿತಾನಾಯಕ್; ೧೯೯೧; ಪುಟ : ೯೯).

'ಬರಗಾಲದ ಒಂದು ದಿನ' (ಕುಂ. ವೀರಭದ್ರಪ್ಪ) ಕತೆಯಲ್ಲಿ ಬರಗಾಲದ ಭೀಕರ ಪರಿಸ್ಥಿತಿಯಲ್ಲಿ ಮನೆಯವರ ಬಗ್ಗೆ, ಹೆಂಡತಿ ಮಕ್ಕಳ ಬಗ್ಗೆ ಯೋಚಿಸದೆ ಬೇಜವಾಬ್ದಾರನಾಗಿದ್ದ ಯಂಕೋಬಿ ಕಾಫಿಗಾಗಿ ಹೆಂಡತಿಯೊಂದಿಗೆ ಜಗಳಕ್ಕೆ ನಿಲ್ಲುತ್ತಾನೆ.

"......ಲೇ ಲಸುಮಿ.... ಕಿವ್ಯಾಗೇನು ಗೂಟ ಬಡಕಂಡಿಯಾ.... ವದರ್ತಿರೋದು ಕೇಳಿಸ್ತಿಲ್ಲೇನೇ! ಎಂದ, ಒಂದ್ ಕಪ್ಪು ಕಾಫೀನ ಸೋಸ್ಕೆಂಡ್ತಗಂಬಾರೆ ನಿನ್ನವ್ವ ಎಂದ.

'ಹಳ್ಳಾಟು ಕುಡಿವಾಗ ದಡ ಸೀನೀರಂತಿತ್ತಂತೆ ಎಂದು ತನ್ನ ಮನನ್ನೆಗೊಣಗಿದ್ದು ಮಾತ್ರ ಕೇಳಿಸಿತು. ಚುನಾವಣಾ ಪ್ರಚಾರ ಕಾಲದ ನೆನಪಿನಿಂದ ಶಕ್ತಿ ಸಂಚಯ ಮಾಡಿಕೊಂಡು "ಏನು! ಒಳ್ಳೆ ಮಾತ್ನಿಂದ ಲಗೂನ ಕಾಫಿ ಮಾಡ್ಕೆಂಡು ಬರ್ತ್ತೀಯಾ.... ಇಲ್ಲಾ ಕಾಲ್ಮುರೀಲಾ" ಎಂದು ಮಲಗಿದಲ್ಲಿಂದಲೇ ಗತ್ತು ಹಾಕಿದ. "ಕಾಲ್ಮುರಿಸಿಕೊಳ್ಳಾಕೆ ನಾನೇನು ಕೈಲಿ ಬಳೆ ತೊಟ್ಕೊಂಡಿಲ್ಲೋ ಸೂರಾ" ಎಂದೊಂದು ಚಣಕ್ಕಂದ ಲಸುಮಿ ಮರು ಗಳಿಗೆಯಲ್ಲೆ ತಾನು ಹೆಂಗಸೆಂಬುದನ್ನ ನೆನಪು ಮಾಡಿಕೊಂಡಳು. ಮತ್ತೆ ಮುಂದುವರಿದು "ಹೊತ್ತು ಮೂರಾಮಾರು ಮೇಲಕ್ಕೇರಿದ್ರೂ ಇನ್ನೂ ಬಿದ್‌ಕೊಂಡಿದ್ದೀಯಲ್ಲಾ ನೀನೊಬ್ಬ ಗಂಡಸೇನು?....ಮಾಡೋಕೆ ವದಕನಿಲ್ದೆ ಗೂಳಿತಿರ್‍ಗವಂಗೆ ತಿರುಗ್ತಿ..... ಒಂದೊಳ್ಳೇದು ಕೇಳ್ತೀಯಾ.... ಒಂದು ಕೆಟ್ಟದ್ಕೇಳ್ತೀಯಾ.... (ಕುಂ. ವೀರಭದ್ರಪ್ಪ; ೨೦೦೪; ಪುಟ : ೫೫೭).

ಕೌಟುಂಬಿಕವಾಗಿ ಕಂಡು ಬರುವ ಭಿನ್ನಾಭಿಪ್ರಾಯಗಳು ಜಗಳಕ್ಕೆ ಕಾರಣವಾದರೆ, ಕೆಲವೇಳೆ ಹೊರಗಿನ ಆದರೆ ಜೀವನದ ಮೇಲೆ ಪರಿಣಾಮ ಬೀರಿರುವಂತಹ 'ಬರಗಾಲ'ದಂತಹ ಭೌಗೋಳಿಕತೆ ತಂದೊಡ್ಡಿರುವ ಬಿಕ್ಕಟ್ಟಿನ ಪರಿಸ್ಥಿತಿಗಳು ಇಲ್ಲಿ ಜಗಳಕ್ಕೆ ಕಾರಣವಾಗಿವೆ.

ಮೇಲ್‌ಜಾತಿಯ ಸ್ಥಿತಿವಂತ ಸ್ತ್ರೀಯರು ಕೆಳವರ್ಗದ ಆಳುಮಕ್ಕಳಿಗೆ ಬಯ್ಯುವ ಸಂದರ್ಭದಲ್ಲಿ ನಾಜೂಕಿನಿಂದಲೇ ಬೈಯ್ಯುವುದಿಲ್ಲ. ಅವರ ಜಾತಿಯನ್ನು ಹೀಯಾಳಿಸಿಯೊ ಇಲ್ಲವೆ ಅವರ ವ್ಯಕ್ತಿತ್ವವನ್ನು ಹೀಯಾಳಿಸಿಯೊ ಮಾತನಾಡುತ್ತಾರೆ. 'ಬೆಳ್ಳ' (ಚೆನ್ನಣ್ಣವಾಲೀಕಾರ) ಕಾದಂಬರಿಯಲ್ಲಿ ಗೌಡನ ಹೆಂಡತಿ ಭಾಗಿರತಮ್ಮಗ ಮಲ್ಯಾನ ಬರಕೋಲಿನ ತುದಿ ಆಕಸ್ಮಿಕವಾಗಿ ತಾಕುತ್ತದೆ. ಆಗ ಗೌಡತಿ ಕೋಪಗೊಂಡು 'ಯಾಕಲೊ ಮಲ್ಯಾ. ಬಾಯಾಗ್ ಮಣ್ಣು ಹಾಕಾ. ಕಣ್ಣು ಕಾಣಾದಿಲ್ಲೇನೋ ಬುಡ್ಡ ನನ್ನ ಹಾಟ್ಯಾ'.

'ನೋಡಲಿಲ್ಲವೋ ಎವ್ವಾ, ಸುಮ್ಮನೆ ಯಾಕ ಬೈಯ್ತೀರಿ'.'ಯಾಕ ಬೈಯ್ತಿರಂತ್ಯಾ ಹೊಲಿಸೂಳಿಮಗನ್ಯಾ. ತಿಂದು ಕುಂಡಿಗ್ಯ ಹಲ್ಲ್ ಬಂದಾವೇನ್ ನಮ್ಮ ಗೌಡ ಬರ್‍ಲಿ ಹ್ಯಾಂಗ್ ಮಾಡಸ್ತೀನಿ ನೋಡ್ ನಿನ್ನ ವದಾ'.

'ಏನನ ಬೈಯ್ಯೆವಾ ಜಾತಿತಕ ಬರಬ್ಯಾಡ್ರಿ. ಹೊಲೆರಂತಂದ್ರ ಜೇಲಿಗೆ ಹಾಕ್ತಾರಂತ ಕೇಳಿಲ್ಲೇನು ಕಾನೂನು'.

ನನಗ್ ಕಾನೂನು ಕಲಸಾಕ್ ಬರತ್ಯಾ. ಬಾದರ್ ಬಸವಿ ಮಗನ್ಯಾ ಏ ಭೀಮ್ಯಾ ಹೋಗಲಿ ಜಲ್ದಿ ನಿಮ್ಮ ಗೌಡಗ್ ಕರಕಂಬಾ'. ಅಂತ ಕಬಾಟಿ ಹಚ್ಚಣ ಜನ ಜಾತ್ರಿ ಆಯ್ತು (ಚೆನ್ನಣ್ಣ ವಾಲೀಕಾರ; ೨೦೦೨; ಪುಟ : ೪೩೮).

'ಬದುಕು' (ಗೀತಾ ನಾಗಭೂಷಣ) ಕಾದಂಬರಿಯಲ್ಲಿ ಕಾಶಮ್ಮ ಕೆಳವರ್ಗದ ಮಹಿಳೆಯಾದರೂ ಜಮಾದಾರನ ಮಗಳೆಂಬ ಗತ್ತು, ಧೈರ್ಯ ಹೊಂದಿದ್ದಳು. ಮಹಿಳೆಯರಿಗೆ ಅದರಲ್ಲೂ ಕೆಳವರ್ಗದ

ಹರೆಯದ ಸ್ತ್ರೀಯರಿಗೆ ಕೆಟ್ಟದಾಗಿ ಮಾತನಾಡುವ ಪುರುಷರ ವರ್ತನೆಯನ್ನು ವಿರೋಧಿಸಿ ನಿಲ್ಲುವ ಆಕೆಯ ದಿಟ್ಟತನ ಸ್ತ್ರೀ ಗೌರವವನ್ನು ಪ್ರತಿನಿಧಿಸುವಂತೆ ಕಂಡುಬರುತ್ತದೆ.

"ಹಾಂ....ಹಾಂ..... ತಗೋರವ್ವಾ.... ಪೂರಾ ಒಂದು ರುಪ್ಪೈ ಕಿಮ್ಮತ್ತಿನ ಗೊಂಬಿ ಅದಾ ಇದೂ.... ನಿನ್ನ ಮಾರಿ ನೋಡಿ ಚಾರಾಣೆ ಕಮ್ಮಿ ಮಾಡಿ ಕುಡ್ಲಕತ್ತೀನಿ ತಗೋ.... ರೊಕ್ಕಾ ತಾ...." ಅಂದನು. ಕಾಶಮ್ಮ ಸರ್ರನೆ ಸೆಟೆದು ನಿಂತಳು "ಏನೋ ನನ್ ಹಾಟ್ಯಾ? ಏನಂದಿ? ನನ್ ಮಾರಿನೋಡಿ ಚಾರಾಣೆ ರೊಕ್ಕ ಕಮ್ಮಿ ಮಾಡ್ತೀನಿ ಅಂತಿಯೇನೋ ಬಿಕನಾಸೀ.... ನನ್ ಮಾರಿಮ್ಯಾಲೇನು ನವಿಲು ಕುಣೇಲಕತ್ತಾದಾ? ನನ್ "ಮಾರಿ ನೋಡಿ" ಅಂತ ಯಾಕಂದಿ ಹೇಳು? ನಿನ್ನಕ್ಕಾ ತಂಗೀ ಮಾರಿ ನೋಡೋ... ನಿಮ್ಮವ್ವನ ಮಾರಿ ನೋಡೋ.... ಏs ಭಾಡ್ಯಾ... ನನ್ ಮಾರಿಗೀರಿ ಅಂತ ನನ್ ತಂಟ್ಯಾಕ ಬಂದ್ರs ಖಬರದಾರ್....ನಿನ್‌ದುಕಾನೆತ್ತಿ ಹಾರ್‍ಯೊಡೀತೀನಿ ನೋಡು... ಏನಂತ ತಿಳ್ಕೊಂಡೀ ನನಗ! ನಾ ಶಿವಳ್ಳಿ ಜಮಾದಾರ ಮಲ್ಲಪ್ಪನ ಮಗಳಿದ್ದೀನೋ ಸಾಬೀ.... ಅವಡಾ ಸವಡಾ ಮಾತಾಡ್ದಿ ಅಂದ್ರ ಬಾಯಾಗಿನ ಹಲ್ಲು ಮುರುಸ್ಗೊಂಡು ಹ್ವಾದಿ ಕಲುಬುರ್ಗಿಗೀ.... ಹುಷಾರ್!" ಅಂತಂದಳು.

ಗದ್ದಲ ಕೇಳಿ ಮಂದಿ ಜಮಾಯಿಸಿ ನಿಂತರು. ಏನು? ಏನು? ಅಂದರು. ಅಂಗಡಿಯ ಸಾಬಿ ಪ್ಯಾಪ್ಯಾ ಮಾಡಿದ. 'ತೋಬಾ...ತೋಬಾ....' ಅಂತಂದು ಗಲ್ಲಗಲ್ಲ ಬಡಿದುಕೊಂಡ. "ನನಗ ಮಾಫ್ ಮಾಡು ಬಹೆನ್..... ನಾ ಖರಾಬ ಮಾತಾಡಿರಲಿಲ್ಲ ನಿನಗ. ತಪ್ಪಾಯ್ತು ಬೇಕಾದ್ರ ಈ ಗೊಂಬೀಗಿ ನೀ ರೊಕ್ಕಾನೇ ಕುಡಬ್ಯಾಡವ್ವ.... ಪುಕ್ಕಟಿ ಕುಡ್ತೇನೆಂತ! ನಿನ್ ಮಗಳಿಗಿ ನನ್‌ಕಡಿಂದ.... ತಗೋ ಬೇಟೀ....." ಅಂತ ಗೊಂಬಿ ತೆಗೆದು ಬೆಳ್ಳಿಯ ಕೈಗಿಟ್ಟ.

"ಏs ಏs.... ನಿನ್ ದಾನಾ ಬ್ಯಾಡ ನಮಗ.... ಇಕಾ ತಗೋ...." ಅಂತ ತನ್ನ ಸೀರೆಯ ಬಾಳೆಗಂಟಿನಿಂದ ಒಂದು ರುಪ್ಪೈ ಬಂದಿ ಹೊರಗೆಳೆದು ಅವನೆಡೆಗೆ ಬಿಸಾಡಿದಳು" (ಗೀತಾ ನಾಗಭೂಷಣ; ೨೦೦೭; ಪುಟ : ೪೯).

ತಮಗಾದ ಅನ್ಯಾಯಕ್ಕೆ ಪ್ರತಿಭಟನೆಗಿಳಿಯುವ ಮಹಿಳೆಯರು ಸಂಬಂಧಪಟ್ಟ ಅಧಿಕಾರಿಗಳೊಂದಿಗೆ, ತಮಗೆ ಅನ್ಯಾಯ ಮಾಡಿದವರ ವಿರುದ್ಧ ಜಗಳಕ್ಕೆ ಬೀಳುತ್ತಾರೆ. 'ಹೂವ ತರುವ ಮನೆಗೆ' (ಕುಂ. ವೀರಭದ್ರಪ್ಪ) ಕಥೆಯಲ್ಲಿ ಮಲ್ಲಿಗೆನ ಹಳ್ಳಿ ಗ್ರಾಮದ ಹೂವಿನ ಮಾರಾಟ ಹಾಗೂ ಬೆಳೆಯನ್ನು ನಿಷೇಧಿಸಿದ ಕಾರಣ ಮಹಿಳೆಯರು ಪ್ರತಿಭಟನೆಗೆ ಇಳಿದಿರುತ್ತಾರೆ. ಹೂವಿನ ನಿಷೇಧಾಜ್ಞೆಯನ್ನು ಊರಿನಲ್ಲಿ ಹರಡದಂತೆ ತಳವಾರ ಚಂದ್ರೂನಲ್ಲಿ ಮಹಿಳೆಯರು ಬೇಡಿಕೊಳ್ಳುತ್ತಾರೆ. ಹಾಗೊಂದು ವೇಳೆ ಶಿರಸ್ತೇದಾರ ಕೆಲಸದಿಂದ ತೆಗೆದು ಹಾಕಿದರೆ ನಿನ್ನ ಮನೆತನ ನಾವು ನೋಡಿಕೊಳ್ಳುತ್ತೇವೆಂದು ಮಹಿಳೆಯರು ಹೇಳಿದ್ದರು. ಮಹಿಳಾ ಪ್ರತಿಭಟನಾಕಾರರ ಮಾತು ಮೀರಿ ಚಂದ್ರು ಹೂವಿನ ಮೇಲಿನ ನಿಷೇಧಾಜ್ಞೆಯನ್ನು ಊರಲ್ಲಿ ಸಾರಿದ್ದನು. ಮಹಿಳೆಯರ ಕೈಗೆ ಸಿಗದೆ ಓಡಿ ಹೋಗಿದ್ದ ಚಂದ್ರು ಆಕಸ್ಮಿಕವಾಗಿ ಊರಿನಲ್ಲಿ ಕಾಲಿಟ್ಟು ಬರುತ್ತಿರುವುದನ್ನು ಕಂಡ ಚೆಲುವಕ್ಕ ಆತನೊಂದಿಗೆ ಜಗಳಕ್ಕೆ ನಿಲ್ಲುತ್ತಾಳೆ.

"…..ಚೆಲುವಕ್ಕ ಈತನನ್ನು ಗುರುತಿಸಿ ಚಿರತೆಯಂತೆ ಆಕ್ರಮಣ ಮಾಡಿದಳಂತೆ. ಆಕೆ ಕೂಗಿಕೊಂಡೇಟಿಗೆ ಇತರೇ ಮಹಿಳೆಯರೂ ಓಡಿ ಬಾರದೆ ಇರಲಿಲ್ಲ. ಅವರೆಲ್ಲರಿಂದ ತಪ್ಪಿಸಿಕೊಂಡೂ ಕೊಂಡೂ ಸುಸ್ತಾಗಿದ್ದ ಚಂದ್ರ ಇದರಲ್ಲಿ ತನ್ನದೇನೂ ತಪ್ಪಿಲ್ಲ ಸ್ವಾಮೀ…. ಎಂದು ತನ್ನನ್ನು ತಾನು ಸಮರ್ಥಿಸಿಕೊಳ್ಳುವ ಪ್ರಯತ್ನ ಮಾಡಿದ. 'ಲೋ ದ್ರೋಹಿ ನೀನು ತಾಯಿ ಗರ್ಭದಲ್ಲಿ ಅಡಗಿದ್ರೂ ಬಿಡೋಪೈಕಿಯಲ್ಲ ನಾವು ಹೇಲ್ತಿನ್ನೋ ಕೆಲಸ ಮಾಡೋದು ಮಾಡಿ ಕಳ್ಳತನದಿಂದ ಊರಿಗೆ ಬಂದಿದ್ದೀಯೇನು! ಎಂದು ಅವನ ಚೆಂಡೆಗೆ ಕೈ ಹಚ್ಚಿದರು…. ಘಟನೆಯ ಪೂರ್ವಾಪರ ಒಂದಿನಿತೂ ತಿಳಿಯದ ಮಲ್ಲೇಶಿ ತಾನೇ ಏನು ಮಾಡಿಯಾನು? ಅಕ್ಕಂದಿರಾ - ತಂಗಿಯಂದಿರಾ! ಎಂದು ಏನೋ ಹೇಳುವ ಪ್ರಯತ್ನ ಮಾಡಿದ (ಕುಂ. ವೀರಭದ್ರಪ್ಪ; ೨೦೦೭; ಪುಟ : ೩೦-೩೧).

ಪ್ರಾದೇಶಿಕತೆಯನ್ನು ಮೈಗೂಡಿಸಿಕೊಂಡಿರುವ ಇಲ್ಲಿನ ಕಥನ ಸಾಹಿತ್ಯ ಭಾಷಿಕವಾಗಿ ಕಂಡುಬರುವ ಎಲ್ಲಾ ವಿಶಿಷ್ಟ ಅಂಶಗಳನ್ನು ಕಥೆಯ ಅಭಿವ್ಯಕ್ತಿಗೆ ಬಳಸಿಕೊಳ್ಳುತ್ತದೆ. ಮನುಷ್ಯ ವರ್ತನೆಯ ಒಳಿತು-ಕೆಡುಕುಗಳನ್ನು ಬಿಂಬಿಸಲು ಬಳಕೆಗೊಳ್ಳುವ ಭಾಷೆಯ ವಿಭಿನ್ನ ಸ್ವರೂಪಗಳು ಕಥನದಲ್ಲಿ ಕಂಡು ಬರುತ್ತವೆ. ಬೈಯ್ಗಳಗಳು ಪ್ರಾದೇಶಿಕ ವಿಶಿಷ್ಟ ಭಾಷೆಯ ಭಾಗವಾಗಿ ಮಹತ್ವ ಪಡೆಯುತ್ತವೆ.

ಕೋಪ, ದ್ವೇಷ, ಜಗಳದ ಕಾರಣಗಳಿಗಾಗಿಯೇ ಬೈಯ್ಗಳಗಳ ಬಳಕೆ ಕಂಡು ಬರುವುದಿಲ್ಲ. ಕೆಲವೇಳೆ ಪ್ರೀತಿಯ, ವಾತ್ಸಲ್ಯದ ಅಭಿವ್ಯಕ್ತಿಗೂ ಬೈಯ್ಗಳಗಳನ್ನು ಬಳಸುವುದು ಇಲ್ಲಿನ ವಿಶಿಷ್ಟತೆಯಾಗಿದೆ. ಪ್ರೀತಿ, ವಾತ್ಸಲ್ಯದ ಮಾತಿಗೆ ಬೈಯ್ಗಳ ಬಳಸುವ ಪ್ರಾದೇಶಿಕರ ಮಾತು ಇಲ್ಲಿನ ಕಥನದಲ್ಲಿ ಕಂಡು ಬರುತ್ತದೆ.

'ಕಾಗೆ ಮುಟ್ಟಿತು' (ಗೀತಾ ನಾಗಭೂಷಣ) ಕಾದಂಬರಿಯಲ್ಲಿ ಗಂಗಮ್ಮ ಗೌಡತಿ ತನ್ನ ಬಾಲ್ಯದ ಗೆಳತಿ ಕಾಳಿಯೊಂದಿಗೆ ಆತ್ಮೀಯತೆಯಿಂದ ಮಾತಿಗಿಳಿಯುತ್ತಾಳೆ. ದಾರಿಯಲ್ಲಿ ಇಬ್ಬರೂ ತಮ್ಮ ತಮ್ಮ ಸ್ಥಿತಿಗಳನ್ನು ಹೇಳಿಕೊಳ್ಳುತ್ತಿರುವಾಗ ಸಂಗವ್ವಾಯಿ ಕಾಳಿಯನ್ನು ಉದ್ದೇಶಿಸಿ ಪ್ರೀತಿಯಿಂದ ಮಾತಾಡುತ್ತಾಳೆ.

"ಮೂರು ಮಕ್ಕಳಿಗೇ ಸಾಕು ಮಾಡು. ಗೋರಮೆಂಟಿನವರು ಎಡ್ಡೇ ಮಕ್ಕಳು ಸಾಕು ಅಂತ ಹೇಳ್ತಾರಲ್ಲೇ…. ನೀ ಹಿಂಗ್ ಮನ್ಯಾಗೆಡ್ನು, ಹೊಟ್ಟ್ಯಾಗೊಂದು ಅನ್ಕೋತ ವರ್ಸಿಗೊಂದೊಂದು ಹಡ್ಕೋತ ಕುಂತ್ರ ಹ್ಯಾಂಗೇ ಕಾಳೀ…..?" ಗಂಗಮ್ಮನೂ ನಗುತ್ತ ಕೇಳಿದಳು.

"ನಾ ಯೇನು ಮಾಡ್ಲೇ ಗೆಳತೀ….. ನಾ ಏಟು ಬ್ಯಾಡಂದ್ರೂ ಅಂವ ಕೇಳ್ಬೇಕಲ್ಲ…." ಅಂದಳು. "ಹ್ಯಾಂಗ ಕೇಳಂಗಿಲ್ಲೇ ಹೊಯಿಮಲ್ಲೀ…. ರಾತ್ರಿ ಹಾಸಗಿಗಿ ಬರಬ್ಯಾಡಂತ್ಹೇಳು… ಮಗ್ಗುಲಿಗಿ ಗಂಡಬೇಕು, ಮಡಿಲಿಗಿ ಮಕ್ಕಳು ಬ್ಯಾಡಂದ್ರ ಹ್ಯಾಂಗೇ ಭೋಸಡಿ?" ಸಂಗವ್ವಾಯಿ ನಕ್ಕಳು (ಗೀತಾ ನಾಗಭೂಷಣ; ೨೦೦೨; ಪುಟ : ೧೮). 'ಊರಮ್ಮ' (ಅಮರೇಶ ನುಗಡೋಣಿ) ಕತೆಯ ಊರಮ್ಮ ತಾನು ಇಷ್ಟಪಡುವ, ಪ್ರೀತಿಸುವ ಭೀಮನ ಬೆಳವಣಿಗೆ ಕಂಡು ಸಂತೋಷಪಡುತ್ತಾಳೆ. 'ಅಯ್ಯಯ್ಯ…. ಪೀಚುಗಾ!

ಹೆಂಗಾಗ್ಯಾನಲ್ಲವ್ವ! ಹಲಿಗೆ ಬಾರಿಸದು ಎಲ್ಲಿ ಕಲಿತು ಬಂದನೋ ಶಿವನೇ....' ಅಂತ ಹಿಗ್ಗಿದಳು (ಅಮರೇಶ ನುಗಡೋಣಿ; ೨೦೦೮; ಪುಟ : ೧೬೦). ಪ್ರೀತಿಯ ಅಭಿವ್ಯಕ್ತಿಯಲ್ಲಿ ಆತ್ಮೀಯ ಮಾತಿನಲ್ಲಿ ಬಳಕೆಯಾಗುವ ಬೈಯ್ಗಳುಗಳಿಗೆ ಹೀನಾರ್ಥವಿರುವುದಿಲ್ಲ. ಅದನ್ನು ಸಂದರ್ಭೋಚಿತವಾಗಿ ಬಳಸುವವರಿಗೆ ಕೇಳುವವರಿಗೆ ಅದರ ಅರ್ಥದ ಅರಿವಿದ್ದು ಯಾವುದೇ ರೀತಿಯ ಅಪಾರ್ಥದ ವಿರೋಧಿ ಧ್ವನಿ ಇಲ್ಲಿ ಕೇಳಿ ಬರುವುದಿಲ್ಲ.

'ವಾಸ್ತವ' (ಗೀತಾ ನಾಗಭೂಷಣ) ಕತೆಯಲ್ಲಿ ಬಕ್ಕವ್ವಾಯಿ ತಮ್ಮ ಕಾಲದಲ್ಲಿ ಗಂಡನೊಂದಿಗೆ ಕುಳಿತು ಉಣ್ಣುವ, ಸಿಂದಿ ಕುಡಿಯುವ ಸ್ವಾತಂತ್ರ್ಯವಿಲ್ಲದ್ದನ್ನು ನೆನೆದು ಮರಗುತ್ತಾಳೆ. ಶಾಣವ್ವ ಹೊನ್ನಪ್ಪರ ನಡುವಿನ ಪ್ರೀತಿ, ಸ್ವಾತಂತ್ರ್ಯವಾದ ಮುಕ್ತ ವಾತಾವರಣವಿದ್ದುದು ಕಂಡು ಬೆರಗಾಗುತ್ತಾಳೆ.

"ಸಂಡೇ ಪಾಲ್ಟಿ ನಡೀತೇನೋ ಹೊನ್ನಪ್ಪಾ? ಶಾಣೀ ನಿನ್ ನಸೀಬು ಛಂದದಾನೇ ಪೋರಿ, ಹಿಂತಾಭಲೋ ಗಂಡ ಸಿಕ್ಕಾನ, ನಮ್ಮ ಗಂಡಗೋಳು ಹಿಂಗೆಲ್ಲಾ ಹೆಂಡ್ರಿಗಿ ಮುಂದ ಕೂಡಸ್ಗೊಂಡು ಸಿಂದಿ ಕುಡ್ಸಿ ನೆತ್ತಿ ಮ್ಯಾಲೇರಸ್ಗೋತಿರಲಿಲ್ಲವ್ವ..... ಏನಿದ್ದರನೂ ನಾವೆಲ್ಲಾ ಕದ್ದೂ ಮುಚ್ಚೇ ಕುಡೀಬೇಕಾಗಿತ್ತು....." ಅನ್ನುತ್ತಿದ್ದಳು. ಹೊನ್ನಪ್ಪ ಶಾಣವ್ವ ನಗುತ್ತಿದ್ದರು. "ಬಾರೇ ಚಿಗವ್ವಾ ಇಕಾಡೀ...." ಅಂತ ಕರೆದು ಅವಳಿಗೂ ಒಂದು ಗಿಲಾಸು ತುಂಬಿಕೊಟ್ಟು. "ಕುಡಿಯೇ ನಿನ್ನವ್ವನಾ.... ಸತ್ತುಸೊರಗದಾಗಿರೋ ಆ ನಮ್ ಚಿಗಪ್ಪಗ ಯಾಕ ಬದಲಾಮಿ ಮಾಡ್ತೀ....." ಅನ್ನುತ್ತಿದ್ದ (ಗೀತಾ ನಾಗಭೂಷಣ; ೨೦೦೬; ಪುಟ : ೭೫).

ಪ್ರಾದೇಶಿಕ ಭಾಷೆಯ ವಿಶಿಷ್ಟತೆಯಲ್ಲಿ ಒಂದಾಗಿರುವ ಬೈಯ್ಗಳಗಳು ಸಾಮಾಜಿಕವಾಗಿ ಸುತ್ತಲಿನವರ ಗಮನ ಸೆಳೆಯುವಂತಹ ವಿಚಾರಗಳು. ವಿಭಿನ್ನ ಸಮುದಾಯಗಳ ನಡುವಿನ ಬೈಯ್ಗಳದ ಸ್ವರೂಪ, ಸ್ವತಃ ಒಂದೇ ಸಮುದಾಯದವರಲ್ಲಿ ಕಂಡುಬರುವ ಬೈಯ್ಗಳದ ಸ್ವರೂಪ ಇಲ್ಲಿ ಭಿನ್ನವಾಗಿದೆ. ಅದರಲ್ಲೂ ಮುಖ್ಯವಾಗಿ ಗೌಡ - ಆಳುಗಳ ನಡುವಿನ ಅಂತರ ಬೈಯ್ಗಳದಲ್ಲಿ ಸ್ಪಷ್ಟವಾಗಿ ಕಂಡುಬರುತ್ತದೆ.

ಕೆಳವರ್ಗದ ಹಾಗೂ ಮೇಲ್ವರ್ಗದ ಗಂಡ - ಹೆಂಡತಿಯರಲ್ಲಿ ಕಂಡುಬರುವ ಜಗಳದ ಸ್ವರೂಪ ಹಾಗೂ ಬೈಯ್ಗಳದ ಸ್ವರೂಪಗಳು ಭಿನ್ನವಾಗಿವೆ. ಆದರೆ ಅಸಹಾಯಕ ಸ್ಥಿತಿಯನ್ನು ಅನುಭವಿಸುವವಳು ಮಾತ್ರ ಹೆಣ್ಣೇ ಎಂಬುದು ಎರಡೂ ವರ್ಗಕ್ಕೆ ಅನ್ವಯಿಸುತ್ತದೆ. ಆದರೆ ಯಾವ ಸಮುದಾಯವೇ ಬೈಯ್ಗಳಗಳಾಗಿ ಆಗಲಿ ಬಳಕೆಯಾಗುವ ಪದಗಳ ಮುಖ್ಯ ಉದ್ದೇಶವೇ ಎದುರುಗಿನ ವ್ಯಕ್ತಿಗಳನ್ನು ಹೀಯಾಳಿಸುವ, ಅವಮಾನಿಸುವ ಇಲ್ಲವೆ ಕೆಣಕುವುದಾಗಿರುತ್ತದೆ. ಇಂತಹ ಬೈಯ್ಗಳಗಳ ಬಳಕೆ ಎಲ್ಲಾ ಪ್ರದೇಶಗಳಲ್ಲೂ ಕಂಡುಬರುತ್ತದೆ. ಆದರೆ ಕೆಲ ಬೈಯ್ಗಳ ಪದಗಳು ಪ್ರಾದೇಶಿಕ ಅನನ್ಯತೆಯನ್ನು ಪಡೆದುಕೊಂಡಿರುತ್ತವೆ. ಇಂತಹ ಅನನ್ಯತೆಯನ್ನು ಇಲ್ಲವೆ ಪ್ರಾದೇಶಿಕ ಬದುಕಿನ ಸಹಜತೆಯನ್ನು ತೆರೆದಿಡುವ ಹಿನ್ನೆಲೆಯಲ್ಲಿ ಕಥನ ಸಾಹಿತ್ಯದಲ್ಲಿ ಬೈಯ್ಗಳಗಳು ಕಂಡುಬರುತ್ತವೆ.

ಹೈದರಾಬಾದ್ ಕರ್ನಾಟಕದ ಕಥನ ಸಾಹಿತ್ಯದಲ್ಲಿ ಕೆಲ ವಿಶಿಷ್ಟ ಬೈಯ್ಗಳಗಳನ್ನು ಗುರುತಿಸ ಬಹುದಾಗಿದೆ. ಉರ್ದು ಭಾಷೆಯ ಬೈಯ್ಗಳಗಳಾದ ಬದ್ಮಾಷ್, ಹರಾಂಜಾದಾ, ಬಾನ್‌ಚೋದ್

ಮುಂತಾದವುಗಳು ಕಂಡುಬರುತ್ತವೆ. ಇವುಗಳಲ್ಲದೆ ವಾತ್ಸಲ್ಯದ ಅಭಿವ್ಯಕ್ತಿಗಾಗಿ ಬಳಸುವ ಬೈಯ್ಗಳಗಳಲ್ಲಿ ಇರುವ ಆತ್ಮೀಯತೆ ಈ ಪ್ರದೇಶದ ವೈಶಿಷ್ಟವೆಂದು ಹೇಳಿದರೆ ತಪ್ಪಾಗದು. ಪ್ರದೇಶವೊಂದರ ಭಾಷಿಕ ವೈಶಿಷ್ಟ್ಯಗಳಲ್ಲಿ ಬೈಯ್ಗಳಗಳನ್ನು ಕ್ಷುಲ್ಲಕ, ಅಸಹ್ಯಕರವೆಂದು ಕಡೆಗಣಿಸಲಾಗದು. ಪ್ರಾದೇಶಿಕ ಸಂವೇದನೆಯನ್ನು ಗ್ರಹಿಸುವಲ್ಲಿ ಬೈಯ್ಗಳಗಳು ಸಹಕಾರಿಯಾಗಿವೆ.

## ಪ್ರಾದೇಶಿಕ ವ್ಯಕ್ತಿನಾಮಗಳು

ಪ್ರಾದೇಶಿಕವಾಗಿ ಜನರನ್ನು ಗುರುತಿಸಲು ಲಿಂಗ, ಆಕಾರದಂತಹ ದೈಹಿಕ ರಚನೆಗಳು ಮಾನದಂಡಗಳಾಗುವಂತೆ ವ್ಯಕ್ತಿನಾಮಗಳೂ ಇಂತಹ ಗುರುತಿಸುವಿಕೆಯ ಮಾನದಂಡಗಳಾಗಿವೆ. ವಿಭಿನ್ನ ಸ್ಥಾನಮಾನದ ಜನರನ್ನು ಅವರದೇ ಆದ ಜಾತಿ, ವೃತ್ತಿಯೊಂದಿಗೆ ವಿಶಿಷ್ಟವಾಗಿ ಗುರುತಿಸಲಾಗುತ್ತದೆ.

ಪ್ರಾದೇಶಿಕವಾಗಿ ಜನರನ್ನು ವಿಶಿಷ್ಟವಾಗಿ ಗುರುತಿಸಲಿರುವಲ್ಲಿ ವ್ಯಕ್ತಿನಾಮಗಳು ಮುಖ್ಯವಾಗುತ್ತವೆ. ವ್ಯಕ್ತಿನಾಮಗಳು ಇರುವಂತೆ ವ್ಯಕ್ತಿಗಳು ಇರದೆ ವ್ಯತಿರಿಕ್ತವಾಗಿರುವ ಸಾಧ್ಯತೆಗಳಿರುತ್ತವೆ. ಬಡವನೊಬ್ಬನನ್ನು 'ಕುಬೇರಪ್ಪ'ನೆಂದು, ಅತ್ಯಂತ ಕುರೂಪಿಯನ್ನು 'ಸುಂದರಿ'ಯೆಂದು ಕರೆಯುವ ವ್ಯತಿರಿಕ್ತ ಪರಿಸ್ಥಿತಿಗಳನ್ನು ವ್ಯಕ್ತಿನಾಮಗಳಿಂದ ಗುರುತಿಸಲು ಸಾಧ್ಯ. ಪ್ರಾದೇಶಿಕವಾದ ವಿಶಿಷ್ಟತೆಗಳನ್ನು ಗುರುತಿಸುವಲ್ಲಿ ವ್ಯಕ್ತಿನಾಮಗಳು ಪ್ರಾಧಾನ್ಯತೆಯನ್ನು ಪಡೆಯುತ್ತವೆ. ನಿರ್ದಿಷ್ಟ ಜಾತಿ, ವೃತ್ತಿಯನ್ನು ತಿಳಿಸುವ ವ್ಯಕ್ತಿನಾಮಗಳು ಪರಸ್ಪರರ ನಡುವಿನ ಅಂತರವನ್ನು ಮಾತ್ರವಲ್ಲದೆ ಪ್ರಾದೇಶಿಕವಾಗಿ ರೂಢಿಯಲ್ಲಿರುವ ವ್ಯಕ್ತಿ ವಿಶೇಷಣಗಳನ್ನು ತಿಳಿಸುತ್ತವೆ. ಮಲೆನಾಡಿನ ಸಂದರ್ಭದಲ್ಲಿ 'ಕಣ್ಣಾಪಂಡಿತ', 'ಲುಂಗಿಸಾಬಿ' ಎಂಬ ವ್ಯಕ್ತಿನಾಮಗಳು ಶಾಬ್ದಿಕವಾದ ಅಂತರಗಳನ್ನಲ್ಲದೆ ಜಾತಿಗನುಗುಣವಾದ ಅಂತರಗಳನ್ನು ಅಭಿವ್ಯಕ್ತಿಸುತ್ತವೆ. 'ಕಣ್ಣಾಪಂಡಿತ' ಬ್ರಾಹ್ಮಣ ಸಮುದಾಯವನ್ನು, 'ಲುಂಗಿಸಾಬಿ' ಮುಸ್ಲಿಂ ಸಮುದಾಯವನ್ನು ಪ್ರತಿನಿಧಿಸುತ್ತಾರೆ. ವ್ಯಕ್ತಿನಾಮಗಳು ಸಾಮಾಜಿಕ ವಲಯದ ಅಂತರಗಳನ್ನು ಪ್ರತಿನಿಧಿಸುತ್ತವೆ ಹಾಗೂ ಪ್ರಾದೇಶಿಕವಾದ ಕೆಲ ಭಾಷಿಕ ವಿಶಿಷ್ಟತೆಗಳನ್ನು ಈ ಮೂಲಕ ಕಟ್ಟಿಕೊಡುತ್ತವೆ.

* ಜಲಾಲ, ಪೀರ, ಬಾಷಾ, ರಸೂಲ, ಬಡೇಸಾಬ, ಖಾಜಾಸಾಬ ಮುಂತಾದ ವ್ಯಕ್ತಿನಾಮಗಳು ಮುಸ್ಲಿಂ ಸಮುದಾಯದ ಪುರುಷರನ್ನು ಪ್ರತಿನಿಧಿಸುತ್ತವೆ.
* ಇದೇ ರೀತಿ ಜಮಾಲಬಿ, ಹುಸೇನವ್ವ, ಜಮರುದ್ ಬೇಗಂ, ಷಿರಿನ್, ಮುಂತಾದವುಗಳು ಮುಸ್ಲಿಂ ಸಮುದಾಯದ ಸ್ತ್ರೀಯನ್ನು ಪ್ರತಿನಿಧಿಸುತ್ತವೆ.
* ರಾಘುವೇಂದ್ರ, ಆಚಾರ್ಯ, ಶೇಷಪ್ಪ ಕುಲಕರ್ಣಿ, ಶಾಸ್ತ್ರೀ, ದ್ವೆಯಪಾಯನ ಮುಂತಾದ ವ್ಯಕ್ತಿನಾಮಗಳು ಬ್ರಾಹ್ಮಣ ಸಮುದಾಯವನ್ನು ಪ್ರತಿನಿಧಿಸುತ್ತವೆ.
* ರಾಚಯ್ಯ, ಸೂಗಯ್ಯ, ಮಲ್ಲಯ್ಯ, ಗಂಗಾಧರ ಸ್ವಾಮಿ, ಪತ್ರಿಮಠದಸ್ವಾಮಿ, ಮುಂತಾದವುಗಳು ವೀರಶೈವ ಸಮುದಾಯವನ್ನು ಪ್ರತಿನಿಧಿಸುತ್ತವೆ.

* ಡೋಮ, ಕೆಂಪುಗ, ದುರಗ, ನಡ್ಯಾ, ಮುಂತಾದವುಗಳು ಕೆಳವರ್ಗದ ಸಮುದಾಯವನ್ನು ಪ್ರತಿನಿಧಿಸುತ್ತವೆ.

ಬಹುಪಾಲು ಪುರುಷರ ಹೆಸರುಗಳಿಂದ ಜಾತಿಯು ತಿಳಿದುಬಂದಂತೆ ಸ್ತ್ರೀಯರ ಹೆಸರುಗಳಲ್ಲಿ ಜಾತಿಯು ತಿಳಿದುಬರುವುದಿಲ್ಲ. ನಿರ್ದಿಷ್ಟ ಜಾತಿಯ ಸ್ತ್ರೀಯರನ್ನು ಗುರುತಿಸಲು ಜಾತಿಸೂಚಕ ಪದಗಳನ್ನು ಸೇರಿಸಲಾಗಿರುತ್ತದೆ.

* ಕಟಗರ ತ್ಯಾಗವ್ವ, ಜೀರ್ ಅನ್ನಮ್ಮ, ಕುರಬರ ನಿಂಗಿ, ಉಪ್ಪಾರ ನೀಲಮ್ಮ , ರೆಡ್ಡೆರ ನಾಗಮ್ಮ, ಅಯ್ನೋರ ಸಂಗಮ್ಮ, ಕೊರವರ ಈರವ್ವ, ಬಣಜೀರ ರಾಮವ್ವ, ಬ್ಯಾಡರ ಹನುಮಕ್ಕ.

ಇದರಂತೆ ಪುರುಷರಿಗೆ ಸಂಬಂಧಿಸಿದ ವ್ಯಕ್ತಿನಾಮಗಳಲ್ಲಿಯೂ ಈ ರೀತಿ ಜಾತಿ ಸೂಚಕ ಪದಗಳು ಕಂಡು ಬರತ್ತವೆ.

ಜೀರ ರಾಮಣ್ಣ ಮಾದರ ಗುನೆಭೀಮ, ರಡ್ಡೇರ ಹುಸೇನಿ, ಮಾದರಮಲ್ಯಾ, ಕಾಟಯ್ಯನಾಯಕ, ಬ್ಯಾಗಾರ ವಜ್ರಪ್ಪ, ಕಟಗರ ಲಚಮಣ್ಣ, ಉಪ್ಪಾರ ರಂಗಯ್ಯ, ಕುಂಬಾರ ನಾಗಣ್ಣ, ಬಡಿಗೇರ ಲಿಂಗಯ್ಯ.

ವ್ಯಕ್ತಿನಾಮಗಳಿಂದ ಪರಸ್ಪರರಲ್ಲಿರುವ ಸ್ಥಾನಮಾನದ ಅಂತರಗಳು ತಿಳಿದುಬರುತ್ತವೆ. ಸಾಮಾಜಿಕವಾಗಿ ಕಂಡುಬರುವ ವೃತ್ತಿ ಹಾಗೂ ಅಂತಸ್ತಿಗೆ ಸಂಬಂಧಿಸಿದ ಪದಗಳು ವ್ಯಕ್ತಿನಾಮಗಳೊಂದಿಗೆ ಸೇರಿರುತ್ತವೆ.

ಉದಾ : ಉಗ್ರಪ್ಪ ಗೌಡ

ಜಮಾದಾರ ಮಲ್ಲಪ್ಪ

ತಳವಾರ ರಾಮ

ಕರ್ನಲ್ ನಾಗೇಂದ್ರ

ಸ್ತ್ರೀಯರು ನಿರ್ದಿಷ್ಟ ಸ್ಥಾನಮಾನದ ಮೂಲಕ ಗುರುತಿಸಲ್ಪಡುವುದು ಇಲ್ಲಿನ ಕಥನದಿಂದ ತಿಳಿದುಬರುತ್ತದೆ. ಈ ಸ್ಥಾನಮಾನ ಸ್ತ್ರೀಯರಿಗೆ ಗಂಡನಿಂದ ಇಲ್ಲವೇ ಮನೆತನದ ಹಿರೀಕರಿಂದ ಬಂದಿರುತ್ತದೆ.

* ಗಂಗಮ್ಮ ಗೌಡ್ತಿ, ಮಲ್ಲವ್ವ ಜಮಾದಾರ್ತಿ.

ವ್ಯಕ್ತಿನಾಮಗಳು ಪ್ರದೇಶವೊಂದರ ಜನರನ್ನು ಅವರ ಸ್ಥಾನಮಾನ ಜಾತಿಗನುಗುಣವಾಗಿ ಪ್ರತ್ಯೇಕಿಸಿ ಸೂಚಿಸುವಲ್ಲಿ ಸಹಾಯಕವಾಗಿವೆ. ನಿರ್ದಿಷ್ಟ ಸಮುದಾಯ ಹಾಗೂ ಅಂತಸ್ತಿಗೆ ಸಂಬಂಧಿಸಿದಂತೆ ತಿಳಿಸಬೇಕಾದ ವಿಶಿಷ್ಟ ಸಂಗತಿಗಳನ್ನು, ಆ ಹಿನ್ನೆಲೆಯಲ್ಲಿ ವ್ಯಕ್ತಿಗಳ ನಡುವಿನ ಅಂತರವನ್ನು ಅವರ ಹೆಸರಿನಿಂದಲೇ ವಿಭಾಗಿಸಿ ತೋರಿಸುವ ಸಾಮಾಜಿಕ ವ್ಯವಸ್ಥೆ ಇಲ್ಲಿ ತಿಳಿದುಬರುತ್ತದೆ. ವ್ಯಕ್ತಿನಾಮಗಳು

ಪ್ರಜ್ಞಾಪೂರ್ವಕವಾಗಿ ಅಥವಾ ಅಪ್ರಜ್ಞಾಪೂರ್ವಕವಾಗಿ ಜನರ ಬದುಕಲ್ಲಿ ಅವರ ಆಡುಮಾತಿನಲ್ಲಿ ಕಂಡು ಬರುತ್ತವೆ. ಹೀಗೆ ಯಾವುದೇ ಹಿನ್ನೆಲೆಯಲ್ಲಿ ಇವುಗಳ ಬಳಕೆ ಕಂಡುಬಂದರೂ ವ್ಯವಸ್ಥೆಯೊಳಗೆ ರೂಢಿಗೊಂಡಿರುವ ಅಂತರವನ್ನು ಇವು ಸ್ಪಷ್ಟಪಡಿಸುತ್ತವೆ.

## ೬.೩. ಶ್ರೇಣೀಕೃತ ವ್ಯವಸ್ಥೆಯ ಭಾಷಿಕ ಅಭಿವ್ಯಕ್ತಿ

ಮನುಷ್ಯರು ಸಾಮಾಜಿಕ ವ್ಯವಸ್ಥೆಯಲ್ಲಿ ಸಮಾನವಾಗಿ ಕಂಡು ಬರುವುದಿಲ್ಲ. ಇದು ಕೇವಲ ಅವರ ದೈಹಿಕ ರಚನೆಯನ್ನಾಧರಿಸಿ ಅವರಲ್ಲಿ ಮಾಡಿಕೊಳ್ಳಬಹುದಾದ ವರ್ಗೀಕರಣ. ಗಂಡು, ಹೆಣ್ಣು, ಮಗು, ವಯಸ್ಸಾದವರು ಹೀಗೆ ವಿಭಿನ್ನವಾಗಿ ಮನುಷ್ಯರನ್ನು ವರ್ಗೀಕರಿಸಿ ನೋಡುವಲ್ಲಿ ಹೊರಗಿನಿಂದ ಅಥವಾ ಮನುಷ್ಯ ರೂಪಿಸಿದ ಯಾವುದೇ ಅಂತರಗಳು ಸೇರ್ಪಡೆಯಾಗಿರುವುದಿಲ್ಲ. ನಿಸರ್ಗ ಸಹಜ ಅಂತರಗಳಿಗೂ ಮನುಷ್ಯ ನಿರ್ಮಿತ ಅಂತರಗಳಿಗೂ ವ್ಯತ್ಯಾಸವಿದೆ. ಮನುಷ್ಯ ರೂಪಿತ ಅಂತರಗಳು ಒಂದನ್ನು ಶ್ರೇಷ್ಠವೆಂದು ಇನ್ನೊಂದನ್ನು ಕನಿಷ್ಠವೆಂದು ನೋಡುವ ದೃಷ್ಟಿಕೋನಗಳನ್ನು ಹುಟ್ಟುಹಾಕಿತು. ಇದರಿಂದ ಸಮಾಜದಲ್ಲಿ ಜಾತಿ, ಲಿಂಗ, ವರ್ಗ, ಅಂತಸ್ತಿನ ತಾರತಮ್ಯಗಳು ಏರ್ಪಟ್ಟು ಪರಸ್ಪರರನ್ನು ಶಾಶ್ವತವಾಗಿ ಬೇರ್ಪಡಿಸಿವೆ. ಇಂತಹ ಅಂತರಗಳು ಅವುಗಳಿಂದ ಉಂಟಾಗಿರುವ ಪರಿಣಾಮಗಳು ಸಮಾಜದಲ್ಲಿ ಅನುಭವಕ್ಕೆ ಬರುತ್ತವೆ. ಈ ಅಂತರದ ಅನುಭವವನ್ನು ವಿಭಿನ್ನ ನೆಲೆಗಳಿಂದ ಗ್ರಹಿಸಿ ಸಾಹಿತ್ಯಿಕ ಬರವಣಿಗೆಯಲ್ಲಿ ಅದನ್ನು ತಂದುಕೊಡುವಲ್ಲಿ ವಿಶಿಷ್ಟ ಸಮುದಾಯ, ಅದರ ಭಾಷೆ ಹಾಗೂ ಸಂವೇದನೆಗಳು ಹಿನ್ನೆಲೆಯಾಗಿರುತ್ತವೆ. ಪ್ರಾದೇಶಿಕವಾಗಿ ಕಂಡು ಬರುವ ಭಾಷೆಯಲ್ಲಿ ಈ ಅಂತರಗಳನ್ನು ಸಂಭೋದನೆ ರೂಪದಲ್ಲಿ ತರುವ ಇಲ್ಲವೆ ಪರಸ್ಪರ ಅಂತರವನ್ನು ಅವರ ವರ್ತನೆಗಳ ಮೂಲಕ ರೂಪಿಸಿಕೊಡುವಲ್ಲಿ ಶ್ರೇಣೀಕೃತ ವ್ಯವಸ್ಥೆಯನ್ನು ಸಾಹಿತ್ಯದಲ್ಲಿ ಚಿತ್ರಿಸಿದ್ದಾರೆ. ಹೈದರಾಬಾದ್ ಕರ್ನಾಟಕದ ಕಥನ ಸಾಹಿತ್ಯದಲ್ಲಿ ಜಾತಿ, ಅಂತಸ್ತು, ಲಿಂಗ, ವಿದ್ಯೆ ಇತ್ಯಾದಿಗಳ ಕಾರಣದಿಂದ ಜನರಲ್ಲಿ ಉಂಟಾಗಿರುವ ಅಂತರವನ್ನು ಅಭಿವ್ಯಕ್ತಿಸುವ ರೀತಿ ವಿಶಿಷ್ಟವಾಗಿದೆ. ಪ್ರಾದೇಶಿಕ ಬದುಕಿನ ಸೂಕ್ಷ್ಮ ಗ್ರಹಿಕೆಯನ್ನು ಸಾಧ್ಯವಾಗಿಸಿಕೊಂಡಿರುವ ಇಲ್ಲಿನ ಕಥನ ಸಾಹಿತ್ಯ ಶ್ರೇಣೀಕೃತ ವ್ಯವಸ್ಥೆಯ ವಿಭಿನ್ನ ಆಯಾಮಗಳನ್ನು ಪ್ರಾದೇಶಿಕ ಭಾಷೆಯ ಮೂಲಕವೇ ಅಭಿವ್ಯಕ್ತಿಸಿರುವುದನ್ನು ಇಲ್ಲಿ ಪ್ರಧಾನವಾಗಿ ಗಮನಿಸಲಾಗಿದೆ.

### ಮತೀಯ ಅಂತರಗಳು

ಮತೀಯವಾಗಿ ಕಂಡುಬರುವ ಅಂತರಗಳಲ್ಲಿ ಶ್ರೇಷ್ಠ - ಕನಿಷ್ಠ ಎಂಬ ಭಾವನೆಯು ರೂಪಿತ ವಾಗಿರುವುದಲ್ಲದೆ, ನಡೆ-ನುಡಿ, ಸಾಂಸ್ಕೃತಿಕ ಬದುಕನ್ನು ಪ್ರಭಾವಿಸಿದೆ ಹಾಗೂ ನಿಯಂತ್ರಿಸಿದೆ. ಮೇಲ್ವರ್ಗವನ್ನು ಕೆಳವರ್ಗದವರು ಕಾಣುವ ರೀತಿ ಅವರೊಂದಿಗೆ ವರ್ತಿಸುವ ರೀತಿ ಅವರ ನಡುವಿನ ಅಂತರವನ್ನು ತಿಳಿಸುತ್ತದೆ. ಕೆಳವರ್ಗದ ಜನ ಮೇಲ್ವರ್ಗದವರನ್ನು ಸಂಭೋದಿಸುವ ರೀತಿಯು ಅವರ ನಡುವಿನ ಅಂತರವನ್ನು ತಿಳಿಸುತ್ತದೆ.

* “‘ಬಿಸಲಾಗ ಆಯಾಸಪಟಗಂತ ನಿಂತೀನಿ, ತಾನು ಆ ಕಡೆ ಸರ್ದು ನೆರಳಿಗೆ ಬರ್‍ರಿ ಅನವಲ್ಲನಲ್ಲ ಈಲೋಡಿ ಮಗ ಗಂಗ್ಯಾ, ಕೀಳು ಚಾತೆವ’ ಎಂದು ಮನಸ್ಸಿನಲ್ಲಿ ಅಂದುಕೊಳ್ಳುತ್ತ ಮನೆಯ

ಕಡೆಗೆ ಕಾಲುಕಿತ್ತರು. ಶಾಸ್ತ್ರಿಗಳು ತುಸು ದೂರ ಹೋಗಿದ್ದರು. 'ದೇವ್ರೇ, ದೇವ್ರೇ' ಅನ್ನುತ್ತಾ ಗಂಗ್ಯಾ ಓಡಿ ಬಂದು" (ಶಾಂತರಸ; ೧೯೬೭; ಪುಟ : ೪೭ ಗೋದಾನ).

* "ಯಂಗಾರ ಮಾಡಿ ಎಂಟ್ಹತ್ತು ದಿನದಾಗ ಐವತ್ತು ಚೀಲ ಹಂದಿ ಗೊಬ್ಬರ ನನ್ನ ಹೊಲದಾಗಿದ್ದ ಗಡಂಗಿಗೆ ಸೇರಬೇಕು. ತಿಳೀತಾ? ನೀನೆಲ್ಲರಿಗ್ಹೇಳಿ ಗೊಬ್ರ ಜಮಾಸು". ಕುಶಾಲಪ್ಪನ ಮಾತಿಗೆ ಕುರುಮಯ್ಯ ತಲೆಯಾಡಿಸಿದ.

"ಹುಚ್ಚು ಪುಕುಳ್ಯಾನಪ್ಲೆ ತೆಲಿ ಆಗ್ಯಾಡಲೆ, ಸ್ವಲ್ಪ ಮನ್ಸಿಗಿ ಆಚ್ಗೆಂಡು ಕೆಲಸ ಮಾಡು ಇನ್ನಡಿ" ಎಂದ ಕುಶಾಲಪ್ಪ.

"ಧಣಿ ಸ್ವಲ್ಪ ರೊಕ್ಕ ಬೇಕಾಗ್ಯಾವ" ಎಂದ ಕುರುಮಯ್ಯ.

"ರೊಕ್ಕ ಇಲ್ಲ, ಗಿಕ್ಕ ಇಲ್ಲ ಮೊದ್ಲು ಹೇಳಿದ ಕೆಲ್ಸ ಮಾಡು. ಆಮ್ಯಾಗ ನೋಡಾನ" ಎಂದು ಕುಶಾಲಪ್ಪ ಒಳಗೆ ಹೋಗಲು ಎದ್ದಾಗ ಎದುರಿಗೆ ಹೆಡ್‌ಗುಮಾಸ್ತ ರಂಗಪ್ಪ ಕೈಯಲ್ಲಿ ಚೆಕ್ಕು ಪುಸ್ತಕ ಹಿಡಿದು ಬಂದ (ಜಂಬಣ್ಣ ಅಮರಚಿಂತ; ೧೯೯೪; ಪುಟ : ೧೨; ಕುರಮಯ್ಯ ಅಂಕುಶದೊಡ್ಡಿ).

* "ಶಾಂತಗೌಡ ತುಂಗಮ್ಮನ ದಂಡೆಮ್ಯಾಗ ನಿಂತು ಸುಮ್ಮನೆ ಕಣ್ಣಾಡಿಸಿದ. ದುರುಗನೂ ಸುಮ್ಮನೆ ನಿಂತುಕೊಂಡಿದ್ದ. ಇಂಥ ಗಳಿಗೆ ಅವರ ಜೀವನದಾಗ ಎಂದೂ ಬಂದಿದ್ದಿಲ್ಲ! ಬರತದಂತ ಕೂಡ ಕನಸು ಕಂಡಿದ್ದಿಲ್ಲ"!

"ದುರುಗಾ" ಅಂದ ಶಾಂತಗೌಡ.

ಆ ಪುಣ್ಯದ ಕರೆಗೆ 'ಯಪ್ಪಾ' ಅಂದ ದುರುಗ.

"ತುಂಗಮ್ಮಗ ನೀರು ಬಂದಿದ್ದಂಗಾವಲ್ಲ"

ದುರುಗ ತುಂಗಮ್ಮನನ್ನು ನೋಡಿದ. ದುಮದರಿಯಿಂದ ಚೆಂದಾಗಿ ಯಾವುದು ಕಾಣ್ತೆದ್ದಿಲ್ಲ. ಕಿವಿಗೊಟ್ಟು ಕೇಳಿ. "ಬಂದ್ರ ಮಣಕಾಲ ಮಟ ಬಂದಿರ್ತಾವ" ಅಂದ (ಅಮರೇಶ ನುಗಡೋಣಿ; ೨೦೦೮; ಪುಟ : ೨೧).

* "ಗೋಡ್ರೆ, ದೇವ್ರ ಎಣಾ ತುಂಬಿದ ಮನ್ಯಾಗ ಬಾಳ ಒತ್ತಿರೋದು ನಂಗ್ಯಾಕೊ ಬೇಷಿ ಕಾಣುವಲ್ದು... ತಕ್ಕೊಂಡೋಗ್ಲೆ ಮಾದಿಗ ಅಂತ ಅಪ್ಣೆ ಕೊಡ್ರಿ ಧಣಿ.... ಒಯ್ದು ಬುಡ್ತಿನಿ". ಗಣೇಶನನ್ನು ಬೆರಳುಗಳ ನಡುವೆ ಇಟ್ಟುಕೊಂಡಿದ್ದ ಗೌಡರು ಬುಸ್ ಅಂತ ಒಮ್ಮೆಲೆ ಹೊಗೆ ಬಿಟ್ಟು ಕೊಣ್ಣೆಯನ್ನು ನಖ ಶಿಖಾಂತ ನೋಡಿ, ನಿಂಗೆ ಕೊಡೋಕೆ ಸತ್ತಿರೋದು ಅಗಸ್ರ ಕತ್ತಿ ಅಲ್ಲಲೇ, ಮನೆ ಎತ್ತು. ಅದ್ನ ನಿನ್ ಕೈಗೊಪ್ಸಿ ನಾನ್ಯಾವ ಕರ್ಮಕ್ಕೋಗ್ಲಿ ಅಂದು ಬಿಟ್ಟರು..... ....ನಿಮ್ಮಂಥೋರೆ ಇಂಥ ಮಾತಂದ್ರೆ ಎಂಗ್ರಿ ಧಣಿ .... ನಾವು ಎಣಾ ತಿಂದು ಬದುಕೋ

ಮಂದಿ ... ದ್ಯಾವ್ರು ಎಣಾ ಕೊಡಿಕ್ವಯ್ದು ತಿಂದು ಬದಿಕಂತೀವಿ ಎಂದು ಮನಸ್ಸಿನಿಂದ ಮಾತುಗಳನ್ನು ಕಿತ್ತಿಟ್ಟನು (ಕುಂ. ವೀರಭದ್ರಪ್ಪ; ೨೦೦೪; ಪುಟ : ೬೭; ತಮಂಧದ ಕೇಡು).

* "ಅವಳು ಸೀರೆಯ ಸೆರಗಿನಿಂದ ಕಣ್ಣೊರೆಸಿಕೊಂಡಳು. ಅವನು ಸಂತೈಸುವಂತೆ ಅವಳ ಬೆನ್ನು ಸವರಿದ. ಆಕೆ ತಟ್ಟನೆ ಹಿಂದೆ ಸರಿದು.

"ಯಪ್ಪಾ.... ನಾವು ಮಾದರು...." ಅಂದಳು.

"ಮನಶಾರಲ್ಲೇನು?" ಎಂದು ಕೇಳಿದ ಗೌಡ ಮೀಸೆಯಲ್ಲೇ ನಕ್ಕಿದ್ದು ಯಾರಿಗೂ ಕಾಣಲಿಲ್ಲ. ಸಂಭಾವಿತನಂತೆ ಗೌಡ ಬಂದು ತನ್ನ ಕುರ್ಚಿಯ ಮೇಲೆ ಕುಂತನು" (ಗೀತಾ ನಾಗಭೂಷಣ; ಪುಟ : ೯; ಕಾಗೆ ಮುಟ್ಟಿತು).

ಈ ಎಲ್ಲಾ ನಿದರ್ಶನಗಳಲ್ಲಿ ಮೇಲ್ವರ್ಗದ ಭೂಮಾಲಿಕರಿಗೆ ಕೆಳವರ್ಗದ ಪುರುಷ ಹಾಗೂ ಸ್ತ್ರೀ ಸೂಚಿಸುವ ಗೌರವ ಕಂಡು ಬರುತ್ತದೆ. ದೇವ್ರೆ, ಯಪ್ಪಾ, ಧಣಿ, ಗೋಡ್ರೆ ಮುಂತಾದ ಸಂಬೋಧನೆಯ ಪದಗಳು ಗೌಡನ ಮೇಲ್ ಜಾತಿ ಹಾಗೂ ಆತನ ಅಂತಸ್ತನ್ನೇ ತಿಳಿಸುತ್ತವೆ. ಮಾತನಾಡುವ ಭಾಷೆಯಲ್ಲಿಯೇ ಈ ರೀತಿಯ ಭೇದಗಳು ಕಂಡು ಬರುವುದು ಮೇಲ್ವರ್ಗ-ಕೆಳವರ್ಗಗಳನ್ನು ಸೂಚಿಸುತ್ತವೆ. ಉದಾಹರಣೆಗೆ: ಚಂದ್ರಿಯ ಅಳು ನಿಂತಿತು. ನಾನೇ ಹೇಳಿದೆ. "ಚಂದ್ರೀss ಇದಕ್ಕೆಲ್ಲಾ ಯಾಕ್ ಅಳ್ಬೇಕು? ನಿಮ್ಮ ಮಂದ್ಯಾಗ್ ಹ್ಯಾಂಗ್ ಹ್ಯಾಂಗೋ ಬದುಕ್ತಾರಂತೆ. ನೀನೋ ಗಂಡ ಸತ್ತೋಳು ಬೇಕಾದ್ರs ಇನ್ನೊಂದು ಮದುವೇನೊs ಕೂಡಿಕೇನೋs ಮಾಡ್ಕೋ, ಆರಾಮಾಗಿರು. ಎಲ್ಲಾ ಬಿಟ್ಟು ಮಗಳ್ನ್ಯಾಕ್ ಇನ್ನೊಬ್ಬರಿಗೆ ಕೊಡ್ತಿ?"

"ಅವ್ವಾರ ನಾs ಕೈ ಮಾಡಿ ಕರದ್ರ ದಿನ್ನಾ ಒಬ್ಬ ಗೆಣ್ಯಾs ಬಂದು ಆಸ್ಯಾಶ್ ಬೀಳ್ತಾವ್ನೆ. ಆದ್ರೆ ಅದಿನೆಂಟ್ ಮಂದಿ ಅಚ್ಚಡ್ದಾಗ್ ಓಳ್ಯಾಡೋದು ನಂಗ್ಬೇಕಾsಗಿಲ್ಲಾ. ಒಬ್ಬನ್ನೇ ನೆಚ್ಕೊಂಡಿರ್ಬೇಕೂssಂತ. ಆ ಬಾಡ್ಕಾವ್ - ಅಮಾಲ್ರು ಅನುಮ್ಯಾ 'ಬೆಳ್ಳೀ'sನ ಬಿಟ್ ಒಬ್ಬೇ ತನ್ ತಾವ್ ಇದ್ರೇನೇ ಕೂಡಿಕೆಯಾsಗ್ತಾವ್ನಂತೆ..."

"ಓಹೋ! ಅದಕ್ಕೇನಾ ನೀನು ಬೆಳ್ಳೀsssನ್ ಸಾಕ್ಕೊಳ್ರೀssಂತ ಕೇಳೋದು. ಚಂದ್ರೀss ಈ ಮಾತ್ಹೇಳಾsಕ್ ನಿನ್ಗ ನಾಚ್ಕಿ ಆಗೂದಿಲ್ಲೇನ್?" (ಲಲಿತಾದೇಮಶೆಟ್ಟಿ; ೧೯೮೬; ಪುಟ : ೬೧). 'ಮಮತೆಯ ಕೊಲೆ' ಕತೆಯಲ್ಲಿನ ಈ ಸಂಭಾಷಣೆ ನಿರೂಪಕಿಯ ಶಿಷ್ಟ ಹಾಗೂ ಮೇಲ್ವರ್ಗದ ಮಾತಿನ ರೀತಿಯನ್ನು, ಚಂದ್ರಿಯ ಜಾತಿಗನುಗುಣವಾದ ಮಾತಿನ ರೀತಿಯನ್ನು ತಿಳಿಸುತ್ತದೆ. ಜಾತಿಯನ್ನು ಭಾಷೆಯ ಅಂತರದಲ್ಲಿ ಕಾಣಿಸುವ ರೀತಿ ಒಂದು ಬಗೆಯಾದರೆ ಕೆಲ ಸಾಮಾಜಿಕ ವರ್ತನೆಗಳಲ್ಲಿ ಕಂಡುಬರುವ ಜಾತಿ ಅಂತರಗಳು ಇಲ್ಲಿನ ಕಥನ ಸಾಹಿತ್ಯದಲ್ಲಿ ಕಂಡು ಬರುತ್ತವೆ. ಮೇಲ್ವರ್ಗದಿಂದ ಕೆಳವರ್ಗವನ್ನು ಹೇಗೆ ಬೇರ್ಪಡಿಸಲಾಗಿದೆ ಎಂಬುದು ಇಲ್ಲಿ ಸ್ಪಷ್ಟವಾಗಿ ತಿಳಿದು ಬರುತ್ತದೆ. 'ಕುರುಮಯ್ಯ ಮತ್ತು ಅಂಕುಶದೊಡ್ಡಿ' (ಜಂಬಣ್ಣ ಅಮರಚಿಂತ) ಕಾದಂಬರಿಯಲ್ಲಿ ಕೊರವ ಸಮುದಾಯದ ಕುರುಮಯ್ಯನನ್ನು ಮೇಲ್ವರ್ಗದ ಗೌಡ ನಡೆಸಿಕೊಳ್ಳುವ ರೀತಿಯಲ್ಲಿ ಅಂತರಗಳು ಕಂಡುಬರುತ್ತವೆ.

"ಕುಶಾಲಪ್ಪ ಸಿಗರೇಟು ಹಚ್ಚಿ ಬಾಯಿಗೆ ತುರುಕಿಕೊಂಡು "ದಂ" ಎಳೆದು ಹೊಗೆಬಿಟ್ಟ. "ತಗಲೆ ಸಿಗರೇಟ್" ಅರ್ಧ ಸೇದಿದ ಸಿಗರೇಟನ್ನು ಕುರುಮಯ್ಯ ಬೊಗಸೆಯಲ್ಲಿ ಎತ್ತಿ ಹಾಕಿದ. ಕೈ ಸುಟ್ಟರೂ ನೋವನ್ನು ಸಹಿಸಿಕೊಂಡು ಕುರುಮಯ್ಯ ನಮಸ್ಕಾರ ಮಾಡಿ ಸಿಗರೇಟ್ ತುಟಿಗೆ ಹಚ್ಚಿ ಒಂದು "ದಂ" ಎಳೆದ. ಒಳಗೇನಾಯಿತೇನೊ ಕೆಮ್ಮ ತೊಡಗಿದ. ಕೆಮ್ಮಿದಂತೆ ಬಾಯಿಯಿಂದ, ಮೂಗಿನಿಂದ ಹೊಗೆ ಪುಸು ಪುಸು ಹೊರಬಂದಂತೆ ಕಣ್ಣಲ್ಲಿ ನೀರು ತುಂಬಿತು.

"ನಿಧಾನಲೆ ಮಗನ್ಯಾ, ಯಾವಗನ್ನ ಸಿಗರೇಟ್ ಗಿಗರೇಟ್ ಸೇದಿದ್ಯಾ ಇಲ್ಲಾ?" ಎಂದ ಕುಶಾಲಪ್ಪ ನಗುತ್ತಾ, ಕುರುಮಯ್ಯನ ನರಳಾಟ ಕುಶಾಲಪ್ಪನಿಗೆ ಒಂದು ರೀತಿಯ ಮೋಜನ್ನುಂಟು ಮಾಡಿತ್ತು.

"ಎಲ್ಲಂತು ಧಣಿ.... ನಾವ್ ಕರ್‍ಕುಬೀಡಿ ಸೇದೋರು; ಸಿಕ್ಲೇಟ್ ಸೇದೋದಿಲ್ಲ... ಸಿಕ್ಲೇಟ್ ಬಾಳ ಘಾಟಾದ ಧಣಿ" ಎಂದು ಸಿಗರೇಟನ್ನು ನೆಲಕ್ಕೆ ತಿಕ್ಕಿ; ಉಳಿದದ್ದು ಮನೆಯಲ್ಲಿ ಸೇದಿದರಾಯ್ತೆಂದು ಯೋಚಿಸಿ, ಉಳಿದರ್ಧ ಸಿಗರೇಟನ್ನು ಅರ್ಧ ಹರಿದು ನೇತಾಡುತ್ತಿದ್ದ ಕಿಸೆಗೆ ತುರುಕಿಕೊಂಡ" (ಜಂಬಣ್ಣ ಅಮರಚಿಂತ; ೧೯೯೪; ಪುಟ : ೧೦-೧೧). ಜಾತಿ ಮತ್ತು ಆರ್ಥಿಕ ಸ್ಥಿತಿಯಲ್ಲಿ ಉನ್ನತವಾಗಿದ್ದ ಗೌಡನ ಮಾತು ಮತ್ತು ವರ್ತನೆಯಲ್ಲಿನ ಕುಹಕ, ಕುರುಮಯ್ಯನ ಅಸಹಾಯಕತೆಯ ನೆಲೆಗಳು ಇಲ್ಲಿ ತಿಳಿದು ಬರುತ್ತವೆ.

'ಹೊತ್ತು ಮೂಡುವ ಸಮಯ' (ಅಮರೇಶ ನುಗಡೋಣಿ) ಕತೆಯಲ್ಲಿನ ತಾತ ದೊಡ್ಡನಗೌಡನ ಮನೆತನವನ್ನು ಕಾಯ್ದುಕೊಂಡವನು ಆಕಸ್ಮಿಕವಾಗಿ ಬಂದ ತಾತನನ್ನು ದೊಡ್ಡನಗೌಡ ಆದರದಿಂದ ಕಾಣುತ್ತಾನೆ. ಹಾಗೆ ದೊಡ್ಡನಗೌಡನ ಹೆಂಡತಿ ಅಕ್ಕಮ್ಮನೂ ಅಕ್ಕರೆಯಿಂದ ಕಾಣುತ್ತಾಳೆ. ತಾತನನ್ನು ತಮ್ಮ ಮನೆಗೆ ಕರೆತಂದಿದ್ದರು. "ತಲಬಾಗಿಲಲ್ಲಿ ಬೆಳಕು ಕಾಣಿಸಿತು. ಭೀಮನ ದನಿಯಾಯಿತು. ಆತ ಕಂದಿಲು ಹಿಡಿದು ಮತ್ಯಾರನ್ನೋ ಕರೆತಂದಂತಿತ್ತು.

"ಮೆಲ್ಲಗವ್ವ.... ಹೊಸ್ತಿಲು.... ಹಾಂ.....ಅಂಗ ದಾಟು, ಬಾ...." ಎನ್ನುತ್ತ ಮುದುಕಿಯನ್ನು ಒಳಗೆ ದಾಟಿಸಿದ. "ಮಾದರ ತ್ಯಾಗವ್ವ ಬಂದ್ಳು ತಾತ, ನಿನ್ನ ನೋಡಂಗಾಗ್ಯಾದಂತ ಅಲುಬುತ್ತಿತ್ತಂತ. ಪಾಪ.... ಮೆತ್ತಗಾಗ್ಯಾಳ" ಎಂದಳು ಅಕ್ಕಮ್ಮ, "ಬಾ ತ್ಯಾಗ, ಇಲ್ಲೇ ಕೊನೆಗಟ್ಟೆ ಕೆಳಗ ಕುಂತುಗ. ತಾತನೂ ಸಮೀಪಾತಾನ ಮಾತಾಡಕ" ಎಂದು ಕೈ ತೋರಿಸಿದಳು. ಭೀಮ ಕೆಳಗೆ ಕೂಡಿಸಿ ನಿಂತ. "ಮುಂಜಾನೆ ಕರಕಂಬಂದಿದ್ರ ಬರ್‍ತಿತ್ತು. ಏನು ಅವುಸುರಂತೀನಿ... ಇಂಥ ರಾತ್ರ್ಯಾಗ, ಎಂಗಿದ್ದಿ ತ್ಯಾಗವ್ವ....." ತಾತ ಕೇಳಿದ. ಯಪ್ಪ ಬಸ್ವ ಮೊದ್ಲು ಪಾದಕೊಡು" ಎಂದ ತ್ಯಾಗವ್ವ, ಕೆಳಗಿನಿಂದ ಕೈ ಸವರಿದಳು.

"ಇರ್‍ಲಿ ಕುಂತ್ಗ" ಎಂದು ಆಕೆಯ ತಲೆಮ್ಯಾಲೆ ಕೈಯಿಟ್ಟ.

"ಅಯ್ಯ ತಂದೆ, ಇರ್‍ಲಿ ಕುಂತ್ಗ ಅಂತಿದ್ಯಾ? ಅದೆಂಗಾತದ..... ಚಾಚಪ್ಪ ಪಾದನ್ನ..."

"ಬ್ಯಾಡಂದ್ರ ಕೇಳಂಗಿಲ್ಲ. ನಿಮ್ಮ ಜಲುಮೆಲ್ಲ ಇದರಾಗ ಹೋಯ್ತು" ಎಂದು ಪಾದ ಚಾಚಿದ.

ಆಕೆ ಹಣೆ ಹಚ್ಚಿ, "ಅಯ್ತು ಶಿವುನೇ ಆಯ್ತು! ಶಿವ ಬ್ಯಾರೆಯಲ್ಲ... ತಂದೆ ನೀನು ಬ್ಯಾರೆಯಲ್ಲ. ನಾನು ಸಾಯದ್ರಾಗ.... ನಿನ್ನ ನೋಡ್ದೆ ಸಾಕು.... ನಿನ್ಗೇನು ಮುಟ್ಟಿನೆಂಬುದಿಲ್ಲ.... ತಟ್ಟಿನೆಂಬುದಿಲ್ಲ! ನನ್ನಂಥ ಕಾಟಗಿಕವುಳ ತಲಿಮ್ಯಾಲೆ ಬ್ಯಾರೆರಾದ್ರ ಕೈಯಿಟ್ಟಾರ? ಇಂಗ ಬಗಲಾಗ ಕರಕಂಡಾರ?" (ಅಮರೇಶ ನುಗುಡೋಣಿ; ೧೯೯೧; ಪುಟ : ೫೧). ಹಿರಿಯ ತಲೆಮಾರಿನ ಒಂದೇ ವಯೋಮಾನದ ತಾತ ಹಾಗೂ ತ್ಯಾಗವ್ವರ ನಡುವೆ ಜಾತಿಯ ಅಂತರವಿದೆ. ಆದರೆ ಪರಸ್ಪರ ಆತ್ಮೀಯ ಮನೋಭಾವದಲ್ಲಿ ತ್ಯಾಗವ್ವನ ತಲೆಯ ಮೇಲೆ ಕೈಯಿಡುವ ತಾತ ಅಸ್ಪೃಶ್ಯತೆಯನ್ನು ಮೀರಿ ಬೆಳೆದವನು. ಸಮವಯಸ್ಕರಾದರೂ ಕಾಲುಮುಟ್ಟಿ ನಮಸ್ಕರಿಸುವ ತ್ಯಾಗವ್ವನಲ್ಲಿ ತಾತನ ಬಗೆಗಿನ ದೈವಿಕ ಮನೋಭಾವ ಜಾತಿ ಕಾರಣದಿಂದಲೇ ಬೆಳೆದ ಹೇರಿಕೆಯಲ್ಲ. ಕೆಳವರ್ಗದವರೊಂದಿಗೆ ಇಟ್ಟುಕೊಂಡಿರುವ ಅಂತರ ದೈಹಿಕವಾದದ್ದೆ ವಿನಹ ಮಾನಸಿಕವಾದದ್ದಲ್ಲ ಎಂಬ ಮಾನವೀಯ ನೆಲೆಯಲ್ಲಿ ಇಲ್ಲಿ ಶ್ರೇಣೀಕರಣ ಅಭಿವ್ಯಕ್ತಗೊಂಡಿದೆ. ಸಾರ್ವಜನಿಕ ವಲಯದಲ್ಲಿ ಜಾತಿ ಅಂತರಗಳು ಜಾರಿಯಲ್ಲಿರುವುದು 'ಮೂಡಲು ಹರಿಯಿತು' (ಅಮರೇಶ ನುಗಡೋಣಿ) ಕತೆಯಲ್ಲಿ ಕಂಡುಬರುತ್ತದೆ. ಕೆಂಪುಗ ಎದ್ದವನೆ ಮುಖ ತೊಳೆದು ಹೊರಡುತ್ತಾನೆ". "....ಎಲ್ಲಿಗಂತ ಗುರಿ ಇರಲಿಲ್ಲ. ಆದರೂ ಕಾಲುಗಳು ಸೀದ ಅಮರಪ್ಪನ ಹೋಟಲಿಗೆ ಬಂದವು. ಅವುನಂಥ ಹೊಲೆರಿಗೆ ಮಾಡಿದ್ದ ಜಾಗದಲ್ಲಿ ಕುಂತ. ಒಳಗ ಲಿಂಗಾಯತರಾದಿ ಅವುನಿಗಿಂತ ಮೇಲಿನ ಜಾತಿಯವುರು ಕುಂತು ಬಾಯಿಗೆ ಬಂದದ್ದು ಅನುಕಂತ ಕಾಲಕಳಿತಿದ್ದರು (ತಾನೂ ತನ್ನ ಮಂದಿ ಜತೆ ಒಳಗ ಕುಂದ್ರುತೀವಿಯಂತ ಸಿದ್ಧಪ್ಪನ ಸಪೋರ್ಟಿನಿಂದ ಒಂದು ದಿನ ಸಿಟ್ಟಿಗೇರುವುದಿದೆ ಅಂದುಕೊಂಡ) ವಗ್ಗಾಣಿಗೆ ಆರ್ಡರು ಮಾಡಿದ. ಗಳಿಗಿತ್ತಿನಲ್ಲಿ ಬಂತು. "ಯಪ್ಪ, ರೊಕ್ಕ ನಾಳೆ ನಾಡ್ದು ಕೊಡ್ತೀನಿ" ಅಂದ. ಯಾಕಲೇ ಹುಡ್ಗ, ದುಡಿತಿದ್ದೆಲ್ಲ?" ಕೇಳಿದ ಅಮರಪ್ಪ, ವಗ್ಗಾಣಿ ತುಂಬಿದ್ದ ರದ್ದಿಕಾಗದ ಎತ್ತಿ ಅವುನೊಡ್ಡಿ ಹಿಡಿದ ಬಗಸೆಗೆ ಹಾಕಿದ. "ಇವತ್ತು ಜಾತ್ರಿಯಂತ ಮನ್ಯಾಗ ಕೊಟ್ಟು ಬಂದೆ. ಮಾಸ್ತಾರಪ್ಪ ಇನ್ನ ಕೂಲಿ ರೊಕ್ಕ ಕೊಡದದ". ಅಂದವುನೇ ಬಾಯಿಗೆ ವಗ್ಗಾಣಿ ತುರುಕಿಕೊಂಡ. ಗುಡಿಕಟ್ಟುವ ಕೆಲಸಕ್ಕೆ ಕೆಂಪುಗ ಹೋಗುತ್ತಿದ್ದ. ಕೆಲಸ ಮಾಡುವ ಕೂಲಿಯಾಳುಗಳಿಗೆ ರೊಕ್ಕ ಕೊಡುವುದು ಮಾಸ್ತಾರಪ್ಪನ ಮ್ಯಾಲಿತ್ತು. ಕೂಲಿ ಕೊಡದು ತಡವಾಗಿದ್ದರೂ ದೇವುರ ಕೆಲಸ ಮಾಡುವ ಕೆಂಪುಗನಂಥವುರಿಗೆ ಉದ್ರಿ ಕೊಟ್ರು ಅದು ದೇವುರಿಗೆ ತನ್ನಿಂದ ಒಂದು ರೀತಿಯಿಂದ ಸೇವೆಯೇ ಎಂದು ತಿಳಕೊಂಡಿದ್ದ ಅಮರಪ್ಪ. "ಇನ್ನಂದಪ್ಪೋ" ಅಂದ ಕೆಂಪುಗ ಬಂತು. ಅದೊಂದು ಪ್ಲೇಟು ಮುಗಿಸಿ ಚಾವು ಹಾಕಿಸಿಕೊಂಡ "ಕೆಂಪುಗ, ನಿಮ್ಮಪ್ಪಗ ನಿಮ್ಮಾವುಗ 'ಏನುಬೇಕಾದ್ರು ಕೊಡು ತಿಂಬಾಕ, ಅದರ ರೊಕ್ಕನಾ ಕೊಡ್ತೀನಿ' ಅಂತ ಕರೀಗೌಡ ಹೇಳ್ಯಾನ. ಹಿಂಗ್ಯಾಕಲೇ?' ಎಂದು ಕೇಳಿದ ಅಮರಪ್ಪ. ಕೆಂಪುಗನಿಗೆ ಮಾತು ಬಂದಾದವು. ಒಂದೆರಡು ಗುಟಕಿಗೆ ಚಾವು ಮುಗಿಸಿ ಎದ್ದು ನಿಂತ. "ಲೇ ಗ್ಲಾಸು ತೊಳೆದಿಟ್ಟು ಹೋಗಾ" ಎಂದಾಗ ಹಾಗೆ ಮಾಡಿ ನಡೆದ" (ಅಮರೇಶ ನುಗಡೋಣಿ; ಪುಟ : ೯೭) ಹೋಟೆಲ್ ಮಾಲೀಕ ಅಮರಪ್ಪ ಕೆಂಪುಗನಿಗೆ ಉದ್ರಿ ಕೊಡುವಲ್ಲಿನ ಮನೋಭಾವಕ್ಕೂ, ಆತನ ಅಪ್ಪ, ಮಾವನಿಗೆ ಪುಕ್ಕಟೆ ಕೊಡು ಅವರ ದುಡ್ಡು ನಾನು ಕೊಡುತ್ತೇನೆಂದ ಗೌಡನ ಮನೋಭಾವಕ್ಕೂ ವ್ಯತ್ಯಾಸವಿದೆ. ಮೇಲ್ವರ್ಗದವರಿಗಾಗಿ ಗುಡಿಕಟ್ಟುವ ಕೆಲಸಕ್ಕೆ

ಹೋಗುವವನೆಂಬ ಉದಾತ್ತನೆಲೆಯ ಸ್ವಾರ್ಥಕ್ಕೂ, ಗೌಡನು ಕೆಂಪುಗನ ತಂದೆ, ಮಾವನಿಗೆ ನೀಡುವ ಸೌಲಭ್ಯಗಳ ಹಿಂದಿನ ಸ್ವಾರ್ಥಕ್ಕೂ ವ್ಯತ್ಯಾಸವಿದೆ. ಹೋಟೆಲ್ ಪ್ರವೇಶಕ್ಕೆ ಸಂಬಂಧಿಸಿದಂತೆ ಕೆಂಪು ಗನಂತವರಿಗೆ ಇರುವ ಸಮಾನತೆಯ ಪ್ರಶ್ನೆ, ಫಲಿಸದೆ ಉಳಿದದ್ದು. ಕೆಂಪುಗನಿಗೆ ಉದ್ರಿ ಕೊಡುವ ಔದಾರ್ಯ ತೋರುವ ಮೇಲ್ವರ್ಗದವರು ಅಸ್ಪೃಶ್ಯತೆಯನ್ನು ಕಾಯ್ದುಕೊಂಡು ಬರುತ್ತಿರುವುದು ಇಲ್ಲಿ ತಿಳಿದುಬರುತ್ತದೆ. ಕೆಳವರ್ಗದ ಹೆಣ್ಣಿನ ಭೋಗಕ್ಕಾಗಿ ಅಸ್ಪೃಶ್ಯತೆಯನ್ನು ಮೀರುವ ಗೌಡನಂತವರಿಂದ, ಹೋಟೆಲ್ ಮಾಲೀಕನಿಂದ ಕೆಂಪುಗನಂತವರ ಮಾತುಗಳು ನಿಂತು ಹೋಗಿವೆ.

ಹೈದರಾಬಾದ್ ಕರ್ನಾಟಕದ ಕಥನದ ಅನೇಕ ಕಡೆಗಳಲ್ಲಿ ಈ ರೀತಿ ಜಾತಿ ನಿರ್ಮಿತ ಅಂತರಗಳ ಚಿತ್ರಣ ಕಂಡುಬರುತ್ತದೆ. ಇಂತಹ ಜಾತಿ ಕೇಂದ್ರಿತ ಅಂತರಗಳನ್ನು ಕಥನದಲ್ಲಿ ತರುವ ಉದ್ದೇಶ ಕೇವಲ ಅದನ್ನು ಒಪ್ಪಿಕೊಳ್ಳುವ ನೆಲೆಯದ್ದೇ ಆಗಿರುತ್ತದೆಂದಲ್ಲ. ಇಂತಹ ಅಂತರಗಳನ್ನು ಮೀರದೆ ಉಳಿದಿರುವ ಸಾಮಾಜಿಕ ಬದುಕಿನ ಜಡತ್ವವನ್ನು ಹಾಗೂ ಬದಲಾವಣೆಯನ್ನು ಮಾಡಲೇಬೇಕಾದ ಕೆಲ ನಡೆಗಳನ್ನು ಕಥನ ತಿಳಿಸುತ್ತದೆ. ಎತ್ತರದಿಂದ ಸಿಗರೇಟ್ ಹಾಕುವುದು, ಹೋಟೆಲ್‌ನ ಹೊರಗಡೆ ಕೆಳವರ್ಗದವರನ್ನು ಕೂಡಿಸುವುದು, ಅವರಿಗಾಗಿಯೇ ಪ್ರತ್ಯೇಕ ಬಳಕೆ ವಸ್ತುಗಳನ್ನಿಟ್ಟು ಅವರಿಂದಲೇ ಅವುಗಳನ್ನು ತೊಳಿಸಿ ಇಡುವುದು ಇತ್ಯಾದಿ ಕಥನದಲ್ಲಿ ಚಿತ್ರಿತವಾಗಿರುವ ಕೆಲ ವರ್ತನೆಗಳು ಮುಖ್ಯ ಆಶಯದ ಅಭಿವ್ಯಕ್ತಿಗೆ ಸೂಕ್ತವಾಗಿಯೇ ಕಂಡುಬಂದಿವೆ.

### ಶಿಕ್ಷಿತರ ಹಾಗೂ ಅಶಿಕ್ಷಿತರ ನಡುವಿನ ಅಂತರ

ಶಿಕ್ಷಣದಿಂದಾಗಿ ವ್ಯಕ್ತಿಯ ನಡೆ-ನುಡಿಯಲ್ಲಿ ಒಂದು ಭಿನ್ನತೆ ಕಂಡು ಬರುತ್ತದೆ. ಈ ಭಿನ್ನತೆ ಇತರರಿಗಿಂತ ಆತನನ್ನು ವಿಶಿಷ್ಟವಾಗಿ ಗುರುತಿಸುವಂತೆ ಮಾಡುತ್ತದೆ. ಶಿಕ್ಷಿತರು ಅಶಿಕ್ಷಿತರಿಗಿಂತ ಬೇರೆಯಾದ ಗೌರವವನ್ನು ಸಮುದಾಯದವರಿಂದ ಅಥವಾ ಇತರರಿಂದ ಪಡೆಯುತ್ತಾರೆ. ಶಿಕ್ಷಿತರು ಅಶಿಕ್ಷಿತರು ಎಂಬ ಭಿನ್ನತೆಯನ್ನು ಭಾಷೆಯ ಮೂಲಕ ತಿಳಿಸುವಲ್ಲಿ ವರ್ಗೀಕರಣವೊಂದನ್ನು ಗ್ರಹಿಸಲು ಹೇಗೆ ಸಾಧ್ಯವೋ ಸಮಾಜದಲ್ಲಿಯೂ ಇಂಥದ್ದೊಂದು ವರ್ಗೀಕರಣ ಗುರುತಿಸಲು ಸಾಧ್ಯಾವಗುವಂತಹ ನಡೆ-ನುಡಿಗಳು ಕಂಡುಬರುತ್ತವೆ. ಶಿಕ್ಷಿತನನ್ನು ಉತ್ತಮ ಮಾತು - ವರ್ತನೆಯ, ನಯ ನಾಜೂಕಿನ, ಆಧುನಿಕತೆಯ, ಪ್ರತಿನಿಧೀಕರಣವಾಗಿ ಚಿತ್ರಿಸುವ ರೀತಿ ಬೇರೆಯವರನ್ನು ಇದಕ್ಕೆ ವ್ಯತಿರಿಕ್ತವಾಗಿ ಚಿತ್ರಿಸುವ ಮೂಲಕ ವ್ಯತ್ಯಾಸವೊಂದನ್ನು ಸಾಹಿತ್ಯದಲ್ಲಿ ತರಲಾಗಿದೆ. ಶಿಕ್ಷಿತ - ಅಶಿಕ್ಷಿತ ವರ್ಗದ ಮಾತಿನ ರೀತಿಯಿಂದ ಈ ರೀತಿಯ ವ್ಯತ್ಯಾಸವನ್ನು ಕಥನ ಸಾಹಿತ್ಯದಲ್ಲಿ ಗುರುತಿಸಲಾಗುತ್ತದೆ. 'ಬೇಟೆ' (ಅಮರೇಶ ನುಗಡೋಣಿ) ಕತೆಯಲ್ಲಿ ಕೆಳವರ್ಗದಲ್ಲಿ ಹುಟ್ಟಿ ಜಿಲ್ಲಾ ಪಂಚಾಯಿತಿ ಅಧ್ಯಕ್ಷನಾಗಿದ್ದ ಪುರುಷೋತ್ತಮನನ್ನು ಕಾಣಲು ಹಳ್ಳಿಯಿಂದ ಆತನ ಪರಿಚಿತರಾಗಿದ್ದ ಗಂಗವ್ವ ಮತ್ತು ಪರಶಿವಯ್ಯ ಬಂದಿರುತ್ತಾರೆ. ಈ ಸಂದರ್ಭದ ಮಾತಿನ ರೀತಿಗಳು ಪರಸ್ಪರರಲ್ಲಿದ್ದ ಭಿನ್ನತೆಯನ್ನು ತಿಳಿಸುತ್ತವೆ.

"ಮಧ್ಯಾನ್ನ ಮೂರು ಗಂಟೆಗೆ ಅಧ್ಯಕ್ಷರು ಕಾರಿನಲ್ಲಿ ಬಂದರು. ಅವಾಗೂ ಜನರೇ ಹಿಂದಿಂದ ಮುಗಿ ಬಿದ್ದೇ ಇದ್ದರು. ಕಾರಿನಿಂದಿಳಿದು ಬರುತ್ತಿದ್ದಂಗೆ ಗಂಗವ್ವ ಬಿರುಗಾಳಿಯಂತೆ ಓಡೋಗಿ ದಪ್ಪನೆ

ಕಾಲಿಗೆ ಬಿದ್ದು. 'ಯಪ್ಪಾ... ಪರಸಪ್ಪ, ನಾನು.... ನಾನು ಗಂಗವ್ವ ಮಲ್ಲಿಹಳ್ಳಿ ಗಂಗವ್ವ...' ಅಂತಿದ್ದಳೋ ಅಧ್ಯಕ್ಷರ ಹಿಂದಿದ್ದವರು ಧಾವಿಸಿ ಹಿಡಿದೆತ್ತಿ ಹಿಂದಕ್ಕೆ ತಳ್ಳಿದರು...

ಅಧ್ಯಕ್ಷರ ಕೋಣೆ ಒಳಗೆ ಹೋದದ್ದೇ ತಡ ಪರಶಿವಯ್ಯಗ ತಣ್ಣಗ ಗಾಳಿ ಬಡಿತು. 'ಗುಂಯ್' ಅಂತ ಸಪ್ಪಳ. ಎದುರಿಗಿದ್ದ ಪುರುಷೋತ್ತಮಗ ಕೈ ಮುಗುದ. 'ನಿಂಗಪ್ಪನವರಿಗೆ ಎಲ್ಲ ಹೇಳಿದ್ದೇನೆ, ನೀನು ಹೇಣ್ತಿ - ಮಕ್ಕಳನ್ನ ಕರೆದುಕೊಂಡು ಮಲ್ಲಿಹಳ್ಳಿಗೆ ಹೋಗಿರು. ನಿನಗೇನಾದ್ರು ಬೇಕಾದ್ರೆ ನಿಂಗಪ್ಪನವರನ್ನೇ ಕೇಳು. ನಿಂಗಪ್ಪ, ನೀನು ಆ ಮೇಲೆ ಬಂದು ಕಾಣು' ಅಂತ ಅಧ್ಯಕ್ಷರು ಮುಗಿಸುತ್ತಿದ್ದಂಗೆ, ನಿಂಗಪ್ಪ ಪರಶಿವಯ್ಯನನ್ನು ಹೊರಗೆ ಕರಕೊಂಡು ಬಂದ...! (ಅಮರೇಶ ನುಗಡೋಣಿ; ೨೦೦೮; ಪುಟ: ೨೦೯).

'ಕೆಂಡದ ಮಳೆಕರೆವಲ್ಲಿ ಉದಕವಾಗಿದ್ದವರ ಕಥೆ (ಕುಂ. ವೀರಭದ್ರಪ್ಪ) ಎಂಬ ಕತೆಯಲ್ಲಿ ಶಾಲಮ್ಮನ ಮಕ್ಕಳಲ್ಲಿ ಪೀರ ವಿದ್ಯಾವಂತ, ಬಾಷಾ ಅಶಿಕ್ಷಿತ. ತಂದೆಯನ್ನು ವೀರಶೈವರ ರುದ್ರಭೂಮಿಯಲ್ಲಿ ಹೂತಿಟ್ಟಿದ್ದಕ್ಕಾಗಿ ಊರಿನ ಗೌಡನಾದಿಯಾಗಿ ಎಲ್ಲರೂ ಪೀರನ ಕುಟುಂಬದವರನ್ನು ನ್ಯಾಯ ಪಂಚಾಯಿತಿ ಮಾಡಲು ಕರೆಯುತ್ತಾರೆ.

".... ಒಂದನೆ ನಂಬರ್ ದೈವಸ್ಥನಾದ ರೇವಣ್ಣಗೌಡನೇ ತೀರ್ಪು ಪ್ರಕಟಿಸಿದ. "ಏನೋ ತಪ್ ಆಗೋದು ಆಗೋಗೈತಿ, ಇದ್ಕೆ ಪರಿಹಾರವಾಗಿ ಬಸಂದೇವ್ರ ಗುಡೀಗೆ ಐನೂರಾ ಒಂದ್ರೂಪಾಯಿ ತಪ್ ದಂಡ ಕಟ್‌ಬೇಕು, ಊರ ದೈವಸ್ಥರಿಗೆ ಸೀ ಊಟ ಹಾಕಿಸ್ಬೇಕು... ಏನಪ್ಪ... ಪೀರಣ್ಣ ಏನಂತೀ?..." ಸಿಟ್ಟಿನಿಂದ ಚೆಲ್ಲಿ ಹೋಗಿದ್ದ ಬಾಷಾ ತನ್ನಣ್ಣಗೆ ಮಾತಾಡಲು ಬಿಡಲಿಲ್ಲ. "ದೈವಸ್ಥರಂತೆ ದೈವಸ್ತರು... ಇಂಥ ಪಂಚಾತಿ ಪರಪಂಚದಾಗ ಎಲ್ಲೂ ನಡ್ದಿಲ್ಲ ನಡಿಯೋದಿಲ್ಲ ಬುಡ್ರಿ... ನಾವೇ ಇವತ್ತಿಗೆಂಗ ನಾಳೆಗೆಂಗ ಅಂತ ಚಿಂತಿ ಮಾಡ್ತಿದೀವಿ.... ಅಂತದರಾಗ ದಂಡ ಕಟ್ಬೇಕಂತೆ..... ಸೀ ಊಟ ಹಾಕಿಸ್ಬೇಕಂತೆ". ಮತ್ತೇನನ್ನೋ ನುಡಿಯಲಿದ್ದ ಮಗನ ಕೈ ಜಗ್ಗಿ ಕುಂಡ್ರಿಸಿ ತಾನೆದ್ದು ನಿಂತು ಶಾಲಮ್ಮ ಕುಂತಿದ್ದ ಸಬಕ್ಕ; ನಿಂತಿದ್ದ ಕೈ ಮುಗಿಸಬಕ್ಕದಳು.... "ಕೈ ಮುಗಿತೀನ್ರಿ... ಕಾಲ್ಗೂ ಬೀಳ್ತೀನ್ರಿ.... ಏನೋ ಆಗೋದು ಆಗಿ ಹೋಗೇತಿ.... ಮುಸಲ್ಮಾನರ ಮನೆ ನಮ್ಮದೊಂದೇ ಈ ಊರಾಗಿರೋದು; ನಮಗಾರಿಗೂ ಮುಸಲ್ಮಾನಿ ಮಾತಾಡೋಕೆ ಬರೋದಿಲ್ಲ... ನಾವು ಪೀರ್ಲ ಹಬ್ಬ ಮಾಡ್ತಿಲ್ಲ.... ರಂಜಾನೂ ಮಾಡ್ತಿಲ್ಲ. ನಾವೂ ನಿಮ್ಮಂಗ ನಾಗರ ಪಂಚಮಿ ಮಾನಾಮಿ, ಉಗಾದಿ ಹಬ್ಬ ಮಾಡ್ತೇವಿ..." ಆವೇಶದಿಂದ ಬಳಲಿ ಬಿಕ್ಕು ಹಿಡಿದ ತಾಯಿಯನ್ನು ಕೈ ಹಿಡಿದು ಕುಂಡ್ರಿಸಿ ಪೀರಣ್ಣ ತಾನೂ ಎದ್ದು ನಿಂತ... "ನಾವು ವೆರ್ರಿ ಪೂರು.... ನಮ್ಗೆ ಇಂಥ ಶಿಕ್ಷೆ ವಿಧಿಸಬೇಡ್ರಿ.... ನೀವೇ ನಮ್ಗ ಫಾದರ್ರೂ.... ಮದರ್ರೂ..." ಎಂದು ಮತ್ತೇನನ್ನೋ ಹೇಳುತ್ತಿದ್ದ ಪೀರಣ್ಣನ ಮಾತು ಕೇಳಲು ಅಲ್ಲಿ ಯಾರೂ ತಯಾರಿರಲಿಲ್ಲ" (ಕುಂ. ವೀರಭದ್ರಪ್ಪ; ೨೦೦೪; ಪುಟ : ೧೨೩-೧೨೪). ಇಲ್ಲಿ ದೈವಸ್ತರ ಮಾತು, ಬಾಷಾನ ಮಾತು ಹಾಗೂ ಶಿಕ್ಷಿತನಾದ ಪೀರನ ಮಾತುಗಳಲ್ಲಿ ವ್ಯತ್ಯಾಸವಿದೆ. ಪೀರನ ಮಾತಿನಲ್ಲಿರುವ ನಾಜೂಕುತನ ಬಾಷಾನ ಮಾತುಗಳಲ್ಲಿಲ್ಲ.

'ಸೋಲು' (ಲಲಿತಾದೇಮಶೆಟ್ಟಿ) ಕತೆಯಲ್ಲಿ ಗಂಗಿ ಎಂಬ ಕೆಳವರ್ಗದವಳ ಬಗ್ಗೆ ಮೇಲ್ವರ್ಗದ, ಲೆಕ್ಚರರ್ ಹುದ್ದೆಯ ಲಲಿತ ಹೊಂದಿದ್ದ ಆತ್ಮೀಯತೆಯನ್ನು ಕುರಿತು ಬರುವ ಮಾತುಗಳಲ್ಲಿ ಹಾಗೂ ಇದಕ್ಕೆ ಪ್ರತಿಕ್ರಿಯಿಸುವ ಗಂಗಿಯ ಮಾತುಗಳಲ್ಲಿ ಶಿಕ್ಷಿತ ಅಶಿಕ್ಷಿತ ವಲಯದ ಅಭಿವ್ಯಕ್ತಿ ಕ್ರಮ ತಿಳಿದು ಬರುತ್ತದೆ. "ಒಂದೇ ಒಂದು ದಿನ ಗಂಗಿಯನ್ನು ಕಾಣದಿದ್ದರೆ ನನಗೇನೋ ಒಂದು ತರಹ ಭಣಭಣ. ಇದನ್ನರಿತ ನನ್ನ ಸ್ನೇಹಿತೆ ವಿಜಿ "ಏನೇ ಲಲಿತ, ನೀನೋ ಲೆಕ್ಚರರ್, ಅವಳೋ ಬೀದಿಯ ಕಸಗುಡ್ಸೋಳು. ನಿಮ್ಮಿಬ್ಬರ ಮಧ್ಯೆ ಇದೆಂಥ ಬಂಧನವೇ" ಎಂದು ಛೇಡಿಸಿದಾಗ, "ವಿಜ್ಜಿ, ಅದನ್ನು ಹ್ಯಾಗೆ ತಾನೇ ಹೇಳೋದೆ? ಏನೂಂತ ಹೇಳ್ಲೆ? ಬಾಯಿಂದ ಹೇಳಲಾಗದ ಹೃದಯ ಹೃದಯಗಳ ನಡುವೆ ಅಂಟಿರುವ ನಂಟು ಅಂತಾರೆ ನೋಡು. ಅಂಥಾದ್ದು ಕಣೇ ನನ್ನ ಗಂಗಿಯೆ ಸಂಬಂಧ" ಎಂದು ನಾನೆಂದಾಗ ಅವಳು ದೊಡ್ಡದಾಗಿ ನಕ್ಕು ಬಿಡುವಳು. ಒಂದೊಂದು ಸಲ ನಮ್ಮ ಅತ್ತೆಯವರು ಗಂಗಿಗೆ "ಗಂಗೀ, ನಿನ್ನೆ ನೀನು ನಮ್ಮನೆ ಕಡೆಗೆ ಬರ್ಲಿಲ್ಲಾಂತ ನಿಮ್ಮ ಮ್ಮಾವ್ರಿಗೆ ತುಂಬಾ ಬೇಜಾರಾಯ್ತು ನೋಡೆ" - ಎಂದಾಗ "ಹೌದು ಕಣ್ರವ್ವ, ನಂಗೂ ಹೊಟ್ಟೇಲಿ ಒಂಥರಾ ಕಸಿವಿಸಿಯಾಗ್ಹೋಯ್ತು. ದಿನಕೊಂದಪಾನಾದ್ರೂ ಅವ್ವನ್ನ ನೋಡ್ಬುಟ್ರೆ ಮನಸ್ಸು ಪಾಡಾಗಿರ್‍ತೈತೆ" - ಎಂದು ನಕ್ಕ ನಗೆ ಗಂಗಿಯ ಮನಸ್ಸಿನ ಮುಗ್ಧತೆಯ ಪ್ರತೀಕವಾಗಿತ್ತು (ಲಲಿತಾದೇಮಶೆಟ್ಟಿ; ೧೯೮೬; ಪುಟ : ೭-೮).

ಮಾತಿನ ರೀತಿಯಲ್ಲಿನ ಬದಲಾವಣೆಯಂತೆಯೇ ವರ್ತನೆ, ವೇಷಭೂಷಣದಲ್ಲಿನ ಬದಲಾವಣೆಗಳನ್ನು ಸಹ ಕಥನದಲ್ಲಿ ಕಟ್ಟಿಕೊಡುವುದರ ಮುಖ್ಯ ಉದ್ದೇಶ ಶಿಕ್ಷಿತರ ಗುರುತಿಸುವ ಮಾದರಿಗಳೇ ಆಗಿವೆ. 'ಗತಿ' (ಬಿ.ಟಿ. ಲಲಿತಾನಾಯಕ್) ಕಾದಂಬರಿಯಲ್ಲಿ ಚಂದೂನ ವೇಷಭೂಷಣಗಳು ಆತನನ್ನು ಪ್ರತ್ಯೇಕವಾಗಿ ಗುರುತಿಸುವಂತೆ ಮಾಡುತ್ತವೆ.

"ಲಚ್ಮಿಯ ಮೈಮೇಲೆ ಛಡಿಏಟು ಬೀಳಲಾರಂಭಿಸಿದವು. ನೆರೆದವರಲ್ಲಿ ಕೆಲವರು 'ಅಯ್ಯೊ ಪಾಪ!' ಎಂದು ಮರುಗಿದರೆ ಮತ್ತೆ ಕೆಲವರು ಅದೊಂದು ಮನರಂಜನೆಯಾಟ ಎಂಬಂತೆ ವೀಕ್ಷಿಸಿದರು. ಸೋನಿ ಎತ್ತರದ ದನಿಯಲ್ಲಿ ಅಳುತ್ತ ಪಂಚಾಯಿತರನ್ನು ಸಾಪಳಿಸುತ್ತಿದ್ದಳು. ಅವಳ ಜೊತೆಯಲ್ಲಿ ಸೀತಾ-ಶಾರದಿ ಹಾಗೂ ಕಾಳಜ್ಜಿ ಸಹ ಅಳತೊಡಗಿದರು.

ಅದೇ ಸಮಯಕ್ಕೆ ಖಾಕಿ ಪ್ಯಾಂಟು, ಅಂತಹದ್ದೇ ಅಂಗಿ ಧರಿಸಿದ್ದ ಗಡ್ಡಧಾರಿ ತರುಣನೊಬ್ಬ ಅಲ್ಲಿಗೆ ಧಾವಿಸಿ ಬಂದು "ಏಯ್ ಸಾಕು ನಿಲ್ಸು ಹೊಡಿಬ್ಯಾಡ ಆ ಅಮ್ಮನ್ನ! ಎನುತ್ತ ಲಾಲುವಿನ ಕೈಯಿಂದ ಛಡಿಯನ್ನು ಅನಾಮತ್ತಾಗಿ ಕಸಿದುಕೊಂಡ.

ಆಗುಂತಕನೊಬ್ಬ ಹಠಾತ್ತನೆ ಹಾಜರಾಗಿ ತಡೆಯಾಜ್ಞೆ ಹೊರಡಿಸುತ್ತಿರುವುದನ್ನು ಕಂಡು ನೆರೆದವರೆಲ್ಲ ಕ್ಷಣಕಾಲ ದಿಙ್ಮೂಢರಾದರು. ಪಂಚಾಯಿತನೊಬ್ಬ ಸಾವರಿಸಿಕೊಂಡು ಕೇಳಿದ. "ನೀ ಯಾವತ್ನೋ ತಮ್ಮಾ ನಮ್ಮೂರ ನ್ಯಾಯದಾಗ ಕೈ ಹಾಕಂವಾ".

"ನಾ ಯಾವಾತ್ನಾರ ಆಗಿರುವಲ್ಲನ್ಯಾಕ. ಪೈಲಿ ನೀವೇನು ಮಾಡಲಿಕ್ಕ ಹತ್ತೀರಿ ಅಂಬೋದನ್ನ ವಿಚಾರ ಮಾಡಿ ನೋಡ್ರಿ. ಕಾನೂನು ಪ್ರಕಾರ ಹೆಣ್ಣು ಮಕ್ಕಳನ್ನು ನೀವೆಲ್ರು ಕೂಡಿ ಈ ರೀತಿ ಕಂಬಕ್ಕ

ಕಟ್ಟಿ ಬಡಿತಿರೋದು ಭಾರಿ ಅಪರಾಧ ಆಗ್ತದ. ಇಷ್ಟಕ್ಕೂ ನೀವು ಹಿಂದೆ ಸರದ್ರಿ ಅಂದ್ರ ನೆಟ್ಟಿಗಾತು. ಇಲ್ಲಕ್ಕಂದ್ರ ನಾ ಪೋಲಿಸರಿಗ ದೂರ ಕೊಡ್ತೇನಿ ನಿಮ್ಮನ್ನೆಲ್ಲ ಸಾಲು ಹಚ್ಚಿ ಕೋರ್ಟಿಗೆಳಿತೀನಿ 'ನ್ಯಾಯ ಅಂಬೋದೇನು ಅನ್ನೋದು ನಿಮಗೆಲ್ಲ ಅಲ್ಲಿ ಗೊತ್ತಾಗ್ತದ!' ಎಂಬ ತರುಣ (ಬಿ.ಟಿ. ಲಲಿತಾನಾಯಕ್; ೧೯೯೧; ಪುಟ : ೩೭-೩೮).

'ತಮಂಧದ ಕೇಡು' (ಅಮರೇಶ ನುಗಡೋಣಿ) ಕತೆಯ ದುರಗನೆಂಬ ಕೆಳವರ್ಗದ, ಗೌಡನ ಆಳಿನ ಮಗ ಚೆನ್ನಮಲ್ಲ ವಿದ್ಯಾವಂತನಾಗಿದ್ದ. ಉನ್ನತ ಶಿಕ್ಷಣ ಪಡೆದ ಆತನ ನಡೆನುಡಿಗಳಲ್ಲಿ ಬದಲಾವಣೆಗಳಾಗಿದ್ದವು.

"ಆವಾಗಾವಾಗ ಚೆನ್ನ ಊರಿಗೆ ಬಂದ್ರ ಶಾಂತಗೌಡುನ್ನ ಕಾಣ್ತಿದ್ದ. ಆ ಕರೇಕಲ್ಲಿನ ದೊಡ್ಡಮನ್ಯಾಗ ಎತ್ತಿನಂಕಣದಾಗ ಕುಂತು ನಾಕು ಮಾತಾಡಿ ಬರ್ತಿದ್ದ. ಅದು ಬರ್ತಾ ಬರ್ತಾ ಚೆನ್ನಗೆ ಸರಿ ಬರ್ಲಿಲ್ಲ. ದುರುಗನ ಮಾತಿಗೆ ಕಟ್ಟುಬಿದ್ದು ಹೋಗ್ತಿದ್ದ ಅಷ್ಟೇ.... ತಾಯಿ ಹೊಟ್ಟೆಬ್ಯಾನೆ ಅಂತ ವಾರ ಒಪ್ಪತ್ತು ಹಾಸಿಗೆ ಹಿಡಕಂಡು ನರಳಿ ನರಳಿ ಕೊನೆಗೊಂದು ದಿನ ಸತ್ತಳು. ಸತ್ತಾಗ ಚೆನ್ನ ಗಂಭೀರವಾಗೇ ಇದ್ದು ಮಣ್ಣು ಕೊಟ್ಟು ಹೋಗಿದ್ದ. ಸೂಗಪ್ಪ, ಮಾಸ್ತಾರ ಅಭಿಮಾನದಿಂದ, ದುರುಗಾ, 'ನಿನ್ನ ಮಗ ಬೆಳುದು ಬುಟ್ಟಾನ. ನೋಡು, ನಿನ್ನ ಮಗ ತಾಯಿ ಸತ್ತಾಗ ಅದೆಂಗ ಗಂಭೀರವಾಗಿ ಇದ್ದು ಮಣ್ಣಿಗೆ ನಿಂತಿದ್ದ. ಅದೇ ನೀನು.... ಚಿಕ್ಕೋರು ಅತ್ತಂಗ ಅಳುತ್ತಿದ್ದಿ. ಬದುಕಿನ ಮರ್ಮ ಏನೆಂಬುದು ಅವುನಿಗೆ ಗೊತ್ತು. ಯಾರು ಶಾಶ್ವತ ಹೇಳು? ಇದೆಲ್ಲ ತಿಳಕಂಡವುರು ಈ ಸಾವಿಗೆ ಅಳ್ಳಾಡದಿಲ್ಲ. ನಿನ ಮಗ ಬುದ್ಧಿವಂತ'. ಅಂತ ಹೇಳಿದ್ದ" (ಅಮರೇಶ ನುಗಡೋಣಿ; ೨೦೦೮; ಪುಟ : ೧೧).

ಶಿಕ್ಷಿತರು ಮಾತು ವರ್ತನೆಯಲ್ಲಿನ ಗಂಭೀರತೆಯನ್ನು, ಬದುಕಿನ ವಾಸ್ತವಿಕತೆಗೆ ತೆರೆದುಕೊಂಡಿರುವುದನ್ನು ಇಲ್ಲಿನ ಚಿತ್ರಣಗಳು ತಿಳಿಸುತ್ತವೆ. ಚೆನ್ನಮಲ್ಲನ ಗಂಭೀರತೆಯನ್ನು ಗುರುತಿಸಲು ಸೂಗಪ್ಪ ಮಾಸ್ತರನಂತಹ ಶಿಕ್ಷಿತರಿಗೆ ಮಾತ್ರವೇ ಸಾಧ್ಯವಾಗಿರುವುದು ಶಿಕ್ಷಿತ ವಲಯವನ್ನು ಅಶಿಕ್ಷಿತರು, ಮುಗ್ಧರು ಎನಿಸಿಕೊಂಡವರಿಂದ ಬೇರ್ಪಡಿಸಿ ತೋರಿಸುವ ಸೂಕ್ಷ್ಮ ನೆಲೆಯಾಗಿದೆ.

'ಗತಿ' (ಬಿ.ಟಿ. ಲಲಿತಾನಾಯಕ್) ಕಾದಂಬರಿ ಮಾನಸಿಂಗ್‌ನಂತವರು ವಿದ್ಯೆಯ ಕಲಿಕೆಯನ್ನು ವರದಕ್ಷಿಣೆಯ ವಸೂಲಿಗೆ, ಬಳಸಿಕೊಳ್ಳುತ್ತಿರುವುದನ್ನು ತಿಳಿಸುತ್ತದೆ. 'ಮಾವ' (ಮಲ್ಲಿಕಾರ್ಜುನ ಹಿರೇಮಠ) ಕತೆಯಲ್ಲಿ ಅಶಿಕ್ಷಿತ ಹಾಗೂ ಮುಗ್ಧ ಸ್ವಭಾವದ ಹಳ್ಳಿಯ ಮಾವನನ್ನು ಶಿಕ್ಷಿತ ಹಾಗೂ ನಗರವಾಸಿಗಳಾದ ಜನ ಸೇರದೆ ಉಳಿಯುವುದು ಕಂಡು ಬರುತ್ತದೆ. "ಕಗ್ಗ ಹೊಲಸು ಧೋತರ, ಕಸಿಯ ಅಂಗಿ, ಎಲೆಯಡಿಕೆಯ ಕೆಂಪು ಬಾಯಿ, ತಲೆಯ ಮೇಲಿನ ಹೆಡಿಗೆ ರುಮಾಲು ಕಂಡು ತಮ್ಮ ಘನತೆಯ ತೀರ ಕೆಳಗಿನ ಕಟ್ಟ ಕಡೆಯ ಮನುಷ್ಯನಂತೆ ತಿಳಿದು ಅವನನ್ನು ಮಾತಾಡಿಸಿರಲಿಕ್ಕಿಲ್ಲ" (ಮಲ್ಲಿಕಾರ್ಜುನ ಹಿರೇಮಠ; ೧೯೯೭; ಪುಟ : ೪೯). ಶಿಕ್ಷಣ ಅದರೊಂದಿಗೆ ಅಂಟಿಕೊಂಡ ನಾಗರೀಕ ಬದುಕು ಶಿಕ್ಷಿತರನ್ನು ಶ್ರೇಷ್ಠರೆಂದು ಅಶಿಕ್ಷಿತರನ್ನು, ಹಳ್ಳಿಯ ಗ್ರಾಮೀಣ ಜನರನ್ನು ಕನಿಷ್ಠರೆಂದು ವಿಭಾಗಿಸಿ ನೋಡುವುದು ಇಲ್ಲಿ

ತಿಳಿದುಬರುತ್ತದೆ. ಶಿಕ್ಷಣ ಒಂದು ಹಂತದ ಮಾನಸಿಕ ಸ್ಥೈರ್ಯವನ್ನು ಸಾಮಾಜಿಕ ಪರಿವರ್ತನೆಯನ್ನು ತಂದುಕೊಡುವಲ್ಲಿ ಯಶಸ್ವಿಯಾಗಿತ್ತೆಂದು ಒಪ್ಪಿಕೊಳ್ಳಲಾಗುತ್ತದೆ. ಆದರೆ ಅತಿರೇಕದ, ಸೀಮಿತ ಆಲೋಚನೆಗಳು ಅಮಾನವೀಯವಾಗಿಯೇ ಕಂಡುಬರುವ ಹಾಗೂ ಮನುಷ್ಯ ಸಂಬಂಧಗಳನ್ನು ಶಾಶ್ವತ ವಾಗಿಯೇ ಬೇರ್ಪಡಿಸುವುದನ್ನು ಇಲ್ಲಿನ ಕತೆಗಳು ಉಲ್ಲೇಖಿಸುತ್ತವೆ. ಶಿಕ್ಷಣ, ಶಿಕ್ಷಿತರು ಸಕಾರಾತ್ಮಕವಾಗಿ, ವಿಶಾಲ ಮನೋಭಾವದ ಪ್ರತೀಕಗಳಾಗಬೇಕೆಂಬ ಇಲ್ಲಿನ ಆಶಯಗಳು ಶಿಕ್ಷಿತರ ಋಣಾತ್ಮಕ ಆಲೋಚನೆ, ವರ್ತನೆಗಳನ್ನು ಕಡೆಗಣಿಸುತ್ತವೆ.

**ಲಿಂಗತಾರತಮ್ಯ**

ಗಂಡು-ಹೆಣ್ಣು ಎಂಬ ಲಿಂಗ ವಿಭಜನೆಯು ಬಾಹ್ಯವಾಗಿ ಗೋಚರಿಸುವ ದೈಹಿಕ ರಚನೆ. ದೈಹಿಕ ರಚನೆಯಲ್ಲಿನ ವ್ಯತ್ಯಾಸಗಳನ್ನು ಕೇಂದ್ರೀಕರಿಸಿ ಕೌಟುಂಬಿಕ ಜೀವನದ ಕಾರ್ಯನಿರ್ವಹಣೆಯು ವಿಭಜಿಸಲ್ಪಟ್ಟಿತು. ಕಾರ್ಯನಿರ್ವಹಣೆಯಲ್ಲಿ ಒಂದನ್ನು ಶ್ರೇಷ್ಠ ಎಂದು ಇನ್ನೊಂದನ್ನು ಕನಿಷ್ಠ ಎಂದು ತಿಳಿಯುವ ಮನೋಭಾವಗಳು ಸಮಾಜದಲ್ಲಿ ಕಂಡು ಬಂದವು. ನಿಸರ್ಗ ಸಹಜವಾದ ಸಾಮರ್ಥ್ಯಗಳು ದೈಹಿಕವಾಗಿ, ಮಾನಸಿಕವಾಗಿ ಸಮಾನವಾಗಿ ಕಂಡು ಬರುವಂತವೇ ವಿನಹ ತಾರತಮ್ಯದಿಂದ ಕೂಡಿರುವಂತವುಗಳಲ್ಲ. ದೈಹಿಕವಾಗಿ ಹಾಗೂ ಮಾನಸಿಕವಾಗಿ ಒಂದನ್ನು ಬಲಿಷ್ಠವಾಗಿ ನಿರ್ಭಿಡೆಯಾಗಿ ಬೆಳೆಯಲು ಅವಕಾಶಕೊಟ್ಟು ಇನ್ನೊಂದನ್ನು ದೈಹಿಕವಾಗಿ, ಮಾನಸಿಕವಾಗಿ ಹಿಂದುಳಿಯುವಂತೆ, ನಿರ್ಬಂಧನೆಗೆ ಒಳಪಡಿಸುವಂತೆ ಮಾಡಿದ ಸಾಮಾಜಿಕ ವ್ಯವಸ್ಥೆಯಲ್ಲಿ ಗಂಡು, ಹೆಣ್ಣು ಎಂಬ ಪದಗಳು ಬೇರೆ ಅರ್ಥಗಳನ್ನು ಪಡೆದುಕೊಂಡವು. ಲಿಂಗ ಸೂಚಕಗಳಾದ ಈ ಪದಗಳು ಸಾಮರ್ಥ್ಯಗಳನ್ನು ತಿಳಿಸುವ ಮಾನದಂಡಗಳಾಗಿ ಬದಲಾದವು. ಗಂಡನ್ನು ಬಲಿಷ್ಠ, ಶ್ರೇಷ್ಠವೆಂದೂ, ಹೆಣ್ಣನ್ನು ದುರ್ಬಲ, ಕನಿಷ್ಠವೆಂದು ನಿರ್ಧರಿಸುವ ಸಾಮಾಜಿಕ ವ್ಯವಸ್ಥೆಯ ನಿರ್ಧಾರಗಳು ಹೆಣ್ಣಿನ ಮಾತು, ವರ್ತನೆ, ದೃಷ್ಟಿಕೋನಗಳನ್ನು ನಿಯಂತ್ರಿಸಿದವು. ಬದುಕಿನ ವಿಭಿನ್ನ ನೆಲೆಗಳಲ್ಲಿ ಗಂಡು ಶ್ರೇಷ್ಠವಾಗಿರುವುದನ್ನು ಹೆಣ್ಣು ಅಧೀನಳಾಗಿರುವುದನ್ನು ಕಥನ ಸಾಹಿತ್ಯ ತಿಳಿಸುತ್ತದೆ. ಹೆಣ್ಣು ಗಂಡನ್ನು ಸಂಬೋಧಿಸುವ ವಿಭಿನ್ನ ನೆಲೆಗಳು ಪರಸ್ಪರರಲ್ಲಿನ ಅಂತರಗಳನ್ನು ತಿಳಿಸುತ್ತವೆ.

ಮೇಲ್ವರ್ಗದ ಗಂಡ-ಹೆಂಡತಿಯೆಂಬ ಸಂಬಂಧದ ಸ್ವರೂಪದಲ್ಲಿನ ಅಂತರಗಳು ಕಥನದ ನಿರೂಪಣೆಯಲ್ಲಿ ಕಂಡು ಬರುತ್ತವೆ. 'ಸಣ್ಣಗೌಡಸಾನಿ' (ಶಾಂತರಸ) ಕಾದಂಬರಿಯಲ್ಲಿ ಮಾಬಿಯನ್ನು ಗೌಡ ಮನೆಯಲ್ಲಿಯೇ ಮಾಳಿಗಿ ಮೇಲೆ ಉಳಿದುಕೊಳ್ಳಲು ವ್ಯವಸ್ಥೆ ಮಾಡಿರುತ್ತಾನೆ. ಗಂಡ ಇಷ್ಟಪಟ್ಟು ತಂದಿಟ್ಟುಕೊಂಡಿದ್ದ ಜಾತಿಗಾರವಳನ್ನು ಪಾರ್ವತಿ ತಿರಸ್ಕಾರದಿಂದ ಕಾಣಲಿಲ್ಲ. ಮಾಬಿಯನ್ನು ಆತ್ಮೀಯವಾಗಿಯೇ ಕಾಣುವ ಪಾರ್ವತಿಯಲ್ಲಿ ಗಂಡನು ಅನ್ಯಾಯ ಮಾಡಿದ್ದರೂ ಗೌರವಗಳೇ ಇದ್ದವು. "ನಾನವ್ರಿಗೇಳ್ದೆ, ಮಾಬಮ್ಮಗ ಒಬ್ಳೇ ಮಾಳಿಗಿ ಮ್ಯಾಗಿರದಂದ್ರ ಬ್ಯಾಸ್ರ. ಇಲ್ಲಿ ನನ್ ಜತ್ಗೆ ಕೆಳಗ ಕಳ್ಸ್ರಿ, ನನ್ಗೂ ಹೊತ್ತೋಗ್ತದ ಅಂತ ಅವ್ರಿಗೇಳ್ದೆ. ಕಳಸ್ತೀನಿ, ಕಳಸ್ತೀನಿ ಅಂತ ಅಂದ್ರು, ತಿಂಗಳಾಯ್ತು, ಕಳಸ್ಲಿಲ್ಲ. ನಾನೇ ಬಂದೆ (ಶಾಂತರಸ; ೧೯೮೮; ಪುಟ : ೩೩).

* 'ಕತೆಗಾರ್ತಿ' (ಜಯತೀರ್ಥರಾಜ ಪುರೋಹಿತ) ಕತೆಯಲ್ಲಿ ಕತೆಗಾರ ಕಥೆಗಳನ್ನು ತನ್ನ ಹೆಸರಿಂದ ಪ್ರಕಟಣೆಗೆ ಕಳುಹಿಸದೆ ಹೆಂಡತಿಯ ಹೆಸರಲ್ಲಿ ಪ್ರಕಟಣೆಗೆ ಕಳುಹಿಸುತ್ತಾನೆ. ಹೆಂಡತಿಯ ಹೆಸರಿನ ಕತೆಗಳು ಪ್ರಕಟಗೊಂಡು ಪ್ರಸಿದ್ಧವಾಗುತ್ತವೆ. ತನ್ನದಲ್ಲದ ಸ್ವಂತಿಕೆಯನ್ನು ಒಪ್ಪಲು ಮನಸಿರದ ಕತೆಗಾರ್ತಿಯಾದ ಸೀತಾಳ ಮನಸ್ಥಿತಿಗೆ ಯಾವ ಬೆಲೆಯನ್ನು ಆಕೆಯ ಗಂಡ ಕೊಡುವುದಿಲ್ಲ.

"ನಾಳೆ ಯಾರಾದರೂ, ಎಷ್ಟು ಶಾಣ್ಯಾಕಿದ್ದಾಳs, ಕಥೀ ಬರೀತಾಳ ಅಂತs ಏನಾದರೂ ಕೇಳಿದ್ರs ಹ್ಯಾಂಗ?" ಎಂದಳು ಸೀತೆ ದೈನ್ಯದಿಂದ. "ಆಗ ನೋಡಿದರಾಯಿತು" ಎಂದು ಬಿಟ್ಟೆ. ಈ ಮಾತುಗಳಿಂದ ನನಗೂ ಮನಸ್ಸಿನಲ್ಲಿ ಕಳವಳವಾಗದೆ ಇರಲಿಲ್ಲ. ಅವಳು ತುಸುವಿಚಾರ ಮಗ್ನಳಾದಳು. "ಏನs ನೋಡ್ರಿ ನಿಮಗ ಹ್ಯಾಂಗ ಸಮಾಧಾನ ಆಗ್ತದ ಹಾಂಗ ಮಾಡ್ರಿ" ಎಂದು ಒಳಗೆ ಹೋದಳು (ಜಯತೀರ್ಥ ರಾಜಪುರೋಹಿತ; ೧೯೬೭; ಪುಟ : ೧೧೧).

* 'ಗೋಮಯ ವಿವೇಕ' (ಜಯತೀರ್ಥ ರಾಜಪುರೋಹಿತ) ಕತೆಯಲ್ಲಿ ಮಮತಾಳ ಬಗೆಗಿನ ತಮ್ಮ ಮನಸ್ತಾಪವನ್ನು ಗೋದಾಬಾಯಿ ತನ್ನ ಪತಿಯ ಬಳಿ ಹೇಳಿಕೊಳ್ಳುತ್ತಾಳೆ.

"ಆಚಾರ್ಯರ ಮೊಗದಲ್ಲಿ ಮಂದಹಾಸ ಮೂಡಿತು". "ಅದಕ್ಕೇನಂದಳು ನಿನ್ನ ಸೊಸೀ" ಎಂದು ಕೇಳಿದರು.

* ಗೋದಾಬಾಯಿ ಆಚಾರ್ಯರನ್ನು ನೋಡಿ ಸ್ವಲ್ಪ ಮುನಿಸಿನಿಂದ ಹೇಳತೊಡಗಿದಳು. "ಆಕೀನೂ ನಿಮ್ಮಂತೆ ಮುಗುಳು ನಕ್ಕು 'ಸಗಣಿಗಿಂತ ಇದು ಸ್ವಚ್ಛ ಇರ್ತದs. ಈ ನೆಲಕ್ಕ ಇದೇ ನೆಟ್ಟಗೇಳ್ರೀ' ಅಂದಳು. 'ಅಲ್ಲs ಇದೆಂಥಾ ಮಾತು? ನಿನಗ ಸಾರಿಸಲಿಕ್ಕೆ ಬರದಿದ್ರs ನಾನು ಕಲಿಸ್ತೀನಿ (ಜಯತೀರ್ಥರಾಜ ಪುರೋಹಿತ; ೧೯೭೪ ಪುಟ : ೬೨).

* ವಿಜಯ ಹೊರಗಿನಿಂದ ಬಂದು ಹೆಂಡತಿಯನ್ನು ಕರೆದ, "ಮಮತಾ! ನೀರು ತೆಗೀ ಸ್ನಾನಕ್ಕೆ"... "ನಡೆಯಿರಿ ಬಚ್ಚಲ ಮನೆಗೆ, ಚಳಮಳ ಕಾದ ನೀರು ಸಿದ್ಧವಿದೆ" ಎನ್ನುತ್ತ ಮುಂದಾದಳು (ಜಯತೀರ್ಥರಾಜ ಪುರೋಹಿತ; ಪುಟ ೬೩-೬೪). 'ಹೊತ್ತು ಮೂಡುವ ಸಮಯ' (ಅಮರೇಶ ನುಗಡೋಣಿ) ಕತೆಯ ಅಕ್ಕಮ್ಮ ತನ್ನ ಗಂಡನ ಬಗ್ಗೆ ಆಳುಗಳ ಬಳಿ ವಿಚಾರಣೆ ಮಾಡುವಾಗ ಗಂಡನನ್ನು ಆಕೆ ಸಂಬೋಧಿಸುವ ರೀತಿ ಇಲ್ಲಿ ಕಂಡು ಬರುತ್ತದೆ.

* "ಚನ್ನಸ್ಸಯ್ಯ ತಾತ ಸಣ್ಣ ಗೌಡನ ಮನ್ಯಾಗಾನಂಗೆ ಕರ್ಕಂಬಂದು ಬುಡ್ತೀನಿ. ತಾತ ಇಲ್ಲೇ ಮಕ್ಕಂತಾನಂತ" ಅಂದು ಹೋಗಲು ನಿಂತ. "ಹೂಂ.... ನಾನೂ ದಾರಿ ಕಾಯಕತ್ತೀನಿ" ಅಂದು, ಹೋಗುವ ಭೀಮನನ್ನು ತಡೆದು, "ಭೀಮ, ಯಾವಕಿನ್ನ ಕಣದಾಗ ರಾತ್ರಿ ಇರಂದಾನ ನಿಮಗೌಡ? ಕೇಳಿದಳು. "ಅಯ್ಯ.....ಯಮ್ಮ, ಹೋಗ್ಲಿ ಬಿಡವ್ವ" ಅಂದು ನಿಂತ (ಅಮರೇಶ ನುಗಡೋಣಿ; ೧೯೯೧; ಪುಟ: ೩೫).

ಮೇಲ್ವರ್ಗದ ಸ್ತ್ರೀ ಗಂಡನನ್ನು 'ರೀ' ಎಂದು ನೇರವಾಗಿ ಮಾತನಾಡುವಾಗ ಕರೆದರೆ, ಬೇರೆಯವರ ಬಳಿ ಹೇಳುವಾಗ ಅವರು, ಇವರು, ಗೌಡ, ಎಂದು ಗೌರವ ಸೂಚಕವಾಗಿಯೇ ಸಂಬೋಧಿಸುತ್ತಾಳೆ. ಹೆಂಪತಿಯ ಹೆಸರನ್ನು ಕೂಗುವ, ನಮ್ಮಾಕಿ, ಇವಳು, ಇಕಿ ಎಂದು ಸಂಬೋಧಿಸುವ ಗಂಡನ ಮಾತಿನ ರೀತಿಗಳೆಲ್ಲೆಲ್ಲಾ ಪರಸ್ಪರರಲ್ಲಿನ ಅಂತರ ಕಂಡು ಬರುತ್ತದೆ. ಗಂಡನಿಗೆ ಗೌರವ ತೋರುವ ನೆಲೆಯಲ್ಲಿಯ ಮೇಲ್ವರ್ಗದ ಸ್ತ್ರೀಯರ ಮಾತು ಸಾಮಾಜಿಕವಾಗಿ ಹೇರಲ್ಪಟ್ಟಿರುವಂತಹದ್ದು. ಬಹಳ ದಿನಗಳ ಸಲಿಗೆಯಲ್ಲಿ ಗಂಡನನ್ನು ಸಂಬೋಧಿಸುವ ನೆಲೆಯಲ್ಲಿ ಒಂದು ರೀತಿಯ ಏಕವಚನದ ಸಂಬೋಧನೆ ಕಂಡು ಬರುತ್ತದಾದರೂ ಗಂಡನೆಂಬ ಅಂಜಿಕೆ, ಗೌರವ ಭಾವನೆಯಿಂದಲೇ ಕೂಡಿರುತ್ತದೆ.

* 'ನಾನು ಕಣದಲ್ಲಿರ್ತೀನಿ' ಎಂದು ನಡೆದುಬಿಟ್ಟ. 'ಬಿಸೆರೊಟ್ಟಿ ಮಾಡ್ತೀನಿ ತಿಂದು ಹೋಗು' ಅಂದರೂ, 'ಈಗೆಲ್ಲ ಮಾಡ್ತಿದ್ದಿ ನಡಿ ಒಮ್ಮೆಲೆ ಸುಂಕ ಬುತ್ತಿನೇ ಉಂಡ್ರಾಯ್ತು' (ಅಮರೇಶ ನುಗಡೋಣಿ; ೧೯೯೧; ಪುಟ : ೩೬, ಹೊತ್ತು ಮೂಡುವ ಸಮಯ).

* "ಇಲ್ಲ ಪ್ರಶಾಂತ, ಇಷ್ಟು ಬೇಗನೆ ನಾನು ಸೋಲೊಪ್ಪಲಾರೆ. ಪ್ರಯತ್ನಿಸಿದರೆ ಸಾಧ್ಯವಿದೆ..." ಎಂದು ಭಾವುಕಳಾಗಿ ಉಸುರುತ್ತಿದ್ದ ಸಹನಳನ್ನು ನೋಡಿ ತಲೆದೂಗಿ ನಸುನಕ್ಕ (ಲಲಿತಾದೇಮಶೆಟ್ಟಿ; ೧೯೮೬; ಪುಟ : ೬೭).

ಗಂಡನನ್ನು ಹೆಸರಿಡಿದು ಕರೆಯುವ ಸ್ತ್ರೀಯರು ಅಪರೂಪಕ್ಕೆಂಬಂತೆ ಕಂಡು ಬರುತ್ತಾರೆ. ಶಿಕ್ಷಿತ ವರ್ಗದ ಸ್ತ್ರೀಪುರುಷರ ಈ ರೀತಿಯ ಸಂಬೋಧನೆಯು ಸಮಾನತೆಯನ್ನು ಸೂಚಿಸುತ್ತದೆಂಬಂತೆ ಕಂಡರೂ ನಿರ್ಧಾರಗಳ ವಿಷಯದಲ್ಲಿ, ಭಾವನೆಗಳ ವಿಷಯದಲ್ಲಿ ಸ್ತ್ರೀ ಪುರುಷನಿಗಿಂತ ದುರ್ಬಲಗಳಾಗಿಯೇ ಕಂಡು ಬರುತ್ತಾಳೆ. ಕೆಳವರ್ಗದ ಸ್ತ್ರೀ ಗಂಡನನ್ನು ಸಂಬೋಧಿಸುವ ರೀತಿಯು ಮೇಲ್ವರ್ಗದ ಸ್ತ್ರೀಗಿಂತ ಭಿನ್ನವಾಗಿದೆ.

* "ಯಾಕs ನಿದ್ದಿ ಬಂದಿಲ್ಲೇನು ನಿನಗ? ಮಕ್ಕೊಂಡೆಂತ ಮಾಡಿದ್ದ ನಾನು...." 'ನೀ ಅಂದ ಅಮಾತುಗೋಳೇ ನನ್ ನಿದ್ದೀಗಿ ತಡೀಲಕತ್ತಾವೇ ಮಲ್ಲಿ.... ಹೊಲಗೇರಿ ಹೆಂಗಸರು ಜೋಗಣಿ ಆಗಾದೂ... ಮ್ಯಾಗೇರಿ ಮಂದಿ ಅಂದರ ಗಂಡಸರು ಅವರಿಗಿ 'ಪಟ್ಟಕ್ಕ' ಹಾಯ್ಕೊಂಡು ಅವರ ಮೈ ಉಂಟು ಬಿಡಾದೂ... (ಬದುಕು; ಗೀತಾ ನಾಗಭೂಷಣ; ೨೦೦೭; ಪುಟ : ೬೭).
* "ಯಾರಿದ್ದೀತೀತ ಅಂತ ಸನೀಕ ಹೋಗಿ ನೋಡುತ್ತಾಳೆ... ತನ್ನ ಗಂಡ... ನಗು ಬಂತು. "...ಯ್ಯೋಯ್, ವಳ್ಳೆ ಮದ್ಲಿಂಗನಂಗೆ ಅಲಂಕಾರ ಮಾಡ್ಕೆಂಡು ಕೂಕಂಡಿದ್ದೀಯಲ್ಲಾ... ವಂದು ಗಾವಾವ ಪಿಳ್ಳೇನ ತಗದು ನಾನೇ ನಿಂತಿದ್ದು ಲಗ್ಗುನ ಮಾಡಲೇನು?" ಯಂದು ಚಾಸ್ಟಿ ಮಾಡಿದಳು" (ಅರಮನೆ; ಕುಂ. ವೀರಭದ್ರಪ್ಪ; ೨೦೦೫; ಪುಟ ೧೪).
* ಗಂಗವ್ವ, 'ಊರೂರು ಯಾಕ ಅಲಿತಿದ್ದೀ? ಇರು, ನಮ್ಮೂರಿಗೆ ಹೋಗಮು' ಅಂದ್ರ 'ಈಗ ಬರ್ತೀನಿ' ಅಂತ ಹೋದಾತ ಮತ್ತೆ ಬಂದಾಗ ಗಂಗವ್ವ ಭೂಮಿಲಿಂಗನ್ನ ಹೊಟ್ಟೆಯಲ್ಲಿ ಹೊತಗೊಂಡು ನಿಂತಿದ್ದಳು (ಬೇಟೆ; ಅಮರೇಶ ನುಗಡೋಣಿ; ೨೦೦೮; ಪುಟ : ೧೯೭).

ಗೌರವ ಸೂಚಕ ಪದಗಳು ಅಷ್ಟಾಗಿ ಕಂಡು ಬರೆದ ಕೆಳವರ್ಗದ ಸ್ತ್ರೀಯರ ಮಾತಿನಲ್ಲಿ ಗಂಡನೆಂಬ ಪುರುಷನ ಅಧೀನತೆಗೊಳಗಾಗಬೇಕಾದ ಯಾವ ಅಳುಕು ಕಂಡುಬರುವುದಿಲ್ಲ. ಇಲ್ಲಿ ಪರಸ್ಪರ ಮುಕ್ತ ಮಾತುಕತೆಗಳೇ ಇದ್ದು ವಿಚಾರ ವಿನಮಯದಲ್ಲಿ ಸ್ತ್ರೀ ಪುರುಷನಷ್ಟೆ ನಿರ್ಭಿಡೆಯಾಗಿರುವುದು ಕಂಡು ಬರುತ್ತದೆ. ಇದೇ ರೀತಿ ಪುರುಷನು ಹೆಂಡತಿಯನ್ನು ಸಂಬೋಧಿಸುವುದು ಹೆಚ್ಚು ಮುಕ್ತವಾಗಿಯೇ ಇರುತ್ತದೆ.

ಕೆಳವರ್ಗದ ಹಾಗೂ ಮೇಲ್ವರ್ಗದ ಸ್ತ್ರೀಯ ನಡೆಯನ್ನು ಪುರುಷಪ್ರಧಾನ ವ್ಯವಸ್ಥೆ ನಿಯಂತ್ರಿಸುತ್ತದೆ.

* ತನ್ನ ತಂಗಿ ಪರಪುರುಷನೊಂದಿಗೆ ಸಲಿಗೆಯಿಂದ ಮಾತನಾಡುವುದನ್ನು ವಿರೋಧಿಸುವ ಉಗ್ರಪ್ಪಗೌಡ (ಕಾಗೆ ಮುಟ್ಟಿತು).

* ತನ್ನ ಮಾತಿಗೆ ಎದುರಾಡುವಳೆಂದು ಹೆಂಡತಿಯನ್ನು ಹಿಂಸಿಸುವ ಮಾನ್ಯ (ಗತಿ).

* ತನ್ನ ದೊಡ್ಡ ಮಗಳು ಶಾಣೂನಂಗ ಕಾಶಮ್ಮ ತಗ್ಗಿ-ಬಗ್ಗಿ ನಡೆಯುವಂತವಳಲ್ಲ ಸೊಕ್ಕಿನ ಸ್ವಭಾವದವಳು ಎಂದು ತೀರ್ಮಾನಿಸುವ ಮಲ್ಲವ್ವ - ಜಮಾದಾರ್ತಿ (ಬದುಕು).

ಹೀಗೆ ವ್ಯವಸ್ಥೆಯೊಳಗೆ ಪ್ರಧಾನ ಎಂಬುದೊಂದನ್ನು ಒಪ್ಪಿಕೊಂಡು ಅದಕ್ಕೆ ಬದ್ಧವಾಗಿರಬೇಕಾದ ನಿಯಮಗಳನ್ನು, ರೀತಿ-ನೀತಿಗಳನ್ನು ರೂಢಿಸಿಕೊಂಡೆ ಬದುಕಬೇಕೆನ್ನುವ ಹೇರಿಕೆಗಳು ಕಂಡುಬರುತ್ತವೆ. ಪ್ರಧಾನವೆಂಬುದನ್ನು ವಿರೋಧಿಸಿ ಬೆಳೆಯುವ ಆಲೋಚನಾ ಕ್ರಮಗಳು ಹೊಸ ಬದುಕಿನ ನಿರ್ಧಾರಾತ್ಮಕವಾಗಿ ರೂಪಿಸಿಕೊಳ್ಳುವ ಸ್ಥೈರ್ಯ ಇದ್ದಾಗ್ಯೂ ಯಾವುದೋ ಒಂದು ರೀತಿಯ ನಿಯಂತ್ರಣದಿಂದ ಬಳಲುವ ಹೆಣ್ಣು ಪುರುಷಪ್ರಧಾನ ವ್ಯವಸ್ಥೆಯನ್ನು ವಂಚಿಸಿ ತನ್ನ ಬದುಕನ್ನು ಗುಟ್ಟಾಗಿಯೇ ಕಟ್ಟಿಕೊಳ್ಳುವ ಒಳದಾರಿಗಳನ್ನು ಇಲ್ಲವೆ ಶಹರ, ಪಟ್ಟಣಗಳಿಗೆ ಓಡಿ ಹೋಗುವ ಹೊರದಾರಿಗಳನ್ನು ಒಪ್ಪಿಕೊಳ್ಳುತ್ತಾಳೆ. ತನ್ನ ಬದುಕಿಗೆ ಸಂಬಂಧಿಸಿದಂತೆ ಹೆಣ್ಣು ತೆಗೆದುಕೊಳ್ಳುವ ನಿರ್ಧಾರಗಳೆಲ್ಲವೂ ಅಂತಿಮವಾಗಿ ಸಮಾಜವೇ, ಹೊಣೆಯಾಗಿರುತ್ತದೆ. ಕೆಲವೇಳೆ ನಿರ್ಧಾರಗಳಿಲ್ಲದೆಯೇ ಬದುಕುವ ಮುಗ್ಧ, ಅಮಾಯಕ ಸ್ತ್ರೀ ಬದುಕಿನ ಹಿಂದೆ ಸಮಾಜ ರೂಪಿತ ನಿಯಮಗಳ ಯಶಸ್ಸೇ ಅಡಗಿರುತ್ತದೆ.

ವಯೋಮಾನದ ಅಂತರಗಳು ಅವುಗಳದೇ ಆದ ಪ್ರಾಧಾನ್ಯತೆಯನ್ನು ಪಡೆಯುತ್ತವೆ. ಕೌಟುಂಬಿಕ ಹಿನ್ನೆಲೆಯಲ್ಲಿ ಗೌರವದ ಸ್ಥಾನವನ್ನು ಪಡೆಯುವ ಆಯಿ-ಮುತ್ಯಾ, ಚಿಕ್ಕಪ್ಪ-ಚಿಕ್ಕಮ್ಮ, ದೊಡ್ಡಪ್ಪ-ದೊಡ್ಡಮ್ಮ, ಅಣ್ಣ, ತಂಗಿ, ಅಕ್ಕ, ಮಾವ, ಅತ್ತಿ, ಸೊಸೆ, ಮೊಮ್ಮಗ, ಮೊಮ್ಮಗಳು ಎನ್ನುವ ಸಂಬಂಧ ಸೂಚಕ ಪದಗಳು ಅವರ ನಡುವಿನ ಕೌಟುಂಬಿಕ ಸ್ಥಾನಮಾನದ ಹಾಗೂ ವಯೋಮಾನದ ಅಂತರಗಳನ್ನು ತಿಳಿಸುತ್ತವೆ. ಕುಟುಂಬವನ್ನು ಹೊರತುಪಡಿಸಿ ಮೇಲ್ವರ್ಗ ಹಾಗೂ ಕೆಳವರ್ಗವೆಂಬ ಶ್ರೇಣೀಕೃತ ಸಮಾಜದಲ್ಲಿ ಈ ರೀತಿಯ ಪದಗಳು ಸಂಬಂಧ ಸೂಚಕಗಳಾಗಿರದೆ ಸಂಬೋಧನೆಯ ಪದಗಳಾಗಿರುತ್ತವೆ. ಅವರ ವಯಸ್ಸಿಗನುಗುಣವಾಗಿ ಸಂಬೋಧನೆ ಪದಗಳ ಬಳಕೆಯಾಗುವ ರೀತಿ ಸ್ವಜಾತಿಯರಲ್ಲಿ ಪರಸ್ಪರ ಆತ್ಮೀಯತೆಯ, ಭಾಂದವ್ಯದ ಪ್ರತೀಕಗಳಾಗಿ ಕಂಡುಬರುತ್ತವೆ. ಆದರೆ ಪರಸ್ಪರ ಅನ್ಯಜಾತಿಯರ ನಡುವೆ ನಡೆಯುವ ಸಂಭಾಷಣೆಗಳಲ್ಲಿ ಜಾತಿ, ಅಂತಸ್ತಿನ ಅಂತರಗಳಲ್ಲಿ ಈ ಪದಗಳು ಬಳಕೆಯಾಗುತ್ತವೆ.

* ಮೇಲ್ವರ್ಗದ ಸ್ಥಿತಿವಂತ ಪುರುಷನನ್ನು ಕೆಳವರ್ಗದ ಸ್ತ್ರೀ ಪುರುಷ ವಯೋವೃದ್ಧರಾದಿಯಾಗಿ ಎಲ್ಲರೂ ಯಪ್ಪಾ, ಗೌಡ್ರ, ತಂದೀ, ಬುದ್ಧೀ, ಧಣೇರ, ಯಜಮಾನ್ರೆ, ಚಿಕ್ಕಧಣಿ, ದೊಡ್ಡಧಣಿ, ಕುಲಕರ್ಣೇರೆ, ಸಾಹೇಬ್ರೆ ಎಂದು ಸಂಬೋಧಿಸುವುದು ಕಂಡು ಬರುತ್ತದೆ. ಕೆಳವರ್ಗದ ಸ್ತ್ರೀ ಪುರುಷರು ಸಂಬೋಧನೆಗೆ ಒಳಗಾಗುವವನಿಗಿಂತ ಎಷ್ಟೇ ವಯಸ್ಸಿನಲ್ಲಿ ಹಿರೀಕನಾಗಿ-ಹಿರೀಕಳಾಗಿದ್ದರೂ ಈ ಪದಗಳನ್ನು ಬಳಸಲೇಬೇಕೆಂಬ ನಿರ್ಬಂಧಕ್ಕೆ ಒಳಗಾಗುತ್ತಾರೆ. ಜಾತಿ ಮತ್ತು ಅಂತಸ್ತಿನ ಪ್ರಧಾನತೆಯಲ್ಲಿ ಈ ರೀತಿಯ ಸಂಬೋಧನೆಗಳನ್ನು ಅನಿವಾರ್ಯವಾಗಿಯೇ ಕೆಳವರ್ಗದವರು ಒಪ್ಪಿರುತ್ತಾರೆ.

* ಮೇಲ್ವರ್ಗದ ಸ್ತ್ರೀಯನ್ನು ಕೆಳವರ್ಗದ ಸ್ತ್ರೀ-ಪುರುಷ ವಯೋವೃದ್ಧರಾದಿಯಾಗಿ ಎಲ್ಲರೂ ಗೌಡಸಾನಿ, ಗೌಡತಿ,ಅಮ್ಮ, ಯವ್ವ, ಅಮ್ಮಾವ್ರ, ಚಿಕ್ಕ ಅಮ್ಮಾವ್ರ, ದೊಡ್ಡ ಅಮ್ಮಾವ್ರ ಇತ್ಯಾದಿಯಾಗಿ ಸಂಬೋಧಿಸುತ್ತಾಳೆ/ಸಂಬೋಧಿಸುತ್ತಾನೆ. ಇಲ್ಲಿ ಕೆಳವರ್ಗದ ಸ್ತ್ರೀಪುರುಷರು ಮೇಲ್ವರ್ಗದ ಸ್ತ್ರೀಗಿಂತ ಹಿರೀಕಳಾಗಿರುವುದು ಮಾನ್ಯತೆ ಪಡೆಯುವುದಿಲ್ಲ.

* ಮೇಲ್ವರ್ಗದ ಸ್ತ್ರೀ-ಪುರುಷ ಹಾಗೂ ಮಕ್ಕಳಾದಿಯಾಗಿ ಕೆಳವರ್ಗದ ಸ್ತ್ರೀ-ಪುರುಷರನ್ನು ಭೀಮ್ಯಾ, ಗಂಗೀ ಎಂದು ಹೆಸರಿಡಿದು ಕರೆಯುತ್ತಾರೆ.

* ಮೇಲ್ವರ್ಗದವರಾದರೂ ಆರ್ಥಿಕವಾಗಿ ಕೆಳಸ್ಥಿತಿಯಲ್ಲಿರುವವರು, ಆರ್ಥಿಕ ಉನ್ನತಿಯಲ್ಲಿರುವ ಸ್ತ್ರೀ-ಪುರುಷರನ್ನು ಗೌಡ, ಗೌಡಸಾನಿ, ಸಾಹೇಬ್ರೆ, ಅಮ್ಮಾವ್ರ, ಅಪ್ಪಾವ್ರ ಎಂದು ಸಂಬೋಧಿಸುತ್ತಾರೆ. ಮೇಲ್ವರ್ಗದ ಸ್ತ್ರೀ-ಪುರುಷರು ತಮ್ಮ ಶ್ರೀಮಂತಿಕೆಗೆ ಅನುಗುಣವಾಗಿ ಆರ್ಥಿಕ ದುಸ್ಥಿತಿಯ ಜನರನ್ನು ಹೆಸರಿಡಿದು ಕರೆಯುವುದು ಕಂಡು ಬರುತ್ತದೆ. ವಯಸ್ಸಿನಲ್ಲಿ ತುಂಬಾ ಹಿರೀಕರಾದವರಿಗೆ ಮಾತ್ರವೇ ಆಯಿ, ಮುತ್ತ್ಯಾ, ಅತ್ತೀ, ಮಾವ, ದೊಡ್ಡವ್ವ, ದೊಡ್ಡಪ್ಪ ಎಂದು ಕರೆಯುವುದು ಅಪರೂಪಕ್ಕೆ ಕಂಡು ಬರುತ್ತದೆ.

* ಕೆಳವರ್ಗದವರಾದರೂ ಆರ್ಥಿಕವಾಗಿ ಉನ್ನತ ಸ್ಥಿತಿಯಲ್ಲಿರುವವರು ತಮ್ಮ ಸಮುದಾಯದವರಿಂದ ಗೌರವಯುತವಾಗಿ ಕರೆಸಿಕೊಳ್ಳುತ್ತಾರೆ. ಯಜಮಾನ, ಯಜಮಾನ್ತಿ, ಜಮಾದಾರ-ಜಮಾದಾರ್ತಿ ಎಂದು ಗೌರವವನ್ನು ಪಡೆಯುತ್ತಾರೆ. ಇಲ್ಲಿಯೂ ಕೆಳವರ್ಗದ ಸ್ಥಿತಿವಂತರು ತಮಗಿಂತ ಅಂತಸ್ತಿನಲ್ಲಿ ಕಡಿಮೆ ಇರುವವರನ್ನು ಚಿಗವ್ವ, ಚಿಗಪ್ಪ, ಅತ್ತಿ, ಮಾವ, ಸಣವ್ವ, ಸಣಪ್ಪ, ಇತ್ಯಾದಿಯಾಗಿ ಸಂಬೋಧಿಸುವುದು ಕಂಡು ಬರುತ್ತದೆ. ಪದಗಳ ಬಳಕೆ ಹಾಗೂ ಸಂಬೋಧಿಸುವ ರೀತಿಯಲ್ಲಿ ವ್ಯತ್ಯಾಸವಿರುವುದು ಸಹ ಇಲ್ಲಿ ತಿಳಿದುಬರುತ್ತದೆ.

* ಮಠದ ಸ್ವಾಮಿಗಳಾದವರನ್ನು ಎಲ್ಲಾ ಜನಾಂಗದವರು ಸಂಬೋಧಿಸುವ ರೀತಿಯಲ್ಲಿ ಸಾಮ್ಯತೆ ಕಂಡು ಬರುತ್ತದೆ. ಸ್ವಾಮಿಗಳು, ಅಜ್ಜ, ಅಪ್ಪ, ತಂದಿ, ಬುದ್ಧಿ, ತಾತ, ಹಿರೇಮುತ್ತ್ಯಾ, ಮರಿಸ್ವಾಮಿ, ದೊಡ್ಡವರು ಎಂದು ವಿಭಿನ್ನ ರೀತಿಗಳಲ್ಲಿ ಸಂಭೋದಿಸುತ್ತಾರೆ. ಆದರೆ ಈ ಸಂಬೋಧನೆಗೆ ಕಾರಣ ವಾಗಿರುವುದು ಮಠದ ಸ್ವಾಮಿಗಳ ವಯಸ್ಸಲ್ಲ. ವಯಸ್ಸಿಗನುಗುಣವಾಗಿ ಅವರು ಚಿಕ್ಕವರೇ ಇದ್ದರೂ

ಅಜ್ಜ, ತಾತ ಎಂದು ಸಂಬೋಧನೆಗೆ ಒಳಗಾಗುವುದು ಈ ಭಾಗದ ವಿಶೇಷವೇ ಆಗಿದೆ. ಮಠದ ಸ್ವಾಮಿಗಳಿಗಿಂತ ಹಿರಿಯರಾದರೂ, ಕಿರಿಯರಾದರೂ ಈ ರೀತಿಯ ಸಂಬೋಧನೆಯನ್ನು ಒಪ್ಪಿ ಕೊಂಡಿರುತ್ತಾರೆ. ಇನ್ನೂ ಮಠದಲ್ಲಿ ವಿರಕ್ತರಾಗಿದ್ದ ಸ್ತ್ರೀಯರು ಮಠದವ್ವ, ಅವ್ವ, ಅಮ್ಮ ಎಂಬ ಗೌರವವನ್ನು ಎಲ್ಲಾ ವಯೋಮಾನದವರಿಂದ, ಎಲ್ಲಾ ಸಮುದಾಯದವರಿಂದ ಸಂಬೋಧನೆಗೆ ಒಳಗಾಗುತ್ತಾರೆ. ಇಲ್ಲಿಯೂ ಮಠದವ್ವನ ವಯಸ್ಸಿಗೆ ಅನುಗುಣವಾಗಿ ಸಂಬೋಧನೆ ಕಂಡುಬರುವುದಿಲ್ಲ.

ವಯೋಮಾನಕ್ಕೆ ಅನುಗುಣವಾಗಿ ಕಂಡುಬರುವ ಅಂತರ ಜಾತಿ, ಅಂತಸ್ತಿನಿಂದ ನಿರ್ಧರಿಸಲ್ಪಡುತ್ತದೆ. ಇಡೀ ಊರಿಗೆ ಸಂಬಂಧಿಸಿದಂತೆ ಹೇಳುವ ಕೆಲವಿಚಾರಗಳಲ್ಲಿಯೂ ಈ ರೀತಿಯ ಶ್ರೇಣೀಕರಣ ಕಥನ ಸಾಹಿತ್ಯದಲ್ಲಿ ಕಂಡುಬರುತ್ತದೆ.

* ಊರನ್ನು ಮ್ಯಾಗೇರಿ-ಕೆಳಗೇರಿ, ಊರು-ಕೇರಿ ಎಂದು ವಿಭಾಗಿಸುವುದು ಪ್ರಧಾನವಾದ ಎರಡು ಜಾತಿಗಳ ವಿಭಜನಾ ಕ್ರಮಗಳಾಗಿವೆ.

* ತುರಕರೋಣಿ, ರೆಡ್ಡೆರೋಣಿ, ಬಣಜಿಗರಓಣಿ, ಕುರುಬರೋಣಿ, ಕೊರವರತಾಂಡ್ಯಾ, ಲಮಾಣೇರ ತಾಂಡ್ಯಾ, ಎಂಬಿತ್ಯಾದಿಯಾಗಿ ಓಣಿಗಳನ್ನು ವಿಭಾಗಿಸಿ ನೋಡುವಲ್ಲಿಯೂ ಮತೀಯ ಅಂತರಗಳು ಕಂಡುಬರುತ್ತವೆ. ಸಮಾಜದಲ್ಲಿ ಸಮುದಾಯಗಳು ಈ ರೀತಿಯಾದ ಗುರುತಿಸುವಿಕೆಯಲ್ಲಿ ಅಸ್ತಿತ್ವವನ್ನು ಪಡೆದುಕೊಂಡಿರುತ್ತವೆ. ಇಲ್ಲವೆ ಬೇರ್ಪಟ್ಟಿರುವಿಕೆಯ ನೋವುಗಳನ್ನು ಹೊತ್ತಿರುತ್ತವೆ.

* ಗಚ್ಚಿನ ಮನೆ, ಕರಿಕಲ್ಲಿನ ಮನೆ, ಅರವತ್ತು ಕಂಬದ ಮನೆ, ಎರಡಂತಸ್ತಿನ ಮನೆ ಎಂಬಿತ್ಯಾದಿ ಪದಗಳು ಮೇಲ್ವರ್ಗದ ಗೌಡ, ಸ್ಥಿತಿವಂತರ ನಿವಾಸವನ್ನು ಗುರುತಿಸುವಲ್ಲಿ ಕಂಡು ಬರುತ್ತವೆ. ಹಾಗೆಯೇ ಹೆಂಡೆಮನೆ, ಗುಡಿಸಲು, ಚಪ್ಪರದ ಮನೆ, ಇತ್ಯಾದಿ ಪದಗಳು ಕೆಳವರ್ಗದವರ, ಆರ್ಥಿಕವಾಗಿ ಕಡಿಮೆ ಇರುವವರ ನಿವಾಸವನ್ನು ಗುರುತಿಸುವಲ್ಲಿ ಬಳಕೆಯಾಗುತ್ತವೆ.

* ಮಾಂಸ, ಆಹಾರ ಊಟ ಮಾಡುವ ಕೆಳವರ್ಗದವರಿಗೆ ಸಸ್ಯ ಆಹಾರ ಊಟ ಮಾಡುವ ಮೇಲ್ವರ್ಗದವರಿಗೂ ಆಹಾರ ಪದ್ಧತಿಯಲ್ಲಿ ವ್ಯತ್ಯಾಸಗಳಿವೆ. ಬಾಳಕ ಮೀನು, ಮೊಲ, ಚಿಗರೆ, ಕೋಳಿ, ಕುರಿ, ಪಾರಿವಾಳ, ಕೌಂಜು, ಹಂದಿ, ಎತ್ತು ಇತ್ಯಾದಿ ಪ್ರಾಣಿಗಳಿಂದ ಮಾಡುವ ಮಾಂಸದಡಿಗೆಯ ವೈವಿಧ್ಯತೆಗಳು ಇಲ್ಲಿನ ಕಥನದಲ್ಲಿ ಕಂಡುಬರುತ್ತವೆ. ಕೋಳಿಪಲ್ಯ, ಮಟನ್ನಸಾರು, ಮಾಂಸದ ಸಾರು, ತಾಳುಪಲ್ಲೆ, ಕೋಳಿಪಲ್ಲೆ, ಕರಿದ ತುಂಡುಗಳ ತಾಳುಪಲ್ಲೆ, ಖೀಮಾದ ಉಂಡಿ, ಭೇಜಾದ ತಾಳುಪಲ್ಯ, ಕೋಳಿ ಬಿರ್ಯಾನಿ, ಹುರಿದ ಕೋಳಿ ತತ್ತಿ, ಧಂ,ಕಾ, ಮುರಗಿ ಇತ್ಯಾದಿಗಳು ಮಾಂಸ ಆಹಾರದ ವೈವಿಧ್ಯತೆಗಳನ್ನು ತಿಳಿಸುತ್ತವೆ.

* ಹುಗ್ಗಿ, ಹೋಳಿಗಿ, ಶಾವಿಗಿ ಪಾಯಸ, ಬಿಳಿ ಜೋಳದ ರೊಟ್ಟಿ, ಗೋಧಿ ಚಪಾತಿ, ಗಟ್ಟಿಬ್ಯಾಳಿ, ತಾಳಸಿದ ಕಡ್ಲಿ ಪಲ್ಲೆ, ಸೇಂಗಾದ ಹಿಂಡಿ, ಪುಂಡಿಪಲ್ಯ, ಸಣ್ಣಕ್ಕಿ ಬಾನ, ಕರಿದ ಮೆಣಸಿನಕಾಯಿ, ಹಪ್ಪಳ ಸಂಡಿಗೆ, ಉಪ್ಪಿನಕಾಯಿ ಇತ್ಯಾದಿಗಳು ಸಸ್ಯಾಹಾರದ ವೈವಿಧ್ಯತೆಗಳನ್ನು ತಿಳಿಸುತ್ತವೆ.

ಇವುಗಳಲ್ಲಿ ಪ್ರತಿನಿತ್ಯ ಮಾಡುವ ಅಡುಗೆಗಳು, ವಿಶೇಷ ಸಂದರ್ಭಗಳಲ್ಲಿ ಮಾಡುವ ಅಡಿಗೆಗಳೆಂಬ ವಿಭಜನೆಯನ್ನು ಮಾಡಿಕೊಳ್ಳಲಾಗುತ್ತದೆ. ಮಾಸಾಹಾರಿಗಳು ಸಸ್ಯಾಹಾರಿಗಳು ಮಾಡುವ ಅಡಿಗೆಗಳನ್ನು ಊಟಕ್ಕೆ ಉಪಯೋಗಿಸುತ್ತಾರೆ. ಜಾತಿ ಕೇಂದ್ರಿತ ವ್ಯವಸ್ಥೆಯಲ್ಲಿ ಮೇಲ್ವರ್ಗದವರು ಮಾಂಸಾಹಾರವನ್ನು ತಯಾರಿಸುವ ಹಾಗೂ ಸೇವಿಸುವುದರಿಂದ ದೂರ ಉಳಿದಿರುತ್ತಾರೆ. ಮಾಂಸ ಆಹಾರ ಸೇವನೆಯಿಂದ ಹೊರಗುಳಿದವರು ಶ್ರೇಷ್ಠರೆನ್ನುವ, ಸೇವಿಸುವವರು ಕನಿಷ್ಠರೆನ್ನುವ ಭಾವನೆಗಳನ್ನು ರೂಪಿಸಿ ಈ ಮೂಲಕ ಶ್ರೇಣೀಕರಣವನ್ನು ಉಳಿಸಿಕೊಂಡಿರುವುದು ಕಥನ ಸಾಹಿತ್ಯದಲ್ಲಿ ಕಂಡುಬರುತ್ತದೆ. ಮಾಂಸಾಹಾರ ಸೇವನೆಯಿಂದ ಊಟದೊಂದಿಗೆ ಸಹಜವಾಗಿ ಬೆರೆತು ಹೋಗಿರುವ ಕುಡಿತದಿಂದ ಹೊರಬರುವುದೇ ಶ್ರೇಷ್ಠತ್ವವೆಂಬ ಭ್ರಮೆಯ ಕೆಳವರ್ಗದವರು ಅದನ್ನು ಬಿಡಲು ಪ್ರಯತ್ನಿಸುವ ಆ ಮೂಲಕ ಉತ್ತಮ ಕುಲದವರಾಗುತ್ತೇವೆ ಎನ್ನುವ ಆಲೋಚನೆಗೆ ಒಳಗಾಗುತ್ತಾರೆ. ಶ್ರೇಷ್ಠ ಕುಲದವರೆನಿಸಿದವರು ಮಾಂಸಾಹಾರ ವನ್ನು ಕದ್ದು ಮುಚ್ಚಿ ಸೇವಿಸುವ, ಬೇರೆಯವರಿಗೆ ಅದು ಗೊತ್ತಾದಾಗ ನೀಚ, ಕೆಟ್ಟವನೆನಿಸಿಕೊಳ್ಳುವ ಪರಿಸ್ಥಿತಿಗೆ ಒಳಗಾಗುತ್ತಾರೆ. ಆಹಾರ ಪದ್ಧತಿಯ ಮೂಲಕ ಜಾತಿ ವ್ಯತ್ಯಾಸಗಳನ್ನು ಕಾಯ್ದುಕೊಂಡು ಬರುವ ವ್ಯವಸ್ಥೆ ರೂಪಿತ ನಿರ್ಬಂಧಗಳು ಪ್ರಾದೇಶಿಕ ಸಂವೇದನೆಗಳ ಅಭಿವ್ಯಕ್ತಿಗೆ ಪೂರಕವಾಗಿಯೇ ಬಳಕೆಯಾಗಿವೆ.

### ೬.೪. ಪ್ರದೇಶವನ್ನು ಪ್ರತಿನಿಧಿಸುವ ಇತರ ಭಾಷಿಕ ವಿಚಾರಗಳು

ಪ್ರಾದೇಶಿಕ ವಿಚಾರವು ಆಯಾ ಪ್ರದೇಶದ ಕಥೆ, ಕಾದಂಬರಿಗಳ ಶೀರ್ಷಿಕೆಗಳಲ್ಲಿ ಸೂಚಿತ ವಾಗಿರುತ್ತದೆ. ಇದು ಪ್ರಾದೇಶಿಕತೆಯನ್ನು, ಪ್ರತ್ಯೇಕತೆಯನ್ನು ಬಿಂಬಿಸುವ ಉದ್ದೇಶದಿಂದ ಕೂಡಿರುವುದಿಲ್ಲ. ಆದರೆ ನಿರ್ದಿಷ್ಟ ಪ್ರದೇಶದ ಭೌಗೋಳಿಕ, ಸಾಂಸ್ಕೃತಿಕ, ಚಾರಿತ್ರಿಕ ಹಾಗೂ ವಿಶಿಷ್ಟ ಸಮುದಾಯ ಇತ್ಯಾದಿ ವಿಚಾರಗಳು ಸಾಹಿತ್ಯವನ್ನು ಪ್ರಭಾವಿತವಾಗಿರುತ್ತವೆ. ಶೀರ್ಷಿಕೆಗಳು ಕಥೆ, ಕಾದಂಬರಿಯೊಳಗಿನ ವಿಷಯವನ್ನು ಮಾತ್ರವಲ್ಲದೆ ಅದು ರೂಪುಗೊಂಡ ಪ್ರಾದೇಶಿಕ ಹಿನ್ನೆಲೆಗಳನ್ನು ಪ್ರತಿನಿಧಿಸುತ್ತವೆ. 'ಮಲೆಗಳಲ್ಲಿ ಮದುವೆಗಳು' (ಕುವೆಂಪು), 'ಚೋಮನದುಡಿ' (ಶಿವರಾಮಕಾರಂತ), 'ಕುಡಿಯರ ಕೂಸು' (ಶಿವರಾಮ ಕಾರಂತ), 'ಕಾನೂರು ಸುಬ್ಬಮ್ಮ ಹೆಗ್ಗಡತಿ' (ಕುವೆಂಪು) ಮುಂತಾದವುಗಳು ಕರಾವಳಿ ಮತ್ತು ಮಲೆನಾಡಿನ ಪ್ರಾದೇಶಿಕ, ಸಾಂಸ್ಕೃತಿಕ ವಿಶಿಷ್ಟತೆಗಳನ್ನು ತಿಳಿಸುತ್ತವೆ.

ಹೈದರಾಬಾದ್ ಕರ್ನಾಟಕದ ಕಥನ ಸಾಹಿತ್ಯದ ಶೀರ್ಷಿಕೆಗಳು ಇಲ್ಲಿನ ಪ್ರಾದೇಶಿಕ ವಿಶಿಷ್ಟ ಸಂಗತಿಗಳನ್ನು ಪ್ರತಿನಿಧಿಸುತ್ತವೆ. ಬಯಲಾಟ (ಶಾಂತರಸ), ನೆಲನೊಂದೆ ಹೊಲಗೇರಿ ಶಿವಾಲಯಕೆ (ಗೀತಾ ನಾಗಭೂಷಣ), ಅಮರೇಶ ನುಗಡೋಣಿಯವರ ತಮಂಧದ ಕೇಡು, ಜೋಗುಳ ನಿಂದಲ್ಲದೆ, ಒಡಲು ಗೊಂಡವರು ಕತೆಗಳು ವಿಶಿಷ್ಟವಾಗಿದೆ. ಕುಂ. ವೀರಭದ್ರಪ್ಪರವರ ಎಲುಗನೆಂಬ ಕೊರಚನು ಚೌಡನೆಂಬ ಹಂದಿಯೂ, ಬರಗಾಲದ ಒಂದು ದಿನ ಮುಂತಾದವುಗಳು ಪ್ರದೇಶಕ್ಕೆ ಸಂಬಂಧಿಸಿದ ವಿಶಿಷ್ಟ ಅಂಶಗಳನ್ನು ತಿಳಿಸಿಕೊಡುತ್ತವೆ. ಈ ಪ್ರದೇಶದ ಜನಪದ ಕಲೆಯನ್ನು, ಭೌಗೋಳಿಕತೆಯನ್ನು ಕೇಂದ್ರೀಕರಿಸಿ ಇಲ್ಲಿನ ಕಥಾ ಶೀರ್ಷಿಕೆಗಳು ರೂಪುಗೊಂಡಿದ್ದು ವಿಶಿಷ್ಟವಾಗಿವೆ. ವಚನ ಸಾಹಿತ್ಯವನ್ನು ನೆನಪಿಸುವ ಶೀರ್ಷಿಕೆಗಳು

ಈ ನೆಲದಲ್ಲಿ ಕಂಡುಬಂದ ವಚನಕಾರರಾದ ಅಲ್ಲಮಪ್ರಭು, ಬಸವಣ್ಣ ಮುಂತಾದವರ ಅನುಭವದ ಮಾತನ್ನು ತಿಳಿಸಿಕೊಡುತ್ತವೆ.

ನಿರ್ದಿಷ್ಟ ಪ್ರದೇಶವನ್ನು ಕಥನ ಸಾಹಿತ್ಯದ ಎಲ್ಲಾ ಕಥೆ, ಕಾದಂಬರಿಗಳ ಶೀರ್ಷಿಕೆಗಳು ಪ್ರತಿನಿಧಿಸಲೇ ಬೇಕೆಂಬುದು ಇಲ್ಲಿನ ಉದ್ದೇಶವಲ್ಲ. ಆದರೆ ಹೀಗೆ ಕಂಡುಬಂದ ಶೀರ್ಷಿಕೆಗಳು ಪ್ರಾದೇಶಿಕ ಅನನ್ಯತೆಯನ್ನು ಬಿಂಬಿಸುತ್ತವೆ.

ಹೈದರಾಬಾದ್ ಕರ್ನಾಟಕದ ಕಥನ ಸಾಹಿತ್ಯದಲ್ಲಿ ಕಂಡುಬರುವ ನುಡಿಗಟ್ಟುಗಳು ಮತ್ತು ಸಾಂಸ್ಕೃತಿಕ ಪದಗಳು ವಿಶಿಷ್ಟವಾಗಿವೆ. ನಿದರ್ಶನ ರೂಪದ ಕೆಲ ಪದಗಳು ಈ ರೀತಿ ಇವೆ.

* ಸೊಂಟದ ಬಾಳೆಕಾಯಿ - ಸೊಂಟದ ಒಂದು ಬದಿಯಲ್ಲಿ ಉಟ್ಟ ಸೀರೆಯಿಂದ ರೂಪಿತವಾದ ಚಿಕ್ಕ ಗಂಟಿನ ರೂಪದ ಮಡಿಕೆ.
* ಮುಡ್ಡಿಪಂಚೆ - ಸೊಂಟದ ಒಂದು ಬದಿಯಲ್ಲಿ ಉಟ್ಟ ಪಂಚೆಯಿಂದ ರೂಪಿತವಾದ ಚಿಕ್ಕ ಗಂಟಿನ ರೂಪದ ಮಡಿಕೆ.
* ತೂತುಗುಂಡಿ - ಪೃಷ್ಠ ಭಾಗವನ್ನು ಸಂಪೂರ್ಣವಾಗಿ ನೆಲಕ್ಕೆ ಊರದೇ ಕುಳಿತುಕೊಳ್ಳುವ ಒಂದು ಭಂಗಿ.
* ಕಾಲ್ಮಡಿ - ಮೂತ್ರ ವಿಸರ್ಜನೆ.
* ಕೊರಳಹರಿ - ಎತ್ತುಗಳನ್ನು ಬಂಡಿಯ ನೊಗದಿಂದ ತೆರವುಗೊಳಿಸುವುದು.
* ಕೊರಳಕಟ್ಟು - ಎತ್ತುಗಳನ್ನು ಬಂಡಿಯ ನೊಗಕ್ಕೆ ಕಟ್ಟಿ ಸಜ್ಜುಗೊಳಿಸುವುದು.
* ಕಾಲ್ಮರಿ - ಚಪ್ಪಲಿ.
* ಚಳಿಕೊಡು - ಅಂಗಳಕ್ಕೆ ನೀರು ಹಾಕುವುದು.
* ಸಣಮಾಡು - ನಮಸ್ಕರಿಸು
* ಒಲಿ ಪುಟುಮಾಡು - ಅಡುಗೆಗಾಗಿ ಒಲೆಯಲ್ಲಿ ಬೆಂಕಿ ಹೊತ್ತಿಸುವುದು.
* ಮೈತಕ್ಕೊ - ಸ್ನಾನ ಮಾಡು.
* ದೀಡ ನಮಸ್ಕಾರ - ದೇವರಿಗೆ ಹೊತ್ತ ಹರಕೆಯಲ್ಲೊಂದು, ಸಾಷ್ಟಾಂಗ ನಮಸ್ಕಾರ ಹಾಕುವುದು ಕಂಡುಬರುತ್ತದೆ.
* ಕೂರಿಗೆ ಪೂಜೆ - ಕೃಷಿಗೆ ಬಳಕೆಗೊಳ್ಳುವ ಸಲಕರಣೆಗಳ ಪೂಜೆ.
* ಚರಗ ಚಲ್ಲು - ಸಮೃದ್ಧಿಯ ಆಶಯದಲ್ಲಿ ಅನ್ನ ಇತ್ಯಾದಿ ಆಹಾರಗಳನ್ನು ಹೊಲಗದ್ದೆಗಳಿಗೆ ಚೆಲ್ಲುವ ಕೃಷಿ ಸಂಸ್ಕೃತಿಯ ಆಚರಣೆ.
* ಸುಂಕಬುತ್ತಿ - ರಾಶಿ ಪೂಜೆ ಮಾಡಿ, ಹೊಲದಲ್ಲಿಯೇ ಕುಳಿತು ಎಲ್ಲರೊಂದಿಗೆ ಊಟ ಮಾಡುವುದು.

*	ಕರಿಹರಿ - ಅಗಸೆಯಲ್ಲಿ ಕಟ್ಟಿದ ತೋರಣವನ್ನು ಎತ್ತುಗಳೊಂದಿಗೆ ಓಡಿ ಬಂದು ಹರಿಯುವುದು. ಕೃಷಿ ಸಂಸ್ಕೃತಿ ಒಂದು ಹಬ್ಬ.

ಪ್ರದೇಶದ ಭಾಷಿಕ ವೈಶಿಷ್ಟ್ಯಗಳಲ್ಲವೂ ಪ್ರಾದೇಶಿಕ ಭಾಷೆಯನ್ನು ರೂಪಿಸುತ್ತವೆ. ಹೈದರಾಬಾದ್ ಕರ್ನಾಟಕದ ಕಥನ ಸಾಹಿತ್ಯ ಈ ಪ್ರದೇಶದ ಭಾಷಿಕ ವೈವಿಧ್ಯತೆಗಳನ್ನು ತಿಳಿಸುತ್ತದೆ. ಗಾದೆ ಮಾತುಗಳು, ಒಗಟುಗಳು, ವ್ಯಕ್ತಿನಾಮಗಳು, ಬೈಗ್ಗುಳಗಳು ಹೀಗೆ ಭಾಷಿಕ ರಚನೆಯ ವಿಶಿಷ್ಟತೆಗಳು ಕಥನ ಸಾಹಿತ್ಯದಲ್ಲಿ ಆಶಯಕ್ಕನುಗುಣವಾಗಿ ಕಲಾತ್ಮಕವಾಗಿ ಬಳಕೆಗೊಂಡಿವೆ. ಈ ಪ್ರದೇಶದ ವೈವಿಧ್ಯತೆ ಮಾತ್ರವಲ್ಲದೆ ಸಮುದಾಯ ಕೇಂದ್ರೀತವಾಗಿಯೂ ಭಾಷೆಯ ಬಳಕೆ ಭಿನ್ನತೆಯನ್ನು ಪಡೆಯುತ್ತದೆ. ಮನುಷ್ಯ ಸಂವೇದನೆಯ ಅಭಿವ್ಯಕ್ತಿಗೆ ರೂಪಕಾತ್ಮಕವಾಗಿ ಬಳಕೆಗೊಳ್ಳುವ ಭಾಷಿಕ ವಿಶಿಷ್ಟತೆಗಳು ವ್ಯಕ್ತಿ, ಸಂದರ್ಭ, ಸಮುದಾಯಿಕ ಹಿನ್ನೆಲೆ ಇತ್ಯಾದಿಗಳ ಸೂಕ್ಷ್ಮ ಗ್ರಹಿಕೆಗೆ ಉಪಯುಕ್ತವಾಗಿವೆ.

ಈ ಪ್ರದೇಶದ ಕಥನ ಸಾಹಿತ್ಯ ಮುನ್ನೆಲೆಗೆ ತರುವ ಸಮುದಾಯದ ಭಾಷೆಯ ಸ್ವರೂಪ ಪ್ರಾದೇಶಿಕವಾಗಿಯೂ ಅದೇ ರೀತಿಯಾಗಿರುತ್ತದೆಂದು ಹೇಳಲಾಗುದು. ಸಮುದಾಯದಲ್ಲಿ ಭಾಷಿಕ ವ್ಯತ್ಯಾಸಗಳು ಕಂಡುಬರಲು ಶಿಕ್ಷಣವೂ ಕಾರಣವಾಗುತ್ತದೆ. ಈ ಹಿನ್ನೆಲೆಯಲ್ಲಿ ಕಥನ ಸಾಹಿತ್ಯ ತಿಳಿಸಿಕೊಡುವ ಸಮುದಾಯವೊಂದರ ಆಡುಮಾತಿನ ಸ್ವರೂಪ ಅಂತಿಮವಾದದ್ದಲ್ಲ. ಸಮುದಾಯದ ಭಾಷಿಕ ಸ್ವರೂಪ ಕುಟುಂಬದಿಂದ ಕುಟುಂಬಕ್ಕೆ, ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾಗುವ ಸಾಧ್ಯತೆಗಳಿವೆ. ಪ್ರಾದೇಶಿಕವಾಗಿ ಕಂಡುಬರುವ ಕೆಲವು ಸಮುದಾಯಗಳು ಬರಗಾಲ ಅಥವಾ ಸುಗ್ಗಿಯ ಕಾರಣಕ್ಕಾಗಿ ಗುಳೇ ಹೊಂಡುವುದು ಈ ಪ್ರದೇಶದಲ್ಲಿ ಕಂಡುಬರುತ್ತದೆ. ಹೀಗೆ ಪ್ರಾದೇಶದೊಳಗೆ ನಾನಾ ಕಾರಣಗಳಿಗಾಗಿ ಅಲೆಮಾರಿ ಬದುಕನ್ನು ನಡೆಸುವವರು ಭಾಷಿಕವಾಗಿ ಎದುರಿಸಬಹುದಾದ ತೊಡಕುಗಳು ಇಲ್ಲಿ ತಿಳಿದುಬರುವುದಿಲ್ಲ. ಉರ್ದು ಭಾಷೆಯ ಪ್ರಭಾವದಿಂದಾಗಿ ಕಂಡುಬಂದ ವಿಶಿಷ್ಟ ಭಾಷಿಕ ರೂಪಗಳು ಕನ್ನಡ ಭಾಷೆಯೊಂದಿಗೆ ಬೆರೆತಿರುವುದು ಇಲ್ಲಿ ಉಪಭಾಷೆಯನ್ನು ರೂಪಿಸಿತು. ಆದರೆ ಈ ಪ್ರದೇಶದ ಮೂಲ ಕನ್ನಡಿಗರು ಕನ್ನಡ ಭಾಷೆಯಲ್ಲಿ ಉರ್ದು ಪದಗಳ ಬಳಕೆಯನ್ನು ವಿರೋಧಿಸಿದರೆ? ಹಾಗೊಂದು ವೇಳೆ ವಿರೋಧಿಸಿದ್ದರೂ ಅವುಗಳು ಸಾಹಿತ್ಯಿಕ ಬರವಣಿಗೆಗೆ ದಕ್ಕಿಲ್ಲವೇ? ಎಂಬ ವಿಚಾರಗಳು ಕಥನ ಸಾಹಿತ್ಯದ ಓದಿನ ಸಂದರ್ಭದಲ್ಲಿ ಕಂಡುಬರುತ್ತವೆ. ಆದರೆ ಅನ್ಯಭಾಷೆಯ ಪ್ರಭಾವವನ್ನು ಅರಗಿಸಿಕೊಂಡು ಈ ನೆಲದ ವಿಶಿಷ್ಟ ಭಾಷೆಯನ್ನಾಗಿ ರೂಪಿಸಿರುವ ಕನ್ನಡ ಭಾಷೆಯ ಸತ್ವ ಮಹತ್ವದ್ದಾಗಿದೆ. ಪ್ರಾದೇಶಿಕ ಭಾಷೆಯೇ ಸಾಹಿತ್ಯಿಕ ಭಾಷೆಯಾಗುವಲ್ಲಿ ಸೃಜನಶೀಲತೆ ಮಾತ್ರವಲ್ಲ, ಕನ್ನಡ ಭಾಷೆಗಿರುವ ಬರವಣಿಗೆಯ ಸಾಧ್ಯತೆಗಳು ತಿಳಿದುಬರುತ್ತವೆ. ಈ ಪ್ರದೇಶದ ಕನ್ನಡ ಸಾಹಿತ್ಯಕ ಬರವಣಿಗೆಯ ಸ್ವರೂಪ ಪ್ರಾದೇಶಿಕ ಅಭಿಮಾನವನ್ನು, ಪ್ರದೇಶದಾಚೆಗಿನ ಸಾಹಿತ್ಯಿಕ ಬರವಣಿಗೆಯಲ್ಲಿ ಅನನ್ಯತೆಯನ್ನು ಕಾಯ್ದುಕೊಂಡಿದೆ.

•••

# ಅಧ್ಯಾಯ ಏಳು

# ಸಮಾಪನ

ಅಖಂಡತೆಯೆಂಬುದು ರಾಜ್ಯಗಳಿಗೆ ಅನ್ವಯಿಸಿ ಹೇಗೆ ಸಾಧ್ಯವಾಗಿಲ್ಲವೊ ಸಾಹಿತ್ಯಿಕವಾಗಿಯೂ ಈ ರೀತಿಯ ಅಖಂಡತೆ ಉಳಿದುಕೊಂಡಿಲ್ಲ. ಸಾಹಿತ್ಯವನ್ನು ಪ್ರದೇಶಕ್ಕನುಗುಣವಾಗಿ ಅಧ್ಯಯನ ಮಾಡುವುದು ಪ್ರತ್ಯೇಕತೆಯನ್ನು ಒಪ್ಪಿಕೊಂಡಂತಾಗುತ್ತದೆ. ಸಾಹಿತ್ಯ ಕೃತಿಯ ರಚನೆಯನ್ನು ಇಂತಹ ಪ್ರತ್ಯೇಕತೆಯ ವಿಚಾರಗಳು ಮಿತಿಗೊಳಿಸುವ ಸಾಧ್ಯತೆಗಳಿವೆ. ಈ ಹಿನ್ನೆಲೆಯಲ್ಲಿ ಸಾಹಿತ್ಯ ಕೃತಿಗಳನ್ನು ಪ್ರಾದೇಶಿಕವಾಗಿ ಪ್ರತ್ಯೇಕಿಸಿಕೊಂಡು ಅಧ್ಯಯನ ನಡೆಸುವುದು ಎಷ್ಟು ಪ್ರಸ್ತುತ? ಎಂಬ ಪ್ರಶ್ನೆಗೆ ಉತ್ತರ ಕಂಡುಕೊಳ್ಳುವ ಪ್ರಯತ್ನವಾಗಿ ಪ್ರಸ್ತುತ ಅಧ್ಯಯನವು ನಡೆದಿದೆ. ಸಾಹಿತ್ಯವನ್ನು ಪ್ರಾದೇಶಿಕವಾಗಿ ವಿಭಾಗಿಸಿಕೊಂಡು ಅಧ್ಯಯನ ನಡೆಸುವುದು. ಪ್ರಾದೇಶಿಕ ಸಾಹಿತ್ಯವೆಂಬ ಪರಿಕಲ್ಪನೆಯ ಮೂಲಕ ಅಧ್ಯಯನ ನಡೆಸುವುದು ಮತ್ತು ಸಾಹಿತ್ಯದಲ್ಲಿ ನಿರ್ದಿಷ್ಟ ಪ್ರದೇಶದ ಪ್ರಾದೇಶಿಕ ಸಂವೇದನೆಯನ್ನು ಗುರುತಿಸುವುದು ಈ ಮೂರು ನೆಲೆಗಳಲ್ಲಿ ಪ್ರಸ್ತುತ ಅಧ್ಯಯನವು ಸಾಗಿ ಬಂದಿದೆ. ಒಂದು ನಿರ್ದಿಷ್ಟ ಪ್ರದೇಶದ ಕಥನ ಸಾಹಿತ್ಯದಲ್ಲಿ ಪ್ರಾದೇಶಿಕ ಸಂವೇದನೆಯನ್ನು ಕಂಡುಕೊಳ್ಳುವ ಪ್ರಯತ್ನ ಸೂಕ್ಷ್ಮ ಓದನ್ನು ಮತ್ತು ವಿಭಿನ್ನ ವಿಚಾರಗಳನ್ನು ಕಂಡುಕೊಳ್ಳಲು ದಾರಿ ಮಾಡಿಕೊಡುತ್ತದೆ.

* ಭಾರತ ಸ್ವಾತಂತ್ರ್ಯ ಹೋರಾಟದ ಸ್ವರೂಪವೇ ದೇಶಾಭಿಮಾನದ ಸಂಕೇತವಲ್ಲ. ರಾಷ್ಟ್ರೀಯತೆಯ ಅಡಿಯಲ್ಲಿ ಒಂದಾಗುವಿಕೆ ಸ್ವಾತಂತ್ರ್ಯ ಹೋರಾಟಕ್ಕೆ ಅಗತ್ಯವಾದ ಪ್ರೇರಣೆಯನ್ನು ನೀಡಿತೆಂಬುದು ಕರ್ನಾಟಕದ ಎಲ್ಲಾ ಪ್ರದೇಶಗಳಿಗೆ ಅನ್ವಯಿಸುವಂತೆ ಒಪ್ಪಿಕೊಳ್ಳಲಾಗುದು. ಸ್ವಾತಂತ್ರ್ಯ ಹೋರಾಟಕ್ಕೆ ಪ್ರೇರಕವಾದ ಪ್ರಾದೇಶಿಕ ಸ್ವರೂಪಗಳನ್ನು ಇಲ್ಲಿನ ಕಥನ ಸಾಹಿತ್ಯ ಮುನ್ನೆಲೆಗೆ ತರುತ್ತದೆ. ನಾಡು-ನುಡಿಯ ಅಭಿಮಾನದ ಪ್ರಾದೇಶಿಕ ಸ್ವರೂಪವನ್ನು ಇಂತಹ ತಡವಾಗಿ ಮೂಡಿದ ಸಾಹಿತ್ಯದಿಂದ ಗ್ರಹಿಸುವುದು ಅಗತ್ಯವಿದೆ. ನಾಡು-ನುಡಿಯ ಅಭಿಮಾನದ ಸಮಗ್ರ ಚಿಂತನೆ ಇಂತಹ ಪ್ರಾದೇಶಿಕ ಅಭಿಮಾನದ ಒಳಗೊಳ್ಳುವಿಕೆಯಿಂದ ಸಾಧ್ಯವಾಗುತ್ತದೆ.

* ದೇಶ ವಿಭಜನೆಯಂತಹ ಸಂದರ್ಭದಲ್ಲಿ ಸಂಕಷ್ಟವನ್ನು ಅನುಭವಿಸಿದ ನಿರಾಶ್ರಿತರಿಗೆ ಪ್ರಾದೇಶಿಕವಾಗಿ ದೊರೆತ ಪ್ರತಿಕ್ರಿಯೆಯನ್ನು ಕಥನ ಸಾಹಿತ್ಯ ತಿಳಿಸಿಕೊಡುತ್ತದೆ. ದೇಶದಲ್ಲಿ ಕಂಡುಬಂದ

ಸಮಸ್ಯೆಗೆ ಪ್ರಾದೇಶಿಕವಾಗಿ ದೊರೆತ ಸ್ಪಂದನೆ ಕಡೆಗಣಿತವಾಗದಿರುವಂತೆ ಕಥನ ಸಾಹಿತ್ಯ ಮುನ್ನೆಲೆಗೆ ತರುತ್ತದೆ.

* ಪ್ರಾದೇಶಿಕವಾಗಿ ಕಡೆಗಣಿತವಾದ ಸಮುದಾಯಗಳ ಬದುಕಿನ ರೀತಿಯನ್ನು ಮುನ್ನೆಲೆಗೆ ತರುವ ಕಥನ ಸಾಹಿತ್ಯ ಸಮುದಾಯಗಳ ನಡುವಿನ ಅಂತರಗಳನ್ನು ಪೋಷಿಸುವ ಸಾಮಾಜಿಕ ವ್ಯವಸ್ಥೆಯನ್ನು ವಿರೋಧಿಸುತ್ತದೆ.

* ಮುನ್ನೆಲೆಯಲ್ಲಿರುವ ಸಮುದಾಯಗಳಲ್ಲಿ ಕಡೆಗಣಿತವಾಗಿರುವ ವಿಚಾರಗಳನ್ನು ಈ ಪ್ರದೇಶದ ಕಥನ ಸಾಹಿತ್ಯ ತಿಳಿಸಿಕೊಡುವ ಮೂಲಕ ಸಾಮಾಜಿಕ ಸೂಕ್ಷ್ಮ ಗ್ರಹಿಕೆಯನ್ನು ಸಾಧ್ಯವಾಗಿಸುತ್ತದೆ.

* ನವವಸಾಹತುಶಾಹಿ ಸಂದರ್ಭ ಉಂಟುಮಾಡಿರುವ ಔದ್ಯೋಗಿಕ ಅತಂತ್ರ ಪರಿಸ್ಥಿತಿಗಳನ್ನು ಐ.ಟಿ, ಬಿ.ಟಿ. ಕಂಪನಿಗಳಲ್ಲಿ ನಿರುದ್ಯೋಗಿಗಳಾಗಿರುವ ಇಂಜನಿಯರ್‌ಗಳ ಮೂಲಕವೇ ತಿಳಿದುಕೊಳ್ಳುವುದು ಮುಖ್ಯವಲ್ಲ. ಇಂತಹದ್ದೊಂದು ಅತಂತ್ರ ಪರಿಸ್ಥಿತಿ ಹೈದರಾಬಾದ್ ಕರ್ನಾಟಕದ ಕೃಷಿಯನ್ನು ದೇಸೀ ವಸ್ತುಗಳ ಮಾರಾಟಗಾರರನ್ನು ಆತಂಕಕ್ಕೀಡುಮಾಡಿರುವುದು ಮುಖ್ಯವಾಗುತ್ತದೆ. ಪ್ರಾದೇಶಿಕವಾಗಿ ಉಂಟಾಗುತ್ತಿರುವ ಇಂತಹ ದುಷ್ಪರಿಣಾಮಗಳನ್ನು ಹಾಗೂ ಕಡೆಗಣಿತವಾಗುತ್ತಿರುವ ಸಮಸ್ಯೆಗಳನ್ನು ಕಥನ ಸಾಹಿತ್ಯ ಮುನ್ನಲೆಗೆ ತರುತ್ತದೆ.

* ರಾಜಕೀಯ ಭ್ರಷ್ಟಾಚಾರದ ಪ್ರಾದೇಶಿಕ ಸ್ವರೂಪವನ್ನು ಬರಗಾಲದಂತಹ ಪ್ರಕೃತಿ ವಿಕೋಪದ ಪರಿಸ್ಥಿತಿಗಳಲ್ಲಿ, ಗಣಿಧಣಿಗಳ ಸ್ವಾರ್ಥಕ್ಕೆ ಬಲಿಯಾಗುತ್ತಿರುವ ಪ್ರಕೃತಿ ನಾಶದಲ್ಲಿ, ವಿದೇಶಿ ಕಂಪನಿಗಳಿಗೆ ಮಾರಾಟವಾಗುತ್ತಿರುವ ಕೃಷಿ ಭೂಮಿಯ ಅಂತ್ಯದಲ್ಲಿ ತಿಳಿಸಿಕೊಡುವ ಕಥನ ಸಾಹಿತ್ಯ ಇಂತಹ ಸಮಸ್ಯೆಗಳ ಬಗೆಗೆ ನಡೆಯಬೇಕಿರುವ ಚಿಂತನೆಯನ್ನು ಒತ್ತಾಯಿಸುತ್ತದೆ.

* ಭಾಷಿಕವಾಗಿ ಈವರೆಗೂ ಕಂಡುಬಂದಿದ್ದ ಶಿಷ್ಟರೂಪದ ನಿರೂಪಣೆಯನ್ನು ಮೀರಿ ಪ್ರಾದೇಶಿಕ ಆಡುಮಾತನ್ನು, ಸಮುದಾಯದ ಆಡುಮಾತನ್ನು ಇಲ್ಲಿನ ಕಥನ ಸಾಹಿತ್ಯ ಮುನ್ನೆಲೆ ತರುತ್ತದೆ. ಪ್ರಾದೇಶಿಕ ಅನನ್ಯತೆ ಉದ್ದೇಶ ಮಾತ್ರವಲ್ಲದೆ ಭಾಷಿಕವಾದ ಸಾಹಿತ್ಯಿಕ ಬರವಣಿಗೆಯ ಹೊಸ ಸಾಧ್ಯತೆಗಳನ್ನು ಇದು ತಿಳಿಸಿಕೊಡುತ್ತದೆ.

* ಕಥನ ಸಾಹಿತ್ಯ ಮಾತ್ರವಲ್ಲದೆ ಸಾಹಿತ್ಯದ ಪ್ರಕಾರಗಳಲ್ಲಿಯೂ ಈವರೆಗೂ ಕಡೆಗಣಿತವಾಗಿದ್ದ ಅಥವಾ ಮುನ್ನೆಲೆಗೆ ತರಬೇಕಿರುವ ವಿಷಯಗಳನ್ನು ಹೆಚ್ಚು ಕೇಂದ್ರೀಕರಿಸುತ್ತಿರುವುದನ್ನು ತಿಳಿದುಕೊಳ್ಳಲು ಇಂತಹ ಅಧ್ಯಯನಗಳು ಸಹಕಾರಿಯಾಗುತ್ತವೆ.

* ಒಂದು ಪ್ರದೇಶಕ್ಕೆ ಬದ್ಧವಾಗಿ ಈ ರೀತಿ ಮುನ್ನೆಲೆಗೆ ಬರುತ್ತಿರುವ ವಿಷಯಗಳನ್ನು ತಿಳಿಸಿಕೊಡು ವುದಲ್ಲದೆ ಜಾಗತಿಕ ವಿಷಯಗಳಲ್ಲಿಯೂ ಈ ರೀತಿ ಮುಖ್ಯ ನೆಲೆಗೆ ಬರದೆ ಹೋಗಿರುವ ವಿಷಯಗಳ ತಿಳಿದುಕೊಳ್ಳುವಿಕೆಗೆ ಇಂತಹ ಸೂಕ್ಷ್ಮ ಓದಿನ ಅಗತ್ಯವಿದೆ. ಆಶಯಕ್ಕೆ ಅನುಗುಣವಾಗಿ ಹೈದರಾಬಾದ್

ಕರ್ನಾಟಕದ ಕಥನ ಸಾಹಿತ್ಯದಲ್ಲಿ ಅಭಿವ್ಯಕ್ತಿಗೊಂಡ ಪ್ರಾದೇಶಿಕ ಸಂವೇದನೆಯ ಅಂಶಗಳನ್ನು ಗುರುತಿಸಿ ಇಲ್ಲಿ ವಿಶ್ಲೇಷಿಸಲಾಗಿದೆ. ಆದರೆ ವಾಸ್ತವದಲ್ಲಿ ಪ್ರಾದೇಶಿಕ ಸಂವೇದನೆಯೆಂಬುದು ಒಂದು ಕಲಾಕೃತಿಯಾಗಿ ಪ್ರತ್ಯೇಕವಾಗಿ ನಿಲ್ಲುವಂತಹ ಅಂಶವಲ್ಲ. ಒಂದು ಸಾಹಿತ್ಯಕ ಪಠ್ಯವನ್ನು ಉತ್ತಮ ಕಲಾಕೃತಿಯಾಗಿಸುವಲ್ಲಿ ಇಂತಹ ಪ್ರಾದೇಶಿಕ ಸಂವೇದನೆಗಳು ಮಹತ್ವದ ಪಾತ್ರವಹಿಸುತ್ತವೆ ಎಂಬ ಅಂಶವನ್ನು ನಾವು ತಿಳಿದಿರಬೇಕಾಗುತ್ತದೆ.

ಪ್ರಾದೇಶಿಕ ಸಂವೇದನೆಯನ್ನು ಕಥನ ಸಾಹಿತ್ಯದಲ್ಲಿ ಅಭಿವ್ಯಕ್ತಿಸುವ ಹಿನ್ನೆಲೆಗಳು ಕಾಲದಿಂದ ಕಾಲಕ್ಕೆ ಬದಲಾಗುತ್ತವೆ. ಪ್ರಾದೇಶಿಕವಾಗಿ ಕಂಡುಬರುವ ವಿಚಾರಗಳನ್ನು ಮುನ್ನೆಲೆಗೆ ತರುವ ಕಾರ್ಯವನ್ನು ಕಥನ ಸಾಹಿತ್ಯ ಪೂರೈಸುತ್ತದೆ. ಆದರೆ ಸಮಾಜದಲ್ಲಿ ಕಡೆಗಣಿತವಾದ ಸಾಹಿತ್ಯಿಕ, ಸಾಂಸ್ಕೃತಿಕ, ಸಮುದಾಯಿಕ, ಭಾಷಿಕ ವಿಚಾರಗಳನ್ನು ಮುನ್ನೆಲೆಗೆ ತರುವುದಕ್ಕೆ ಮಾತ್ರವೇ ಇದು ಬದ್ಧವಾಗಿರುತ್ತದೆ ಎಂದು ಹೇಳಲಾಗದು. ಈಗಾಗಲೇ ಮುನ್ನೆಲೆಯಲ್ಲಿರುವ ಸಮುದಾಯ ಅದರೊಂದಿಗೆ ಕಂಡುಬರುವ ಪ್ರಾದೇಶಿಕ ವೈಶಿಷ್ಟ್ಯಗಳನ್ನು ಸಾಹಿತ್ಯಿಕ ಬರವಣಿಗೆಯನ್ನಾಗಿಸಿಕೊಂಡಿರುವ ಕಥನ ಸಾಹಿತ್ಯವನ್ನು ಕಡೆಗಣಿಸಲಾಗದು. ಪ್ರಾದೇಶಿಕ ಹಿನ್ನೆಲೆಯಲ್ಲಿ ಇವುಗಳ ಅಭಿವ್ಯಕ್ತಿ ಅನ್ಯವಿಷಯಗಳ ಕಡೆಗಣನೆಯಾಗಿ ಕಂಡುಬಂದರೂ ಪ್ರದೇಶದಾಚೆ ಇವುಗಳು ನಿರ್ದಿಷ್ಟ ಪ್ರದೇಶವನ್ನು ಪ್ರತಿನಿಧಿಸುವಲ್ಲಿ, ಪ್ರಾದೇಶಿಕ ಅನನ್ಯತೆಯನ್ನು ಪ್ರತಿಪಾದಿಸುವಲ್ಲಿ ಮುಖ್ಯವೆನಿಸುತ್ತವೆ. ಸಮಾಜದಲ್ಲಿ ಕಡೆಗಣಿತವಾಗಿರುವ ಬದುಕನ್ನೇ ಕೇಂದ್ರೀಕರಿಸಿ ಸಾಹಿತ್ಯ ರಚನೆಗೆ ಅಥವಾ ನಿರ್ದಿಷ್ಟ ಪ್ರದೇಶದ ಪ್ರಾದೇಶಿಕತೆಯ ಅಭಿವ್ಯಕ್ತಿಗೆ ಬದ್ಧರಾಗಿರಬೇಕೆಂಬ ಹೇರಿಕೆಗಳಿಂದ ಕಥನ ಸಾಹಿತ್ಯದ ರಚನೆಯನ್ನು ಮಿತಿಗೊಳಿಸುವಂತಿಲ್ಲ.

ಕಡೆಗಣಿತವಾದ ವಿಷಯಗಳನ್ನು ಮುನ್ನೆಲೆಗೆ ತರುವಿಕೆ ಈವರೆಗೂ ಆದ ಅನ್ಯಾಯಗಳಿಗೆ ಸಾಹಿತ್ಯಿಕ ಸಾಂತ್ವಾನವನ್ನು ನೀಡಿದಂತೆಯೆ ಹೊರತು ಸಾಮಾಜಿಕ ಪರಿಸ್ಥಿತಿಗಳಲ್ಲಿ ಯಾವುದೇ ರೀತಿಯ ಬದಲಾವಣೆ ತಂದಂತಾಗುವುದಿಲ್ಲ. ಕೆಲವೇಳೆ ಸಾಮಾಜಿಕವಾಗಿ ಕಡೆಗಣಿತವಾದ ವಿಷಯಗಳು ಮುನ್ನೆಲೆಗೆ ಬರಬೇಕೆಂಬುದು ಕಥನಕಾರನ ಆಶಯದ ಕಾರಣಕ್ಕೆ ಈ ರೀತಿಯ ವಿಷಯಗಳು ರೂಪುಗೊಳ್ಳುವ ಸಾಧ್ಯತೆಗಳು ಇರುತ್ತವೆ. ಇಂತಹ ಸಂದರ್ಭದಲ್ಲಿ ಮುನ್ನೆಲೆಯೆಂಬುದು ಒಂದು ಬಗೆಯ ಊಹಾತ್ಮಕ ವಿಷಯವಾಗಿ ಕಂಡುಬರುವ ಸಾಧ್ಯತೆಗಳು ಇಲ್ಲದಿಲ್ಲ. ಇಂತಹ ನಿರ್ದಿಷ್ಟ ಉದ್ದೇಶವನ್ನಿಟ್ಟುಕೊಂಡೆ ಪ್ರಾದೇಶಿಕ ಸಂವೇದನೆಯ ಅಭಿವ್ಯಕ್ತಿ ಕಥನ ಸಾಹಿತ್ಯದಲ್ಲಿ ಕಂಡುಬರುವುದಿಲ್ಲ. ಹಾಗೊಂದು ವೇಳೆ ಇಂತಹ ನಿರ್ದಿಷ್ಟ ಉದ್ದೇಶದಿಂದಲೇ ಬರೆಯುವ ಬರಹಗಾರರು ಸದಾ ಒಂದೇ ರೀತಿಯ ಬರವಣಿಗೆಗೆ ಸೀಮಿತಗೊಳ್ಳಲಾರರು. ಕಥನ ಸಾಹಿತ್ಯದಲ್ಲಿ ಪ್ರಾದೇಶಿಕತೆಯ ಅಭಿವ್ಯಕ್ತಿಯು ಭಿನ್ನತೆಯನ್ನು ಪಡೆದುಕೊಂಡಿದೆ. ವಿಸ್ಮೃತಿಯ ಕಾರಣದಿಂದ ಕಂಡು ಬರುವ ಪ್ರಾದೇಶಿಕತೆ, ಪ್ರಾದೇಶಿಕ ವೈಶಿಷ್ಟ್ಯಗಳನ್ನು ಆಶಯಕ್ಕೆ ಪೂರಕವಾಗಿ ಮಾತ್ರವೇ ಬಳಸಿಕೊಳ್ಳುವ ಸಂದರ್ಭದಲ್ಲಿ ಬಳಕೆಗೊಂಡ ಪ್ರಾದೇಶಿಕತೆ ಮತ್ತು ಈವರೆಗೂ ಸಾಹಿತ್ಯಿಕ ಅಭಿವ್ಯಕ್ತಿಯನ್ನು ಕಾಣದಿದ್ದ ವಿಶಿಷ್ಟ ಪ್ರಾದೇಶಿಕ ವಿಚಾರಗಳನ್ನು ಮುನ್ನೆಲೆಗೆ ತರುವುದರ ಉದ್ದೇಶದಿಂದ ಕಂಡುಬಂದ ಪ್ರಾದೇಶಿಕತೆ.

ಹೀಗೆ ಪ್ರಾದೇಶಿಕ ಸಂವೇದನೆಯು ಅಭಿವ್ಯಕ್ತಿಗೊಳ್ಳುವಲ್ಲಿ ಇವುಗಳಲ್ಲಿ ಯಾವುದಾದರೂ ಒಂದನ್ನು ಇಲ್ಲವೆ ಎಲ್ಲವನ್ನೂ ಬಳಸಿಕೊಳ್ಳುವ ಸಾಧ್ಯತೆಗಳಿರುತ್ತವೆ.

ಕಡೆಗಣಿಸಲ್ಪಟ್ಟ ಸಮುದಾಯದ ವೈಶಿಷ್ಟ್ಯಗಳನ್ನು ಮುನ್ನೆಲೆಗೆ ತರುವುದು ಸಾರ್ವತ್ರಿಕ ಸಂವಹನಕ್ಕೆ ದಕ್ಕುವುದಿಲ್ಲವೆಂಬ ವಿಮರ್ಶೆಯನ್ನು ಎದುರಿಸುವುದು. ಇಂತಹ ಕಡೆಗಣಿತ ವಿಷಯಗಳನ್ನು ಮುನ್ನೆಲೆಗೆ ತರುವಲ್ಲಿ ಇಂತಹ ವಿಮರ್ಶೆ ಹಿಂಜರಿಕೆಗಳನ್ನುಂಟು ಮಾಡುತ್ತದೆ. ಉದಾ:- 'ಬೆಳ್ಯಾ' ಕಾದಂಬರಿಯ ನಂತರ ಇಂತಹ ಬರಹಗಳು ಸಾಹಿತ್ಯಿಕವಾಗಿ ಕಂಡು ಬರಲಿಲ್ಲ. ಅನ್ಯಪ್ರದೇಶದ ಆಚರಣೆಗಳನ್ನು ನಿರ್ದಿಷ್ಟ ಪ್ರದೇಶಕ್ಕೆ ಅನ್ವಯಿಸಿ ಹೇಳುವ ಸಂದರ್ಭದಲ್ಲಿ ಒಂದು ಸಮುದಾಯದ ಮೇಲೆ ಉಂಟಾಗುವ ಶೋಷಣೆಯನ್ನು ತಿಳಿಸುವ ಉದ್ದೇಶ ಮಾತ್ರ ಈಡೇರುತ್ತದೆ. ಇಂತಹ ಅನ್ಯ ಆಚರಣೆಗಳ ಪ್ರೇರಣೆಯಲ್ಲಿ ಅಭಿವ್ಯಕ್ತವಾಗುವ ಸಂವೇದನೆಗಳು ಪ್ರಾದೇಶಿಕವಾದ ವೈಶಿಷ್ಟ್ಯಗಳನ್ನು ಮುನ್ನೆಲೆಗೆ ತರಲಾರವು. ಉದಾ:- ಬಾಲಚಂದ್ರ ಜಯಶೆಟ್ಟಿಯವರ 'ರಾಚಿ' ಕತೆ ಕೆಳವರ್ಗದ ಶೋಷಣೆಯನ್ನು ತಿಳಿಸುತ್ತದೆ. ಸಾರ್ವತ್ರಿಕ ನೆಲೆಯಲ್ಲಿ ಕೆಳವರ್ಗದವರ ಮೇಲೆ ಉಂಟಾಗುವ ಶೋಷಣೆಯ ವಿಭಿನ್ನ ಸ್ವರೂಪವನ್ನು ಒಪ್ಪಿಕೊಂಡಂತೆ ಆಚರಣೆಯನ್ನು ಒಪ್ಪಿಕೊಳ್ಳಲಾಗದು. ಅನ್ಯ ಆಚರಣೆಗಳು ಸ್ಥಳೀಯ ಕೆಳವರ್ಗದ ಶೋಷಣೆಗಳನ್ನು ತಿಳಿಯುವ ಪರಿಕರಗಳಾಗಲಾರವು. ಪ್ರದೇಶದಲ್ಲೇ ಪರಂಪರಾಗತವಾಗಿ ಬೆಳೆದು ಬಂದಿರುವ ದೋಷಯುಕ್ತ ಆಚರಣೆಯೊಂದರ ಹಿನ್ನೆಲೆಯಲ್ಲಿ ಸಂವೇದನೆಯೊಂದರ ಅಭಿವ್ಯಕ್ತಿ ಹೆಚ್ಚು ಮನದಟ್ಟಾಗುತ್ತದೆ. ಪ್ರಾದೇಶಿಕ ಅನಿಷ್ಟ ಆಚರಣೆಗಳಿಂದ ಇಲ್ಲಿನ ಜನ ಬದುಕು ಕಂಡುಕೊಳ್ಳಬಹುದಾದ ಪರಿಹಾರಗಳನ್ನು ಸೂಚಿಸುವ, ಸಮುದಾಯದ ಮುನ್ನೆಲೆಯನ್ನು ತಿಳಿಸಿಕೊಡುವುದು ಸಾಧ್ಯವಾಗುತ್ತದೆ.

ಸ್ತ್ರೀ ಸಾಹಿತ್ಯವೆಂಬುದು ತಂಬಿಟ್ಟು - ಬಾಳೆಹಣ್ಣಿಗೆ ಸೀಮಿತವಾದದ್ದೆಂಬ ವಿಮರ್ಶೆಗೆ ಪ್ರತಿಕ್ರಿಯೆ ನೀಡುವ ಹಿನ್ನೆಲೆಯಲ್ಲಿ ಖಂಡದೂಟ, ಸಿಂದಿ ಕುಡಿಯುವಿಕೆಯ ವರ್ಣನೆಯನ್ನೊಳಗೊಂಡ 'ಬದುಕು' ಕಾದಂಬರಿಯ ಆಕೃತಿಯ ಬಹುಪಾಲು ಇಂತಹ ವಿಷಯಗಳಿಂದಲೇ ಕೂಡಿದೆ. ದೈನಂದಿನ ಬದುಕಿನುದ್ದಕ್ಕೂ ಇಂತಹ ವಿಷಯಗಳು ಪ್ರಾಶಸ್ತ್ಯ ಪಡೆಯುತ್ತವೆ ಎಂಬುದು ಒಪ್ಪಿತ ವಿಚಾರವೇ ಆದರೆ ಜಮಾದಾರ ಮಲ್ಲಪ್ಪನ ವೈಭವಯುತ ಬದುಕಿನಂತೆ ಮೂರು ಹೊತ್ತು ಖಂಡದೂಟ, ಸಿಂದಿ ಕುಡಿಯುವುದನ್ನು ಕೆಳವರ್ಗದ ಬದುಕಿನ ರೀತಿ ಎಂಬ ನೆಲೆಯಲ್ಲಿಯೇ ಕಾದಂಬರಿ ಮುನ್ನೆಲೆಗೆ ತರುತ್ತದೆ. ಈ ಭಾಗದ ಕೆಳವರ್ಗದ ಬದುಕು ಇದೇ ರೀತಿ ಇರುತ್ತದೆಂದು ಜಮಾದಾರ ಮಲ್ಲಪ್ಪನ ಬದುಕಿನ ಹಿನ್ನೆಲೆಯಲ್ಲಿ ನಿರ್ಧರಿಸಲಾಗದು. ಇಂತಹದೊಂದನ್ನು ಮುನ್ನೆಲೆಗೆ ತರುವ ಕಥನಕಾರರ ಉದ್ದೇಶಕ್ಕೂ ಸಾಮಾಜಿಕ ಪರಿಸ್ಥಿತಿಗಳಿಗೂ ಅಂತರವಿರುತ್ತದೆ. ರಾಶಿ ಬುತ್ತಿ ಮಾಡುವಲ್ಲಿ ವ್ಯಕ್ತಗೊಳ್ಳುವ ಎಲ್ಲಾ ಆಚರಣೆಗಳು ಕೆಳವರ್ಗದಲ್ಲಿದೆ ಎಂದು ಹೇಳಲಾಗದು. ಜಮೀನುಳ್ಳ ಕೆಳವರ್ಗದ ಮಲ್ಲಪ್ಪನಂತೆ ಉಳುಮೆಗಾಗಿ ಜಮೀನೇ ಇಲ್ಲದವರ ಮೂಲಕವೂ ಅಭಿವ್ಯಕ್ತವಾಗುವ ನೋವು ಒಂದು ಪ್ರದೇಶದ ಪ್ರಾದೇಶಿಕ ಸಂವೇದನೆ ಯಾಗುತ್ತದೆ. ಇಂತಹ ಆಚರಣೆಗಳಿಂದ ವಂಚಿತವಾದವರ ಭಾವನೆಗಳಿಗೂ, ಅಂತವರ ದೃಷ್ಟಿಯಲ್ಲಿ

ಆಚರಣೆಗಳು ಪಡೆದುಕೊಳ್ಳುವ ಸಡಿಲಿಕೆಗಳು ಇಲ್ಲಿ ಮುಖ್ಯವೆನಿಸುತ್ತವೆ. ಪ್ರಾದೇಶಿಕವಾಗಿ ಕಂಡುಬರುವ ಬಹಳಷ್ಟು ಆಚರಣೆಗಳ ಹಿನ್ನೆಲೆಯಲ್ಲಿ ಯೋಚಿಸುವುದಾದರೆ ಚೆನ್ನಣ್ಣವಾಲೀಕಾರರು ತಿಳಿಸುವ ಕೂರಿಗೆ ಪೂಜೆ, ದೀಪಾವಳಿ ಹಬ್ಬದ ಆಚರಣೆ, ಚಂದ್ರಕಾಂತ ಕುಸನೂರರು ತಿಳಿಸುವ ದೀಕ್ಷಿತನ ಮದುವೆ ವರ್ಣನೆಗಳು ಇತ್ಯಾದಿಗಳು ಸಮುದಾಯವೊಂದರ ಆಚರಣೆಗಳ ಅಂತಿಮ ರೂಪವಾಗಿರುವುದಿಲ್ಲ. ಸ್ಥಿತಿವಂತರ ಆಚರಣೆಯ ವಿಧಿವಿಧಾನಗಳನ್ನು ಸಮುದಾಯವೊಂದರ ಆಚರಣೆಗಳ ಸ್ವರೂಪವನ್ನು ನಿರ್ಧರಿಸುವ ಅಂಶಗಳೆಂದು ಇವುಗಳನ್ನು ಪರಿಭಾವಿಸಲಾಗದು. ಇದರಾಚೆಗೆ ಅನುಭವಕ್ಕೆ ದಕ್ಕದಿರುವ ಎಷ್ಟೋ ವಿಚಾರಗಳು ಪ್ರಾದೇಶಿಕ ಸಂವೇದನೆಯಲ್ಲಿ ಸೇರಿಕೊಳ್ಳಬೇಕಾದುದರ ಅಗತ್ಯವಿದೆ. ಇಲ್ಲದೆ ಹೋದರೆ ಪ್ರಾದೇಶಿಕತೆ, ಪ್ರಾದೇಶಿಕ ಸಂವೇದನೆಯು ಏಕಮುಖದ ಸತ್ಯವೆನಿಸುತ್ತದೆ.

ಮುನ್ನೆಲೆಗೆ ತರಬಯಸುವ ಪ್ರಾದೇಶಿಕ ವೈಶಿಷ್ಟ್ಯಗಳು ಎದುರಿಸುವ ಮುಖ್ಯ ಸಮಸ್ಯೆಯೆಂದರೆ ಅವುಗಳ ಮುನ್ನೆಲೆಗಳು ಸ್ವತಃ ಪ್ರಾದೇಶಿಕವಾಗಿ, ಸಮುದಾಯಿಕವಾಗಿ ಅರ್ಥವಾಗದೆ ಉಳಿಯುವಂತಹದ್ದು. ಉದಾಹರಣೆಗೆ:- ಅಮರೇಶ ನುಗಡೋಣಿಯವರ 'ನೀರು ತಂದವರು' ಕತೆಯಲ್ಲಿ ಸಿದ್ದಪ್ಪನ ಮೂಲಕ ತಿಳಿಸ ಹೊರಟಿರುವ ಕೆಳವರ್ಗದ ಅಭಿವೃದ್ಧಿಯ ಆಶಯ, ಸಮುದಾಯವೊಂದರ ಯೋಚನಾ ಕ್ರಮದಲ್ಲಾಗಬೇಕಾದ ಬದಲಾವಣೆಗಳು ಈ ಪ್ರದೇಶದ ಸ್ವತಃ ಆ ಸಮುದಾಯದವರಿಗೆ ಮತ್ತು ಇಲ್ಲಿನ ಓದುಗರೆನಿಸಿದವರ ತಿಳುವಳಿಕೆಗೆ ನಿಲುಕಿದೆ ಎಂದು ಹೇಳಲಾಗದು. ಅಶಿಕ್ಷಿತರಿಗೆ ಇಂತಹ ವಿಷಯಗಳು ತಲುಪುವುದಿಲ್ಲ. ಇಂತಹ ಸಂವೇದನೆಗಳು ಶಿಕ್ಷಿತ ವರ್ಗಕ್ಕೆ ಧಕ್ಕಿದರೂ ಸಾಮಾಜಿಕ ಬದುಕಿನಲ್ಲಿ ಅವುಗಳನ್ನು ಅಳವಡಿಸಿಕೊಳ್ಳುವಿಕೆ ವಿಮರ್ಶೆಯನ್ನು ಎದುರಿಸದೆ ಉಳಿಯದು. ಭಾಷಿಕವಾಗಿ ಹೊಸ ಪ್ರಯೋಗಕ್ಕಿಳಿಯುವ ಕುಂ. ವೀರಭದ್ರಪ್ಪನವರ ಕಥನ ಶೈಲಿಯು ಸಮುದಾಯವೊಂದರ ಸಂವೇದನೆಯನ್ನು ಅವರದೇ ಆದ ವಿಶಿಷ್ಟ ಭಾಷಾ ಶೈಲಿಯ ಮೂಲಕ ಮುನ್ನೆಲೆಗೆ ತರುತ್ತಾರೆನ್ನುವಲ್ಲಿ ಅನೇಕ ತೊಡಕುಗಳಿವೆ. ಈ ಪ್ರಾಂತ್ಯದ ಅಶಿಕ್ಷಿತ ಅಥವಾ ಕೆಳಸಮುದಾಯದ ಜನ ಇಂತಹದ್ದೊಂದು ಭಾಷೆಯನ್ನಾಡುವ ರೂಢಿಯನ್ನು ಹೊಂದಿದೆ ಎಂಬುದನ್ನು ಒಪ್ಪಲಾಗದು. ಇದಲ್ಲದೆ ಇಂತಹ ಭಾಷೆಯನ್ನಾಡುವ ಕೆಳಸಮುದಾಯದ ಶಿಕ್ಷಿತ ವರ್ಗಕ್ಕೆ ಅದರ ಅರ್ಥಗ್ರಹಿಕೆ ಸಾಧ್ಯವಾಗುವುದು ಅನುಮಾನದ ಸಂಗತಿ. ಇಂತಹ ಭಾಷಿಕ ಪ್ರಯೋಗಗಳು ಊಹಾತ್ಮಕ ರಚನೆಯೆಂಬ ನಿರ್ಧಾರಕ್ಕೆ ದಾರಿಯಾಗುತ್ತವೆ.

ಅದೇನೆ ಅಡ್ಡಿ ಆತಂಕಗಳಿದ್ದರೂ ಪ್ರದೇಶದ ಒಳಗೆ ಇಂತಹ ಮುನ್ನೆಲೆಗಳು ಕಥೆಗಾರನ ಸಾಮಾಜಿಕ ಪ್ರಜ್ಞೆ, ಕಾಳಜಿಯನ್ನು ತಿಳಿಸಿಕೊಡುತ್ತವೆ. ಪ್ರದೇಶವೊಂದರ ಪ್ರಾದೇಶಿಕ ಸಂವೇದನೆಯ ಅರ್ಥಗ್ರಹಿಕೆಗೆ ವ್ಯಾಪಕತೆಯನ್ನು ತಂದುಕೊಡುತ್ತವೆ. ಇಂತಹ ಪ್ರಾದೇಶಿಕ ಸಂವೇದನೆಯ ಅಭಿವ್ಯಕ್ತಿ ಪ್ರದೇಶದಾಚೆಗೆ ಪ್ರದೇಶವೊಂದನ್ನು ವಿಶಿಷ್ಟವಾಗಿ ಗುರುತಿಸುವಂತೆ ಮಾಡುತ್ತವೆ. ಈ ಪ್ರದೇಶದ ಕಥೆಗಾರರ ಸೃಜನಶೀಲತೆಗೆ ಪ್ರೇರಕವಾಗುವ ಪ್ರಾದೇಶಿಕ ವೈಶಿಷ್ಟ್ಯಗಳು ಸಾಹಿತ್ಯ ವಲಯದಲ್ಲಿ ಅದರ ಗುರುತಿಸುವಿಕೆಗೆ ಕಾರಣವಾಗುವಂತಹದ್ದು. ಕನ್ನಡ ಕಲಿಕೆಗೆ, ಸಾಹಿತ್ಯಿಕ ಬರವಣಿಗೆಗೆ ಮುಂದಾದವರು ಈ ಪ್ರದೇಶದ ಮುಕ್ತಿ

ಹೋರಾಟವನ್ನು ಪ್ರಾದೇಶಿಕ ವೈಶಿಷ್ಟ್ಯವಾಗಿ ಮುನ್ನೆಲೆಗೆ ತರಬೇಕೆಂಬ ಉದ್ದೇಶವನ್ನು ಮಾತ್ರವೇ ಹೊಂದಿರಲಿಲ್ಲ. ಈ ಪ್ರದೇಶದ ಹಿಂದುಳಿದಿರುವಿಕೆಗೆ ಕಾರಣವಾದ ಚಾರಿತ್ರಿಕ ಅಂಶವನ್ನು ಮುನ್ನೆಲೆಗೆ ತರುವ ಹಾಗೂ ಇಂತಹದ್ದೊಂದು ಚಾರಿತ್ರಿಕ ಘಟನೆಯು ಪಡೆಯಬೇಕಿರುವ ಮಹತ್ವವನ್ನು ತಿಳಿಸಿಕೊಡುವುದೇ ಆಗಿದೆ. ಓದುಗ ವಲಯಕ್ಕೆ ಅಪರಿಚಿತವಾಗಿಯೇ ಉಳಿದಿದ್ದ ಈ ಪ್ರದೇಶದ ಸಾಹಿತ್ಯಿಕ ರಚನೆ ಇತ್ತೀಚೆಗೆ ಪ್ರಾಧಾನ್ಯತೆಯನ್ನು ಪಡೆಯುತ್ತಿದೆ. ಸಾಹಿತ್ಯಿಕವಾಗಿ ತನ್ನ ಪರಿಸರದ ಬದುಕು, ಭಾಷೆಯನ್ನು ತೆರೆದಿಡುವ ಅವಕಾಶವನ್ನು ತುಂಬಾ ತಡವಾಗಿಯೇ ಪಡೆದುಕೊಂಡ ಈ ಪ್ರದೇಶದ ಸಾಹಿತಿಗಳು ಪ್ರಾರಂಭದಲ್ಲಿ ಅಂತಹ ಮಾನ್ಯತೆಯನ್ನು ಪಡೆದುಕೊಂಡಿಲ್ಲ. ಪ್ರಾದೇಶಿಕವಾಗಿ ಹಿಂದುಳಿದಿರುವಿಕೆಯ ಜೊತೆಗೆ ಸಾಹಿತ್ಯಿಕ ಹಿಂದುಳಿದಿರುವಿಕೆಯು ಈ ಪ್ರದೇಶದ ಅನುಭವಕ್ಕೆ ಬಂದಿದೆ. ಸಾಹಿತ್ಯ ರಚನೆಯಲ್ಲಿ ಮುಂದುವರೆದಿದ್ದ ಪ್ರದೇಶಗಳ ಸಾಹಿತ್ಯಿಕ ಸಾಧನೆಯನ್ನು ಸರಿಗಟ್ಟುವ ಶಕ್ತಿ ಇಲ್ಲಿನ ಸಾಹಿತ್ಯಕ್ಕಿರಲಿಲ್ಲ ವೆಂಬುದು ವ್ಯಕ್ತಿಕೇಂದ್ರಿತವಾದ ಸಮಸ್ಯೆಯಲ್ಲ. ಅವಕಾಶ ಹೀನ ಪರಿಸರದ ಬಿಕ್ಕಟ್ಟುಗಳು ಮತ್ತು ಕನ್ನಡ ಸಾಹಿತ್ಯಿಕ ಸಾಧನೆಯಲ್ಲಿ ತನ್ನದೇ ಆದ ದಾರಿ ಕಂಡುಕೊಳ್ಳುತ್ತಿರುವುದರ ಆರಂಭಿಕ ಸಮಸ್ಯೆಗಳು ಈ ಪ್ರದೇಶದ ಸಾಹಿತ್ಯವನ್ನು ಬಾಧಿಸಿದವು. ಈಗಾಗಲೇ ಸಾಹಿತ್ಯ ವಲಯದಲ್ಲಿ ಯಜಮಾನ ಸ್ಥಾನವನ್ನು ಪಡೆದುಕೊಂಡಿರುವ ಕೆಲ ಪ್ರದೇಶಗಳ ಸಾಹಿತ್ಯಿಕ ರಚನೆಗಳು ಅದಾಗ ತಾನೆ ಸಾಹಿತ್ಯ ರಚನೆಗೆ ತೊಡಗಿದ ಇಂತಹ ಪ್ರದೇಶಗಳಿಗೆ ಓದುಗರು ಇಲ್ಲದಂತೆ ಮಾಡಿದವು. ಇದ್ದಕ್ಕಿದ್ದಂತೆ ಈ ಪ್ರದೇಶದ ಸಾಹಿತ್ಯಕ್ಕೆ ಪ್ರಾಶಸ್ತ್ಯವನ್ನು ಕೊಟ್ಟಿರುವುದನ್ನು ಗುಮಾನಿಯಿಂದ ನೋಡಬೇಕಾದಂತಹ ಸ್ಥಿತಿ ಉಂಟಾದರೆ ಆಶ್ಚರ್ಯ ಪಡಬೇಕಿಲ್ಲ. ಕಾರಣ ಈ ಹಿಂದೆ ಆ ಮಟ್ಟದ ಕಡಗಣನೆಯನ್ನು ಇಲ್ಲಿನ ಸಾಹಿತ್ಯ ಸಾಹಿತಿಗಳು ಅನುಭವಿಸಿದ್ದಾರೆ. ಸಾಹಿತ್ಯ ಚರಿತ್ರೆಯಲ್ಲಿ ಅಥವಾ ವಿಮರ್ಶೆಯಲ್ಲಿ ಸ್ಥಾನ ಪಡೆಯುವುದೇ ಶ್ರೇಷ್ಠ ಸಾಹಿತ್ಯ ಕೃತಿಯ ಲಕ್ಷಣವೆಂದು ಒಪ್ಪಲಾಗದು. ಆದಾಗ್ಯೂ ಓದುಗರನ್ನು ಹಂಬಲಿಸಿದ್ದ ಹೊಸ ಸಂವೇದನೆಯ ಅಭಿವ್ಯಕ್ತಿಗೆ ಪ್ರೋತ್ಸಾಹಿತರಾಗಬೇಕಿದ್ದ ಈ ಪ್ರದೇಶದ ಲೇಖಕರಿಗೆ ಸಾಹಿತ್ಯ ರಾಜಕಾರಣದಿಂದ ನಿರಾಸೆಯುಂಟಾಗಿದೆ ಎಂದರೆ ತಪ್ಪಾಗದು. ಸಾಹಿತ್ಯ ರಾಜಕಾರಣವೆಂಬುದು ಕೇವಲ ಇಂತಹ ಹಿಂದುಳಿದ ಪ್ರದೇಶದ ಸಾಹಿತ್ಯಕ್ಕೆ ಅನ್ವಯಿಸುವಂತೆ ಮಾತ್ರವಲ್ಲ, ಸ್ತ್ರೀವಾದ, ದಲಿತ ಬಂಡಾಯ ಮುಂತಾದ ಹೊಸ ವಿಚಾರಗಳ ಸಾಹಿತ್ಯಿಕ ಅಭಿವ್ಯಕ್ತಿಗೂ ಪ್ರೋತ್ಸಾಹ ದೊರೆಯದಂತೆ ಮಾಡಿರುವುದು ಇದೆ. ಈವರೆಗೂ ಪ್ರಾಧಾನ್ಯವನ್ನು ಪಡೆಯದಿದ್ದ ವಿಷಯಗಳನ್ನು ಮುನ್ನೆಲೆಗೆ ತರುವುದಲ್ಲದೆ ಸಾಹಿತ್ಯಿಕವಾಗಿ ಪ್ರಾಶಸ್ತ್ಯಯನ್ನು ಗಳಿಸಬೇಕೆಂಬುದು ಪ್ರತಿ ಪ್ರದೇಶದ ಪ್ರತಿಯೊಬ್ಬ ಸಾಹಿತಿಯ ಅಪೇಕ್ಷೆಯಾಗಿರುತ್ತದೆ. ಕಾಲ ದೇಶಾತೀತವಾದ ಈ ಅಪೇಕ್ಷೆಗಳು ಪ್ರತಿ ಪ್ರದೇಶದ ಸಾಹಿತ್ಯಿಕ ರಚನೆಯು ಹೊಸ ಸವಾಲನ್ನು, ಸೃಜನಶೀಲತೆಯನ್ನು ಕಂಡುಕೊಳ್ಳುವಂತೆ ಮಾಡುತ್ತವೆ. ಇಂತಹ ಹೊಸ ಸವಾಲುಗಳನ್ನು ನಿರ್ವಹಿಸುತ್ತ ಸೃಜನಶೀಲ ಬರವಣಿಗೆಯನ್ನು ಸಾಧ್ಯವಾಗಿಸಿಕೊಂಡಿರುವ ಹೈದರಾಬಾದ್ ಕರ್ನಾಟಕದ ಕಥನ ಸಾಹಿತ್ಯಿಕ ಮಾನ್ಯತೆಯನ್ನು ಪಡೆದಿದೆ ಹಾಗೂ ಅದರ ಕಾಯ್ದುಕೊಳ್ಳುವಿಕೆಯ ಬಗೆಗೆ ಜಾಗೃತವಾಗಿದೆ.

ಹೈದರಾಬಾದ್ ಕರ್ನಾಟಕದ ಕಥನಸಾಹಿತ್ಯ ಮಾತ್ರವಲ್ಲದೆ ಈ ಭಾಗದ ಒಟ್ಟಾರೆ ಸಾಹಿತ್ಯವನ್ನು ಆಕರವಾಗಿಸಿಕೊಂಡು ಅಧ್ಯಯನ ಮಾಡುವ ವಿಷಯಗಳು ಬಹಳಷ್ಟಿವೆ.

ವಸಾಹತೋತ್ತರ ಸಂದರ್ಭದ ದಾಳಿಯು ಕೃಷಿ ಸಂಸ್ಕೃತಿಯ ಮೇಲೆ ಉಂಟುಮಾಡಿರುವ ದುಷ್ಪರಿಣಾಮವನ್ನು ಕುರಿತು ಅಧ್ಯಯನಗಳು ಸಾಗಬೇಕಿದೆ.

ಸಾಹಿತ್ಯ ಚಳುವಳಿಯ ಫಲವಾಗಿ ಕಂಡುಬಂದ ಪ್ರಗತಿಶೀಲ, ದಲಿತ-ಬಂಡಾಯ, ಸ್ತ್ರೀವಾದ, ನವ್ಯ, ನವ್ಯೋತ್ತರ ಪರಿಕಲ್ಪನೆಗಳ ಹಿನ್ನೆಲೆಯಲ್ಲಿ ರಚನೆಗೊಂಡ ಸಾಹಿತ್ಯಕ್ಕೂ ಈ ಭಾಗದ ಸಾಹಿತ್ಯಿಕ ಅಭಿವ್ಯಕ್ತಿಗೂ ಇರುವ ವ್ಯತ್ಯಾಸಗಳನ್ನು ತೌಲನಿಕ ಅಧ್ಯಯನದ ಮೂಲಕ ಕಂಡುಕೊಳ್ಳುವ ಸಾಧ್ಯತೆ ಇದೆ.

ಪ್ರಾದೇಶಿಕ ಸಂವೇದನೆಯ ಅಭಿವ್ಯಕ್ತಿಯ ತಾತ್ವಿಕತೆಯನ್ನು ಅನ್ಯಪ್ರದೇಶದ ಪ್ರಾದೇಶಿಕ ಸಂವೇದನೆಯ ತಾತ್ವಿಕತೆಯೊಂದಿಗೆ ತೌಲನಿಕವಾಗಿ ಅಧ್ಯಯನ ಮಾಡವ ಸಾಧ್ಯತೆಗಳಿವೆ.

ಪ್ರಸ್ತುತ ಅಧ್ಯಯನ ಪ್ರಾತಿನಿಧಿಕ ಕಥನ ಸಾಹಿತ್ಯವನ್ನು ಆಧರಿಸಿದೆ. ಈ ಪ್ರದೇಶದ ಸಮಗ್ರ ಕಥನ ಸಾಹಿತ್ಯವನ್ನು ಆಧರಿಸಿ ಪ್ರಾದೇಶಿಕ ಸಂವೇದನೆಯ ಅಭಿವ್ಯಕ್ತಿಯ ಸ್ವರೂಪ ಮತ್ತು ತಾತ್ವಿಕತೆಯನ್ನು ಕಂಡುಕೊಳ್ಳುವ ಸಾಧ್ಯತೆಯಿದೆ. 'ಹೈದರಾಬಾದ್ ಕರ್ನಾಟಕದ ಕಥನ ಸಾಹಿತ್ಯದಲ್ಲಿ ಪ್ರಾದೇಶಿಕ ಸಂವೇದನೆ' ಎಂಬ ಶೀರ್ಷಿಕೆಯಡಿ ಕೈಗೊಂಡಿರುವ ಈ ಅಧ್ಯಯನವು ತನ್ನ ಪೂರ್ವಾಲೋಚನೆಯ ಉದ್ದೇಶವನ್ನು ಸಂಪೂರ್ಣವಾಗಿ ಈಡೇರಿಸಿಕೊಂಡಿದೆ ಎಂದು ಹೇಳಲಾಗದು. ಆದರೆ ಇಂತಹ ಆಲೋಚನೆಯ ಹಿನ್ನೆಲೆಯಲ್ಲಿ ರೂಪಗೊಂಡ ಪ್ರಸ್ತುತ ನಿಬಂಧವು ಈ ಮಾದರಿಯ ಮುಂದಿನ ಅಧ್ಯಯನ ಗಳಿಗೆ ಪ್ರೇರಕವಾಗುವಲ್ಲಿ ಸಾರ್ಥಕತೆ ಹೊಂದುತ್ತದೆ ಎಂದು ಆಶಿಸಲಾಗಿದೆ.

•••

# ಆಕರ ಸೂಚಿ

## ೧. ಪ್ರಧಾನ ಆಕರಗಳು

೧. ಅಮರೇಶ ನುಗಡೋಣಿ, ೧೯೯೧, ಮಣ್ಣು ಸೇರಿತು ಬೀಜ, ವಿಕಾಸ ವೇದಿಕೆ, ರಾಯಚೂರು.

೨. ಅಮರೇಶ ನುಗಡೋಣಿ, ೨೦೦೪, ಮುಸ್ಸಂಜೆ ಕಥಾನಕಗಳು, ಸಿವಿಜಿ ಪಬ್ಲಿಕೇಶನ್ಸ್, ಬೆಂಗಳೂರು.

೩. ಅಮರೇಶ ನುಗಡೋಣಿ, ೨೦೦೭, ಸವಾರಿ, ಅಂಕಿತ ಪುಸ್ತಕ, ಬೆಂಗಳೂರು.

೪. ಅಮರೇಶ ನುಗಡೋಣಿ, ೨೦೦೮; ತಮಂಧದ ಕೇಡು, ಧಾತ್ರಿ ಪುಸ್ತಕ ಪ್ರಕಾಶನ.

೫. ಗೀತಾ ನಾಗಭೂಷಣ, ೨೦೦೬, ಕ್ಯಾದಗಿ ಬನದಾಗ ಕತೆಯಾಗಿ ನಿಂತವರು, ಸಿವಿಜಿ ಪಬ್ಲಿಕೇಶನ್ಸ್, ಬೆಂಗಳೂರು.

೬. ಗೀತಾ ನಾಗಭೂಷಣ, ೨೦೦೭, ಬದುಕು, ಲೋಹಿಯಾ ಪ್ರಕಾಶನ, ಬಳ್ಳಾರಿ.

೭. ಚಂದ್ರಕಾಂತ ಕುಸನೂರ, ೧೯೭೫, ಯಾತನಾಶಿಬಿರ, ಮನೋಹರ ಗ್ರಂಥ ಮಾಲಾ, ಧಾರವಾಡ.

೮. ಚಂದ್ರಕಾಂತ ಕುಸನೂರ, ೧೯೮೬, ಗೋಹರಜಾನ್ ಮಾಲತಿ ಮತ್ತು ನಾನು, ಐಬಿಎಚ್ ಪ್ರಕಾಶನ, ಬೆಂಗಳೂರು.

೯. ಚಂದ್ರಕಾಂತ ಕುಸನೂರ, ೨೦೦೫, ಕೆರೂರುನಾಮಾ, ಲೋಹಿಯಾ ಪ್ರಕಾಶನ, ಬಳ್ಳಾರಿ.

೧೦. ಚೆನ್ನಣ್ಣ ವಾಲೀಕಾರ, ೧೯೭೫, ಬೆಳ್ಳ, ಸುಮನಸಾ ವಿಚಾರ ವೇದಿಕೆ, ಚೊಕ್ಕಾಡಿ, ದಕ್ಷಿಣ ಕನ್ನಡ ಜಿಲ್ಲೆ.

೧೧. ಚೆನ್ನಣ್ಣ ವಾಲೀಕಾರ, ೨೦೦೩, ಸಮಗ್ರ ಕಥಾ ಸಂಪುಟ ದಲಿತ ಬಂಡಾಯ ಸಾಹಿತ್ಯ ಪ್ರಕಾಶನ ಕೇಂದ್ರ, ಗುಲಬರ್ಗಾ.

೧೨. ಚೆನ್ನಣ್ಣ ವಾಲೀಕಾರ, ೨೦೦೨, ಸಮಗ್ರ ಕಾದಂಬರಿ ಸಂಪುಟ, ದಲಿತ ಬಂಡಾಯ ಸಾಹಿತ್ಯ ಪ್ರಕಾಶನ ಕೇಂದ್ರ, ಗುಲಬರ್ಗಾ.

೧೩. ಜಂಬಣ್ಣ ಅಮರಚಿಂತ, ೧೯೯೪, ಕುರುಮಯ್ಯ ಮತ್ತು ಅಂಕುಶದೊಡ್ಡಿ, ಮಾರ್ಕ್ಸ್ ಲೆನಿನ್ ವಿಚಾರ ಪ್ರಚಾರ ಸಮಿತಿ, ಗುಲಬರ್ಗಾ.

೧೪. ಜಯತೀರ್ಥ ರಾಜಪುರೋಹಿತ, ೧೯೬೭, ಪಾರವ್ವನ ಪಂಚಾಯತಿ, ನೃಪತುಂಗ ಪ್ರಕಾಶನ, ಕಲಬುರ್ಗಿ.

೧೫. ಜಯತೀರ್ಥ ರಾಜಪುರೋಹಿತ, ೧೯೬೭, ಪಾರವ್ವನ ಪಂಚಾಯತಿ, ನೃಪತುಂಗ ಪ್ರಕಾಶನ, ಕಲಬುರ್ಗಿ.

೧೬. ಜಯತೀರ್ಥ ರಾಜಪುರೋಹಿತ, ೧೯೬೭, ಹಾಲುಜೇನು; ಕನ್ನಡ ಸಾಹಿತ್ಯ ಸಂಘ, ಕಲಬುರ್ಗಿ.

೧೭. ಜಯತೀರ್ಥ ರಾಜಪುರೋಹಿತ, ೧೯೬೯, ರೋಹಿಣಿ, ಪ್ರಕಾಶ ಪ್ರಕಾಶನ, ಬೆಂಗಳೂರು;.

೧೮. ಜಯತೀರ್ಥ ರಾಜಪುರೋಹಿತ, ೧೯೭೪, ಮೌಲ್ಯಗಳು, ಶ್ರೀ ಪ್ರಕಾಶನ, ಬೆಂಗಳೂರು.

೧೯. ಜಯತೀರ್ಥ ರಾಜಪುರೋಹಿತ, ೧೯೮೩, ಸುಳಿಗಾಳಿ, ವಿಶ್ವಕನ್ನಡ ಸಮ್ಮೇಳನ.

೨೦. ಭಾಲಚಂದ್ರ ಜಯಶೆಟ್ಟಿ, ೧೯೯೩, ಮಿರ್ಜಿಬಾಬಾ ಮತ್ತು ಇತರ ಕಥೆಗಳು, ಬಸವ ಪ್ರಕಾಶನ, ಗುಲಬರ್ಗಾ.

೨೧. ಮಲ್ಲಿಕಾರ್ಜುನ ಹಿರೇಮಠ, ೨೦೦೦; ಅಮೀನಪುರದ ಸಂತೆ, ಚೈತನ್ಯ ಪ್ರಕಾಶನ.

೨೨. ಮಲ್ಲಿಕಾರ್ಜುನ ಹಿರೇಮಠ, ೨೦೦೧, ಹವನ, ಆನಂದಕಂದ ಗ್ರಂಥಮಾಲೆ.

೨೩. ರಾಜಶೇಖರ ನೀರಮಾನ್ವಿ, ೧೯೯೮, ಹಂಗಿನರಮನೆಯ ಹೊರಗೆ, ಲೋಹಿಯಾ ಪ್ರಕಾಶನ, ಬಳ್ಳಾರಿ.

೨೪. ಲಲಿತಾ ದೇಮಶೆಟ್ಟಿ, ೧೯೮೬, ಮಾತಂಗಿ ಮತ್ತು ಇತರ ಕಥೆಗಳು, ಮಮತಾ ಪ್ರಕಾಶನ, ಕೊಪ್ಪಳ.

೨೫. ಲಲಿತಾನಾಯಕ್. ಬಿ.ಟಿ., ೧೯೮೯; ಹಬ್ಬ ಮತ್ತು ಬಲಿ; ಲಂಬಾಣಿ ಒಕ್ಕೂಟ ಪ್ರಕಾಶನ; ಬೆಂಗಳೂರು.

೨೬. ಲಲಿತಾನಾಯಕ್. ಬಿ.ಟಿ., ೧೯೯೧, ಗತಿ; ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೨೭. ಲಲಿತಾನಾಯಕ್. ಬಿ.ಟಿ., ೧೯೯೫; ನೆಲೆ ಬೆಲೆ, ಆಶಾ ಸಾಹಿತ್ಯ ಪ್ರಕಾಶನ, ಬೆಂಗಳೂರು.

೨೮. ವೀರಭದ್ರಪ್ಪ. ಕುಂ., ೧೯೯೯, ಕಪ್ಪು, ಸಂವಹನ ಪ್ರಕಾಶನ, ಮೈಸೂರು.

೨೯. ವೀರಭದ್ರಪ್ಪ. ಕುಂ., ೨೦೦೪, ಬರಿ ಕಥೆಯಲ್ಲೋ ಅಣ್ಣಾ..., ಸಿವಿಜಿ ಪಬ್ಲಿಕೇಶನ್ಸ್, ಬೆಂಗಳೂರು.

೩೦. ವೀರಭದ್ರಪ್ಪ. ಕುಂ., ೨೦೦೫, ಅರಮನೆ; ಸಪ್ನ ಬುಕ್‌ಹೌಸ್; ಬೆಂಗಳೂರು.

೩೧. ವೀರಭದ್ರಪ್ಪ. ಕುಂ., ೨೦೦೭, ಕೂಳೆ, ಸುಮುಖ ಪ್ರಕಾಶನ, ಬೆಂಗಳೂರು.

೩೨. ಶಾಂತರಸ; ೧೯೯೮, ಸಣ್ಣಗೌಡಸಾನಿ; ನೃಪತುಂಗ ಅಧ್ಯಯನ ಸಂಸ್ಥೆ, ಸೇಡಂ.

೩೩. ಶಾಂತರಸ; ೧೯೯೭, ಶಾಂತರಸರ ಸಮಗ್ರ ಕತೆಗಳು, ಪ್ರಿಯದರ್ಶಿನಿ ಪ್ರಕಾಶನ ಬೆಂಗಳೂರು.

೩೪. ಶ್ರೀಕಾಂತ ಪಾಟೀಲ, ೧೯೯೭, ಬೆಂಕಿ ಮರೆಯ ತಂಪು, ಶಶಿ ಪ್ರಕಾಶನ, ಬಟಗೇರಾ.

## ೨. ಆನುಷಂಗಿಕ ಆಕರಗಳು

### (i). ಪ್ರಕಟಿತ ಕೃತಿಗಳು

೧. ಅಮರೇಶ ನುಗಡೋಣಿ, ೨೦೦೩, ಹೈದರಾಬಾದು ಕರ್ನಾಟಕದ ಹಾಡು-ಪಾಡು, ಪ್ರಸಾರಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨. ಅಲ್ಲಮಪ್ರಭು ಬೆಟ್ಟದೂರ, ಪಾಟೀಲ್ ಹೆಚ್.ಎಸ್., ೧೯೯೩, ತಿರುಳ್ಗನ್ನಡ, ೭೨ನೇ ಕನ್ನಡ ಸಾಹಿತ್ಯ ಸಮ್ಮೇಳನ ಕೊಪ್ಪಳ.

೩. ಅಲ್ಲಮಪ್ರಭು ಬೆಟ್ಟದೂರ, ಪಾಟೀಲ್ ಹೆಚ್.ಎಸ್., ೧೯೯೯, ವಿಮೋಚನೆ, ಜಿಲ್ಲಾ ಆಡಳಿತ, ಕೊಪ್ಪಳ.

೪. ಆಲೂರು ವೆಂಕಟರಾಯ, ೧೯೯೯, ಕರ್ನಾಟಕತ್ವದ ವಿಕಾಸ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೫. ಕಪಟರಾಳ ಕೃಷ್ಣರಾವ್, ೧೯೭೦, ಕರ್ನಾಟಕ ಸಂಸ್ಕೃತಿಯ ಸಂಶೋಧನೆ, ಉಷಾ ಸಾಹಿತ್ಯ ಮಾಲೆ, ಮೈಸೂರು.

೬. ಕಲಬುರ್ಗಿ ಎಂ.ಎಂ., ೧೯೮೯, ನಾಮವಿಜ್ಞಾನ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೭. ಖಂಡೋಬಾ ಪಿ.ಕೆ., ೧೯೯೧, ಕರ್ನಾಟಕದ ಲಂಬಾಣಿಗಳು ಒಂದು ಸಾಂಸ್ಕೃತಿಕ ಅಧ್ಯಯನ, ದಿ.ತೇಜಸಿಂಗ್ ರಾಠೋಡ್ ಮೆಮೋರಿಯಲ್ ಟ್ರಸ್ಟ್, ಗುಲಬರ್ಗಾ.

೭. ಖಂಡೋಬಾ ಪಿ.ಕೆ., ೨೦೦೦, ಕರ್ನಾಟಕ ಬುಡಕಟ್ಟಿನ ಲಂಬಾಣಿಗಳು, ಶ್ರೀ ಸಿದ್ಧಲಿಂಗೇಶ್ವರ ಬುಕ್ ಡಿಪೊ, ಗುಲಬರ್ಗಾ.

೮. ಗಿರಡ್ಡಿ ಗೋವಿಂದರಾಜು, ೧೯೮೦, ಸಾತತ್ಯ, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು.

೯. ಗುರುಪಾದ ಮರಿಗುದ್ದಿ (ಸಂ), ೨೦೦೪, ಕುವೆಂಪು ಕಾದಂಬರಿಗಳು (ವಿಮರ್ಶಾ ಲೇಖನಗಳ ಸಂಕಲನ), ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೧೦. ಗೋಪಾಲರಾವ್ ಎಚ್.ಎಸ್., ೧೯೯೬, ಕರ್ನಾಟಕ ಏಕೀಕರಣ ಇತಿಹಾಸ, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೧೧. ಚಂದ್ರಶೇಖರ ಎಸ್., ೨೦೦೨, ಆಧುನಿಕ ಕರ್ನಾಟಕದ ಚಳುವಳಿಗಳು, ನಮ್ಮ ಪ್ರಕಾಶನ ಬಿಳಿಗೆರೆ.

೧೨. ಚಿನ್ನಸ್ವಾಮಿ ಸೋಸಲೆ ಎನ್., ೧೯೯೯, ಗಡಿ ಚಳುವಳಿಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೩. ಜಾಗಿದಾರ ಆರ್.ಜಿ., ವಿಠಲರಾವ ಲಿಂಗಸೂಗೂರು, ೧೯೪೧, ಹೈದರಾಬಾದ ಕರ್ನಾಟಕ, ಪ್ರೇಮನಗರ, ಹೈದರಾಬಾದ.

೧೪. ನಾಗಭೂಷಣಸ್ವಾಮಿ ಓ.ಎಲ್., ೧೯೮೩, ವಿಮರ್ಶೆಯ ಪರಿಭಾಷೆ, ಪರಿಸರ ಸಾಹಿತ್ಯ ಪ್ರಕಾಶನ, ಶಿವಮೊಗ್ಗ.

೧೫. ನಾಗರಾಜ ಡಿ.ಆರ್., ೨೦೦೬, ಸಾಹಿತ್ಯ ಕಥನ, ಅಕ್ಷರ ಪ್ರಕಾಶ, ಹೆಗ್ಗೋಡು, ಸಾಗರ.

೧೬. ನಾರಾಯಣ ಕೆ.ವಿ., ೨೦೦೭, ಕನ್ನಡ ಜಗತ್ತು ಅರ್ಧಶತಮಾನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೭. ಪುರುಷೋತ್ತಮ ಬಿಳಿಮಲೆ (ಸಂ), ೧೯೯೫, ಸಿರಿ, ಕಲಾ ಗಂಗೋತ್ರಿ ಅಮೃತ ಸೋಮೇಶ್ವರ ಅಭಿನಂದನ ಸಮಿತಿ, ಸೋಮೇಶ್ವರ ಉಚ್ಚಿಲ, ಮಂಗಳೂರು.

೧೮. ಬಸವರಾಜ ಕಲ್ಗುಡಿ, ೧೯೯೭, ಅನುಭಾವ : ಸಾಂಸ್ಕೃತಿಕ ಸಮಸ್ಯೆ ಮತ್ತು ಹುಡುಕಾಟ, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು.

೧೯. ಬಸವರಾಜ ಪೋಲಿಸ್ ಪಾಟೀಲ, ೨೦೦೨, ಬಿಡುಗಡೆ, ಅಮರ ಪ್ರಕಾಶನ, ಗುಲಬರ್ಗಾ.

೨೦. ಭಾಲಚಂದ್ರ ಜಯಶೆಟ್ಟಿ, ೧೯೯೮, ಸಮ್ಮೇಳನಾಧ್ಯಕ್ಷರ ಭಾಷಣ, ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು ಬೀದರ.

೨೧. ಮಹಾದೇವಯ್ಯ ಪಿ., ೨೦೦೪, ಕನ್ನಡ ಮತ್ತು ಜನತೆ, ಸಾರಾ ಎಂಟರ್ ಪ್ರೈಸಸ್, ಮೈಸೂರು.

೨೨. ಮಹಾದೇವಯ್ಯ ಪಿ., ೨೦೦೬, ದಲಿತರು ಭಾಷೆ ಮತ್ತು ಸಮಾಜ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೩. ಮಹಾಬಲೇಶ್ವರಪ್ಪ ಬಿ.ಸಿ., ೧೯೯೪, ಹೈದರಾಬಾದ ಕರ್ನಾಟಕ ಸ್ವಾತಂತ್ರ್ಯ ಚಳುವಳಿ, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

೨೪. ಮುಗಳಿ ರ.ಶ್ರೀ., ೧೯೯೩, ಕನ್ನಡ ಸಾಹಿತ್ಯ ಚರಿತ್ರೆ, ಗೀತಾ ಬುಕ್‌ಹೌಸ್, ಬೆಂಗಳೂರು.

೨೫. ರಂಗನಾಥ ದಿವಾಕರ (ಸಂ), ೧೯೫೩, ಕರ್ನಾಟಕ ಏಕೀಕರಣ ಕಥೆ, ಲೋಕಶಿಕ್ಷಣ ಟ್ರಸ್ಟ್, ಹುಬ್ಬಳ್ಳಿ.

೨೬. ರಹಮತ್ ತರೀಕೆರೆ, ೧೯೯೩, ಪ್ರತಿಸಂಸ್ಕೃತಿ, ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು.

೨೭. ರಹಮತ್ ತರೀಕೆರೆ, ೧೯೯೯, ಬಹುಭಾಷಿಕ ಸಂಸ್ಕೃತಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೮. ರಾಘವೇಂದ್ರರಾವ್ ಎಚ್.ಎಸ್., ೧೯೯೨. ಕನ್ನಡ ಸಾಹಿತ್ಯ ಮತ್ತು ಭಾಷಾಶಾಸ್ತ್ರ (ಅನ್ಯಜ್ಞಾನಶಿಸ್ತುಗಳ ಮೂಲಕ ಕನ್ನಡ ಸಾಹಿತ್ಯ, ಸಂ. ಕೆ.ವಿ. ನಾರಾಯಣ, ಬಿ. ಕೃಷ್ಣಮೂರ್ತಿ), ಕರ್ನಾಟ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೨೯. ರಾಘವೇಂದ್ರರಾವ್ ಎಚ್.ಎಸ್. (ಸಂ), ೨೦೦೧, ಶತಮಾನದ ಸಾಹಿತ್ಯ ವಿಮರ್ಶೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೩೦. ರಾಜೇಂದ್ರ ಚೆನ್ನಿ, ೧೯೯೯, ದೇಶೀವಾದ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೩೧. ವಿರೂಪಾಕ್ಷಪ್ಪ ಬಿ., ೨೦೦೦, ನಿಜಾಂ ಕಾಲದ ಶಿಕ್ಷಣ ಪದ್ಧತಿ, ನವೋದಯ ಪ್ರಕಾಶನ, ಬೆಂಗಳೂರು.

೩೨. ವೀರಣ್ಣ ದಂಡೆ, ೧೯೮೫, ಆಯ್ದ ಗಾದೆಗಳು ಹಾಗೂ ಒಗಟುಗಳು, ಮೂಡಲ ಪ್ರಕಾಶನ.

೩೩. ವೀರೇಂದ್ರ ಸಿಂಪಿ. (ಸಂ), ೧೯೯೯, ಬೀದರ ಜಿಲ್ಲಾ ಸ್ವಾತಂತ್ರ್ಯ ಹೋರಾಟಗಾರರು, ಜಿಲ್ಲಾ ಆಡಳಿತ, ಬೀದರ.

೩೪. ವೈಜನಾಥ ಪಾಟೀಲ್, ೨೦೦೬, ಹೈದರಾಬಾದ್ ಕರ್ನಾಟಕದ ವರ್ತಮಾನದ ತಲ್ಲಣಗಳು.

೩೫. ಶಂಕರನಾರಾಯಣ ಎನ್.ಪಿ., ೧೯೯೬, ಸ್ವಾತಂತ್ರ್ಯ ಗಂಗೆಯ ಸಾವಿರ ತೊರೆಗಳು, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೩೬. ಶಂಕರಭಟ್ಟ ಡಿ.ಎನ್., ೧೯೯೦, ಕನ್ನಡ ಶಬ್ದ ರಚನೆ, ಕ್ರೈಸ್ಟ್ ಕಾಲೇಜು, ಬೆಂಗಳೂರು.

೩೭. ಶಾಂತರಸ, ೧೯೯೨, ಸಮ್ಮೇಳನಾಧ್ಯಕ್ಷರ ಭಾಷಣ, ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ರಾಯಚೂರು.

೩೮. ಶಿವರಾಮ ಕಾಡನಕುಪ್ಪೆ, ೧೯೯೯, ಸಾಮಾಜಿಕ ನೆಲೆ, ಕುವೆಂಪು ಕಾದಂಬರಿಗಳಲ್ಲಿ ಪ್ರಾದೇಶಿಕತೆ.

೩೯. ಶಿವರುದ್ರ ಜಿ.ಎಸ್., ೧೯೮೩, ಕಾವ್ಯಾರ್ಥ ಚಿಂತನೆ, ಶಾರದಾ ಪ್ರಕಾಶನ, ಬೆಂಗಳೂರು.

೪೦. ಶಿವರುದ್ರಪ್ಪ (ಸಂ), ೧೯೯೧, ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ ಸಂಪುಟ ೬, ಪ್ರಸಾರಾಂಗ, ಜ್ಞಾನಭಾರತಿ, ಬೆಂಗಳೂರು.

೪೧. ಶೇಷಾದ್ರಿ ಬಿ., ೧೯೯೮, ಬಳ್ಳಾರಿ ಜಿಲ್ಲೆಯಲ್ಲಿ ಕೈಗಾರಿಕೀಕರಣ ಮತ್ತು ಜನಾಂದೋಲನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೨. ಶ್ರೀನಿವಾಸ ರಿತ್ತಿ ಮತ್ತು ಸುರೇಂದ್ರದಾನಿ (ಸಂ), ೨೦೦೭, ಕರ್ನಾಟಕ ಕುಲಪುರೋಹಿತ ಆಲೂರು ವೆಂಕಟರಾಯ ಸಮಗ್ರ ಕೃತಿಗಳು, ಆಲೂರ ವೆಂಕಟರಾಯ ಪ್ರತಿಷ್ಠಾನ, ಧಾರವಾಡ.

೪೩. ಶ್ರೀನಿವಾಸ ಹಾವನೂರು, ೨೦೦೦, ಹೊಸಗನ್ನಡದ ಅರುಣೋದಯ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೪೪. ಸಂಗಮೇಶ ಸವದತ್ತಿ ಮಠ, ೧೯೭೬, ಕನ್ನಡ ಭಾಷಾ ವ್ಯಾಸಂಗ, ರೂಪರಶ್ಮಿ ಪ್ರಕಾಶ, ಗುಲಬರ್ಗಾ.

೪೫. ಸಂಗಮೇಶ ಸವದತ್ತಿಮಠ, ೧೯೯೮, ಕನ್ನಡ ಭಾಷಾ ಪ್ರಭೇದಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೬. ಸುರೇಂದ್ರನಾಥ ಮಿಣಜಿಗಿ, ೨೦೦೦, ಸೃಜನಕ್ರಿಯೆ ಮತ್ತು ಸಂವೇದನೆ, ಅಂಕಿತ ಪುಸ್ತಕ, ಬೆಂಗಳೂರು.

೪೭. ಸೂರ್ಯನಾಥ ಕಾಮತ್ (ಸಂ), ೧೯೯೮, ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೪೮. ಹನುಮಂತಯ್ಯ ಎಲ್. (ಸಂ), ೧೯೯೬, ದಲಿತ ಕಥನ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಮತ್ತು ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

## (ii). ಅಪ್ರಕಟಿತ ಸಂಶೋಧನ ಪ್ರಬಂಧಗಳು

೧. ಅಜ್ಜಯ್ಯ ಸಿ., ೨೦೦೬, ಹೈದರಾಬಾದ್ ಅಲೆಮಾರಿಗಳ ಸಮಾಜೋ-ಆರ್ಥಿಕ ವ್ಯವಸ್ಥೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨. ಅಮರೇಶ ನುಗಡೋಣಿ, ೧೯೯೯, ಹೈದರಾಬಾದ್ ಕರ್ನಾಟಕದ ಸಾಹಿತ್ಯದಲ್ಲಿ ಸಾಮಾಜಿಕ ವಾಸ್ತವ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩. ಉಮಾದೇವಿ ಎಸ್. ಒಡೆಯರ್, ೨೦೦೯, ಗ್ರಾಮೀಣ ಮಹಿಳೆಯ ಸಬಲೀಕರಣ : ಒಂದು ಸ್ತ್ರೀವಾದಿ ಅಧ್ಯಯನ (ಹೈದರಾಬಾದ್ ಕರ್ನಾಟಕವನ್ನು ಅನುಲಕ್ಷಿಸಿ), ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪. ಉಮೇಶ ಗುರಿಕಾರ, ೨೦೦೯, ಹೈದರಾಬಾದ್ ಕರ್ನಾಟಕದ ಕುರುಬರ ಚಾರಿತ್ರಿಕ ಅಧ್ಯಯನ; ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫. ಐಶ್ವರಿ ಎಸ್., ೧೯೯೯, ಹೈದರಾಬಾದ್ ಕರ್ನಾಟಕದ ಕನ್ನಡ ಲೇಖಕಿಯರ ಸಂಶೋಧನಾ ಕೃತಿಗಳು, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

೬. ಕರಿಯಪ್ಪ.ಜೆ., ೨೦೦೪, ಬಳ್ಳಾರಿ ಜಿಲ್ಲಾ ಅವಧೂತರು, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೭. ಕಾಶಪ್ಪ ಸಾಯಪ್ಪ ಬುದ್ಧಾ, ೨೦೦೫, ಹೈದರಾಬಾದ್ ಕರ್ನಾಟಕದ ಪ್ರದೇಶ ಮಾದಿಗರು : ಒಂದು ಅಧ್ಯಯನ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

೮. ಗೋವಿಂದ; ೨೦೦೨, ಬಳ್ಳಾರಿ ಜಿಲ್ಲಾ ಜನಪದ ದೈವಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೯. ಚಂದ್ರಭಾಗ ಬಿದರಿ, ೨೦೦೭, ಹೈದರಾಬಾದ್ ಕರ್ನಾಟಕದ ಸಾಹಿತ್ಯದಲ್ಲಿ ಮಹಿಳಾ ಬದುಕಿನ ಪ್ರತಿನಿಧೀಕರಣ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೦. ಚೇತನಕುಮಾರ ಆರ್., ೧೯೯೩, ಬಳ್ಳಾರಿ ಜಿಲ್ಲೆಯ ಜನಪದ ವೃತ್ತಿಗಾಯಕರು, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

೧೧. ಜಗನ್ನಾಥ್ ಎಚ್., ೧೯೯೫, ಹೈದರಾಬಾದ್ ಕರ್ನಾಟಕದ ಜಾತ್ರೆಗಳು : ಒಂದು ಅಧ್ಯಯನ; ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

೧೨. ಜಯಶ್ರೀ ಗಾಯಕ್ವಾಡ್, ೨೦೦೨, ಹೈದರಾಬಾದ್ ಕರ್ನಾಟಕದ ಹೆಣ್ಣುಮಕ್ಕಳ ಹಾಡುಗಳು : ಒಂದು ಅಧ್ಯಯನ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

೧೩. ದುರ್ಗದಾಸ್ ಕೆ.ಆರ್., ೧೯೮೯, ಬಳ್ಳಾರಿ ಜಿಲ್ಲೆಯ ಬಯಲಾಟಗಳು., ಗುಲಬರ್ಗಾ ವಿಶ್ವವಿದ್ಯಾಲಯ., ಗುಲಬರ್ಗಾ.

೧೪. ದ್ಯಾಮಪ್ಪ ಕಿನ್ನಾಳ, ೨೦೦೧, ಬಳ್ಳಾರಿ ಜಿಲ್ಲೆಯ ರಂಗಭೂಮಿ ಒಂದು ಅಧ್ಯಯನ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

೧೫. ನಾಗರಾಜ ಹೀರಾ., ೨೦೦೨, ರಾಯಚೂರು ಪರಿಸರದ ಶರಣ ಸಾಹಿತ್ಯ : ಒಂದು ಅಧ್ಯಯನ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

೧೬. ನಾಗೇಂದ್ರ ಮಸೂತಿ ಎಸ್., ೧೯೯೩, ಕಲಬುರ್ಗಿ ಕನ್ನಡ ವರ್ಣನಾತ್ಮಕ ವ್ಯಾಖ್ಯಾನ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

೧೭. ಪಾಟೀಲ್ ಬಿ.ಎಸ್., ೧೯೮೪, ಹೈದರಾಬಾದ್ ಕರ್ನಾಟಕದ ಜಾನಪದ ಸಾಹಿತ್ಯ : ಒಂದು ಅಧ್ಯಯನ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೧೮. ಪೋಲೀಸ್ ಪಾಟೀಲ್.ಬಿ.ಎಸ್., ೧೯೮೪, ಹೈದರಾಬಾದ್ ಕರ್ನಾಟಕದ ಜನಪದ ಸಾಹಿತ್ಯ : ಒಂದು ಸಾಂಸ್ಕೃತಿಕ ಅಧ್ಯಯನ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

೧೯. ಪ್ರಹ್ಲಾದ ರೆಡ್ಡಿ.ಬಿ., ೧೯೯೯, ಹೈದರಾಬಾದ್ ಕರ್ನಾಟಕದ ಶಿಲಾ ಶಾಸನಗಳು : ಒಂದು ಅಧ್ಯಯನ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

೨೦. ಬಸವರಾಜ ವಿ.ಖೋತ, ೧೯೯೮, ದೇವೇಂದ್ರಕುಮಾರ ಹಕಾರಿ ಮತ್ತು ಅವರ ಸಾಹಿತ್ಯ, ಗುಲಬರ್ಗಾ ವಿಶ್ವವಿದ್ಯಾಲಯ, ಹಂಪಿ.

೨೧. ಬೈಜನಾಥ ಭಂಡೆ, ೧೯೯೨, ಬೀದರ ಜಿಲ್ಲೆಯ ಸ್ಥಳನಾಮಗಳು, ಗುಲಬರ್ಗಾ ವಿಶ್ವವಿದ್ಯಾಲಯ.

೨೨. ಭಜಂತ್ರಿ.ಎಸ್.ಎಸ್., ಗ್ರಾಮಾಯಣ ಕಾದಂಬರಿಯಲ್ಲಿ ಪ್ರಾದೇಶಿಕತೆ, ಮುಂಬಯಿ ವಿಶ್ವವಿದ್ಯಾಲಯ (ಎಂ.ಫಿಲ್. ಅಧ್ಯಯನ).

೨೩. ಭಾಗ್ಯಲಕ್ಷ್ಮಿ, ೨೦೦೪, ಬಳ್ಳಾರಿ ಪರಿಸರದ ಕನ್ನಡ-ತೆಲುಗು ದ್ವಿಭಾಷಿಕತೆ-ಸಮಾಜೋ-ಭಾಷಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೪. ಮಧುಸೂದನಾಚಾರ್ಯ ಜೋಶಿ, ೧೯೯೭, ಹೈದರಾಬಾದ್ ಕರ್ನಾಟಕದ ಬಂಡಾಯ ಸಾಹಿತ್ಯ ಪರಂಪರೆ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

೨೫. ಮಲ್ಲಿಕಾರ್ಜುನ.ಹೆಚ್., ೨೦೦೭, ಪ್ರಾದೇಶಿಕತೆಯ ನೆಲೆಯಲ್ಲಿ ಬಳ್ಳಾರಿ ಜಿಲ್ಲೆಯ ಕಥನ ಸಾಹಿತ್ಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೬. ಯಶೋಧಶಾಸ್ತ್ರಿ, ೧೯೯೫, ಗುಲಬರ್ಗಾ ಜಿಲ್ಲೆಯ ಸಂಪ್ರದಾಯದ ಹಾಡುಗಳು, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

೨೭. ರಮೇಶ ಮೂಲಗಿ, ೨೦೦೪, ಹೈದರಾಬಾದ್ ಕರ್ನಾಟಕದ ವೀರಶೈವ ಮಠಗಳು : ಒಂದು ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೮. ವಿಜಯಲಕ್ಷ್ಮೀ ಮಂಗಳಮೂರ್ತಿ, ೧೯೯೬, ರಾಯಚೂರು ಜಿಲ್ಲೆಯ ಹರಿದಾಸ ಸಾಹಿತ್ಯ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

೨೯. ವಿರಕ್ತಮಠ ಎಸ್.ಜಿ., ೧೯೭೦, ಗುಲಬರ್ಗಾ ಜಿಲ್ಲೆಯ ಕೃಷಿ ಮತ್ತು ಪಾರಿಭಾಷಿಕ ಕನ್ನಡ ಪದಗಳು : ಒಂದು ಭಾಷಿಕ ಮತ್ತು ಸಾಂಸ್ಕೃತಿಕ ಅಧ್ಯಯನ, ಮದ್ರಾಸ್ ವಿಶ್ವವಿದ್ಯಾಲಯ, ಮದ್ರಾಸ್.

೩೦ ವೀರಭದ್ರ ಶರ್ಮ ಕೆ.ಎಂ., ೧೯೯೪, ಬಳ್ಳಾರಿ ಜಿಲ್ಲೆಯ ಸ್ಥಳನಾಮಗಳು, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

೩೧. ಶಿವರಾಜ ಕುಲಕರ್ಣಿ, ೧೯೯೭, ಹೈದರಾಬಾದ್ ಕರ್ನಾಟಕದ ಕವಿಕಾವ್ಯ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

೩೨. ಶ್ರೀನಿವಾಸ ಬೇಂದ್ರೆ, ೨೦೦೪, ಬೀದರ ಕನ್ನಡ ಸಾಮಾಜಿಕ ಹಾಗೂ ಪ್ರಾದೇಶಿಕ ಭೇದಗಳು', ಕನ್ನಡ ವಿಶ್ವವಿದ್ಯಾಲಯ, ಹಂಪಿ..

೩೩. ಸತ್ಯನಾರಾಯಣ ಭಟ್, ೧೯೯೩, ಕನ್ನಡ ಕಾದಂಬರಿಗಳಲ್ಲಿ ಪ್ರಾದೇಶಿಕತೆ, ಮಧುರೈ ಕಾಮರಾಜ ವಿಶ್ವವಿದ್ಯಾಲಯ, ಮಧುರೈ.

೩೪. ಸುಚಿತಾನಂದ ಕೆ., ೨೦೦೨, ಬೀದರ ಜಿಲ್ಲೆಯ ಬೇಡ ಬುಡಕಟ್ಟು ಒಂದು ಅರ್ಥಶಾಸ್ತ್ರೀಯ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೫. ಸುಜಾತ ಎ., ೨೦೦೫, ಬಳ್ಳಾರಿ ಜಿಲ್ಲೆಯ ರಂಗನಟಿಯರ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೬. ಸುಜಾತ ಎಸ್.ಬಿ., ೨೦೦೧, ಕನ್ನಡದ ಮೂರು ಪ್ರಾತಿನಿಧಿಕ ಕಾದಂಬರಿಗಳಲ್ಲಿ ಪ್ರಾದೇಶಿಕತೆಯ ಸ್ವರೂಪ, ಕುವೆಂಪು ವಿಶ್ವವಿದ್ಯಾಲಯ, ಶಿವಮೊಗ್ಗ.

೩೭. ಸುಜಾತ ಮಲ್ಲನಗೌಡ, ೨೦೦೧, ರಾಯಚೂರು ಹಾಗೂ ಕೊಪ್ಪಳ ಜಿಲ್ಲೆಗಳ ಕೋಟೆಗಳು ಒಂದು ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೮. ಸುಧೀರ ಡಿ.ಪುಲೆ, ೨೦೦೨, ಗುಲಬರ್ಗಾ ನಗರದ ಅಂತರ್ಜಾತಿ ವಿವಾಹಿತರು ಒಂದು ಸಮಾಜಶಾಸ್ತ್ರೀಯ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೯. ಸೋಮನಾಥ ನುಚ್ಚಾ, ೧೯೯೩, ಬೀದರ ಜಿಲ್ಲೆಯ ಕೋಲಾಟ ಒಂದು ಅಧ್ಯಯನ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

೪೦. ಹಾವಗಿರಾವ್ ಕಳಸೆ, ೧೯೯೬, ಕನ್ನಡ ಸಾಹಿತ್ಯಕ್ಕೆ ಬೀದರ ಜಿಲ್ಲೆಯ ಕೊಡುಗೆ ಒಂದು ಅಧ್ಯಯನ, ಉಸ್ಮಾನಿಯಾ ವಿಶ್ವವಿದ್ಯಾಲಯ.

**ಇಂಗ್ಲೀಷ್ ಗ್ರಂಥಗಳು**

1. Encyclolpedia of Social science, Vol.13. 1969; Binahamton eduaction, Newyork.
2. Mahadevan.R., 1976, Gulbarga Kannda; Poona.
3. Sajal Basu, 1992, Regional Movements; Indian institute of advanced study, Manohar Publications, New Delhi.
4. Sajal Basu, 2005, Regionalism, ethnicity and Left Politics, Rawat Publications, Mumbai.

•••

